# ವಿವೇಕಾಭ್ಯುದಯ



## ವಿದ್ಯಾನಂದ - ಷಷ್ಟ್ಯಬ್ದಿ
## ವಿನಯಾಂಜಲಿ - ವಿಶೇಷಾಂಕ











T.K.Acharya



ಪ. ಪೂ. ಏಲಾಚಾರ್ಯ ವಿದ್ಯಾನಂದ ಮುನಿಗಳು ದೆಹಲಿಯಲ್ಲಿ ಕೇಶಲೋಚನ ಮಾಡುತ್ತಿರುವ ಒಂದು ದೃಶ್ಯ. ಮುನಿಗಳ ಸಾನ್ನಿಧ್ಯದಲ್ಲಿ ದಿಲ್ಲಿಯ ಶ್ರೀಪ್ರಕಾಶ್ ಚಂದ್‌ಜೀಯವರು ಕುಳಿತಿರುವುದನ್ನು ಕಾಣಬಹುದು, ಹಿಂದೆ ಮುಂದೆ ಇತರರೂ ಕುಳಿತಿದ್ದಾರೆ.






ಕರ್ನಾಟಕದ ಸರ್ವಾಧಿಕ ಪ್ರಾಚೀನ ಜೈನಧರ್ಮ ಪ್ರಸಾರಕ
ಮಾಸಿಕ ಪತ್ರ

# 'ವಿವೇಕಾಭ್ಯುದಯ'

(ವಿದ್ಯಾನಂದ–ಷಷ್ಠ್ಯಬ್ಧಿ–ವಿನಯಾಂಜಲಿ–ವಿಶೇಷಾಂಕ)

[ಮಂಡಲ ೪೭] [ಕಿರಣ: ಮಾರ್ಚ್–ಎಪ್ರಿಲ್ ೧, ೧೯೮೫]

ದ

ಪ್ರಸ್ತುತ ವಿಶೇಷಾಂಕವು

ಅಹಿಂಸಾ ಮೂರ್ತಿ, ಮಹಾವೀರವಾಣಿಯ ಸಮರ್ಥ ಉದ್ಬೋಧಕ, ಮಹಾ ಮೇಧಾವಿ, ಜ್ಞಾನಚಕ್ಷು.

ಭಾರತೀಯ ಸಂಸ್ಕೃತಿಯ ಜೀವಂತ ಪ್ರತೀಕ, ವಿಶ್ವಧರ್ಮದ ಪ್ರಭಾವಿ ಪ್ರವರ್ತಕ, ಪರಮ ವಾಗ್ಮಿ, ಬ್ರಹ್ಮತೇಜಸ್ವಿ, ಸಂತಶಿರೋಮಣಿ, ಸ್ವರ್ಣಪುರುಷ, ಯುಗ ಪ್ರವರ್ತಕ, ಅಧ್ಯಾತ್ಮಯೋಗಿ, ಭಾರತ ಜ್ಯೋತಿ ಮಹರ್ಷಿ, ವಿಶ್ವಕಲ್ಯಾಣಾಕಾಂಕ್ಷಿ, ಸ್ವಾತ್ಮಾನುಸಂಧಾನ ತತ್ಪರ, ರತ್ನತ್ರಯ ಮೂರ್ತಿ, ಮುನಿಪುಂಗವ

ಸಿದ್ಧಾಂತ ಚಕ್ರವರ್ತಿ
ಪರಮ ಪೂಜ್ಯ ಏಲಾಚಾರ್ಯ ಮುನಿಶ್ರೀ
ವಿದ್ಯಾನಂದ ಮಹಾರಾಜರವರ
ಕರಕಮಲಗಳಲ್ಲಿ
ಶ್ರದ್ಧಾ ಭಕ್ತಿ ಪೂರ್ವಕವಾಗಿ ಸಾದರ
ಸಮರ್ಪಿಸಲಾಗಿದೆ.

'ಜೀವೇಮ ಶರದ : ಶತಮ್ ಪಶ್ಯೇಮ ಶರದ : ಶತಮ್'




ॐ


कर्नाटक का सर्वाधिक प्राचीन जैनधर्म प्रसारक
मासिक पत्र


# 'विवेकाभ्युदय'

## (विद्यानन्द — षष्ठिपूर्ति — विनयांजलि — विशेषांक)


[वर्ष ४७] [अंक: मार्च-अप्रेल १, १९८५]


का

: प्रस्तुत विशेषांक :

अहिंसामूर्ति, महावीरवाणी का समर्थ उद्‌बोधक, महामेधावी, ज्ञानचसु,
भारतीय संस्कृति का जीवंत प्रतीक, विश्वधर्म का प्रभावी
प्रवर्तक, परमवाग्मी, ब्रह्मतेजस्वी, सन्तशिरोमणि, स्वर्णपुरुष,
युगप्रवर्तक, अध्यात्मयोगी, भारतज्योतिमहर्षी,
विश्वकल्यणाकांक्षी
स्वात्मानुसंधानतत्पर, रत्नत्रयमूर्ति, मुनिपुंगव–

सिध्दान्तचक्रवर्ती

परमपूज्य एलाचार्य मुनिश्री

# विद्यानन्द महाराज

के करकमलों में

श्रध्दाभक्तिपूर्वक सादर समर्पीत है।

**'जीवेम शरदः शतम पश्येम शरदः शतम्'**

# ವಿವೇಕಾಭ್ಯುದಯ

[ಶ್ರಮಣ ಸಂಸ್ಕೃತಿ ಪ್ರಸಾರಕ ಲೋಕಪ್ರಿಯ ಮಾಸಿಕ]

## ಪ. ಪೂ. ವಿದ್ಯಾನಂದ-ಷಷ್ಠ್ಯಬ್ಧಿ-ವಿನಯಾಂಜಲಿ-ವಿಶೇಷಾಂಕ


| | | |
|---|---|---|
| ಮಂಡಲ ೪೭ | ಮಹಾವೀರ ಶಕ ೨೫೧೧<br>ಮಾರ್ಚ್-ಏಪ್ರಿಲ್ ಸಂಯುಕ್ತಾಂಕ ೧೯೮೫ | ಕಿರಣ ೧ |


ನಿರ್ವಾಹಕರು : : ಸಂಚಾಲಕರು

ಸ್ವಾಮಿತ್ವ:

**ಜ್ಞಾನಯೋಗಿ ಸ್ವಸ್ತಿ ಶ್ರೀ ಭಟ್ಟಾರಕ ಚಾರುಕೀರ್ತಿ ಪಂಡಿತಾಚಾರ್ಯವರ್ಯ ಮಹಾಸ್ವಾಮಿಗಳವರು.**

ಶ್ರೀ ಜೈನಮಠ, ಮೂಡಬಿದ್ರಿ (ದ. ಕ.)

ಸಂಪಾದಕರು:


**ಪ್ರೊ। ಬ್ರಹ್ಮಪ್ಪ,** ಎಂ. ಎ.,
ಮೈಸೂರು

:

**ಶ್ರೀ ಬಿ. ಚಂದ್ರಯ್ಯ,** ವಿದ್ವಾನ್,
ಮೂಡಬಿದ್ರಿ


ಸಂಯೋಜನೆ:


**ಆಸ್ಥಾನ ವಿದ್ವಾನ್**
**ಶ್ರೀ ಪಂ. ಶಿಶುಪಾಲ ಶಾಸ್ತ್ರಿ**
ಹಿಂದಿರತ್ನ, ಸಂಸ್ಕೃತ ಸಾಹಿತ್ಯ ಶಿರೋಮಣಿ
ಮೂಡಬಿದ್ರಿ.

**ಶ್ರೀ ವೈ. ಉಮಾನಾಥ ಶೆಣೈ,** ಎಂ.ಎ.,
ಮೂಡಬಿದ್ರಿ.



ಶ್ರೀ ಜೈನಮಠ, ಮೂಡಬಿದ್ರಿ (ದ.ಕ. ಜಿಲ್ಲೆ)ಯ ಗೌರವಶಾಲಿ ಪ್ರಕಾಶನ

: : ಮಾರ್ಚ್-ಏಪ್ರಿಲ್ 1985-ಸಂಯುಕ್ತಾಂಕ : :

ವಿವೇಕಾಭ್ಯುದಯ: ಮಾರ್ಚ್—ಎಪ್ರಿಲ್ 1985 ಸಂಯುಕ್ತಾಂಕ

ಪ. ಪೂ. ವಿದ್ಯಾನಂದ—ಷಷ್ಠ್ಯಬ್ಧಿ—ವಿನಯಾಂಜಲಿ—ವಿಶೇಷಾಂಕ

ಶ್ರಮಣ ಸಂಸ್ಕೃತಿ ಪ್ರಸಾರಕ ಲೋಕಪ್ರಿಯ ಮಾಸಿಕ

| | | | |
|---|---|---|---|
| ವಾರ್ಷಿಕ ಚಂದಾ: | 18 ರೂ. | ಆಜೀವನ ಸದಸ್ಯರು: | 251 ರೂ. |
| ಪೋಷಕರು: | 501 ರೂ. | ಪರಮ ಸಂರಕ್ಷಕರು: | 1001 ರೂ. |
| ಪ್ರಸ್ತುತ ವಿಶೇಷಾಂಕ: | 10 ರೂ. | ಚಂದಾದಾರರಿಗೆ: | 6 ರೂ. |

ಪ್ರಕಾಶನ:

ಶ್ರೀ ಜೈನಮಠ, ಮೂಡಬಿದ್ರಿಯ ಗೌರವಶಾಲಿ ಪ್ರಕಾಶನ.

ಪ್ರಕಾಶಕರು:

ಶ್ರೀ ಎಂ. ಆದಿರಾಜ, 'ವಿವೇಕಾಭ್ಯುದಯ' ಕಾರ್ಯಾಲಯ

ಶ್ರೀ ಜೈನಮಠ, ಮೂಡಬಿದ್ರಿ-574 227 (ದ. ಕ. ಜಿಲ್ಲಾ)

ಮುದ್ರಕರು:

ಎಂ. ಜಯವರ್ಮ ಇಂದ್ರ, ಶ್ರೀ ಪದ್ಮಾಂಬಾ ಪ್ರೆಸ್,

ಮೂಡಬಿದ್ರಿ (ದ. ಕ.)

# विवेकाभ्युदय

(श्रमणसंस्कृति प्रसारक लोकप्रिय मासिकं)

## प. पू. विद्यानन्द - षष्टिपूर्ती - विनयांजलि - विशेषांक


| वर्ष 47 | महाविर शक 2511<br>मार्च – अप्रेल संयुक्तांक 1985 | अंक 1 |
|---|---|---|



निर्वाहक : : संचालक

: स्वामित्व :

**ज्ञानयोगी स्वस्ति श्री भट्टारक चारुकीर्ति पण्डिताचार्यवर्य स्वामीजी,**
**श्री जैन मठ, मूडबिद्री (द. क. जिल)**



: संपादक :

**प्रो. जी. ब्रह्मप्पा,** एम्.ए.
मैसूर

**श्री बी. चन्द्रय्य,** विद्वान्
मूडबिद्री

: संयोजन :

**आस्थानविद्वान श्री प: शिशुपाल शास्त्री,**
हिन्दीरत्न, संस्कृत साहित्य शिरोमणी, मूडबिद्री.

**श्री वें. उमानाथ शेणै,** एम्.ए.
मूडबिद्री.



श्री जैन मठ, मूडबिद्री (द. क. जिल) का
गौरवशाली प्रकाशन

**मार्च - अप्रेल 1985 : : संयुक्तांक**

विवेकाभ्युदय : मार्च - अप्रेल 1985 संयुक्तांक

प. पू. विद्यानन्द—षष्ठिपूर्ति—विनयांजलि—विशेषांक

श्रमणसंस्कृति प्रसारक लोकप्रिय मासिक

*

वार्षिक : 18 रु. • आजीवन सदस्य: 251 रु.

पोषक सदस्य: 501 रु. • परमसंरक्षक सदस्य: 1001 रु.

प्रस्तुत विशेषांक: 10 रु. • ग्राहकों को: 6 रु.

प्रकाशन :

श्री जैन मठ, मूडबिद्री का गौरवशाली प्रकाशन

प्रकाशक :

श्री एम्. आदिराज, 'विवेकाभ्युदय' कार्यलय,
श्री जैन मठ, मूडबिद्री - 574 227. (द. क. जिल)

मुद्रक :

एम्. जयवर्मा इन्द्र, श्री पद्माम्बा प्रेस,
मूडबिद्री (द. क. जिल)

'VIVEKABHYUDAYA' — Vinayanjali — Souvenir

'ವಿವೇಕಾಭ್ಯುದಯ' - ವಿನಯಾಂಜಲಿ -- ವಿಶೇಷಾಂಕ



ಪರಮಪೂಜ್ಯ

ಜ್ಞಾನಯೋಗಿ ಸ್ವಸ್ತಿ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯವರ್ಯ

ಮಹಾಸ್ವಾಮಿಗಳವರು,

ಶ್ರೀ ಜೈನ ಮಠ, ಮೂಡಬಿದ್ರಿ.

**H. H. Jnanayogi Swasti Sri Charukeerti Panditacharyavarya Swamiji,**

Sri Jain Math, Moodbidri.

# "ವಿವೇಕಾಭ್ಯುದಯ"

## – ವಿದ್ಯಾನಂದ ಷಷ್ಠ್ಯಬ್ದಿ ವಿನಯಾಂಜಲಿ ವಿಶೇಷಾಂಕ –

ಪರಮ ಪೂಜ್ಯ ಏಲಾಚಾರ್ಯ ಸಿದ್ಧಾಂತ ಚಕ್ರವರ್ತಿ ವಿದ್ಯಾನಂದ ಮುನಿ ಮಹಾರಾಜರಿಗೆ ಎಪ್ರಿಲ್ 22, 1985ಕ್ಕೆ ಅರುವತ್ತು ವರುಷಗಳು ಪೂರ್ಣವಾಗುತ್ತವೆ. ಇದೊಂದು ಲೋಕಮಂಗಲಕಾರಿ ಪ್ರಸಂಗ ಮಾತ್ರವೇ ಅಲ್ಲ; ಅಪಿತು ಮಾನವತೆಗೊಂದು ಶುಭ ಶಕುನವೂ ಆಗಿದೆ. ಅವರ ಅರುವತ್ತು ವರ್ಷಗಳ ಜೀವನವು ಒಂದು ಸಮರ್ಪಿತ ವ್ಯಕ್ತಿತ್ವದ ವೈವಿಧ್ಯಪೂರ್ಣ ಜೀವನವಾಗಿದೆ. ಅವರ ಬಾಲ್ಯದಿಂದ ಹಿಡಿದು ಈ ವರೆಗಿನ ಜೀವನದ ಪ್ರಮುಖ ಘಟನೆಗಳನ್ನು ನಾವು ಸಮೀಕ್ಷೆ ಮಾಡುವಾಗ ಅವರು ಕೇವಲ ಜೈನರ ಮಾತ್ರವಲ್ಲ; ಅಪಿತು ಶತಾಬ್ದಿಗಳಿಂದ ವಿಕಸಿತ ದೇಶದ ಆಧ್ಯಾತ್ಮಿಕ ಮಾನ್ಯತೆಗಳ ಜೀವಂತ ಇತಿಹಾಸವಾಗಿದ್ದಾರೆಂಬುದು ಸ್ಪಷ್ಟತಃ ಕಂಡುಬರುತ್ತದೆ. ಅವರ ಈ ವರೆಗಿನ ವಿಚಾರ-ಯಾತ್ರೆಯ ಪ್ರತ್ಯೇಕ ಹೆಜ್ಜೆಯು ಲೋಕಜೀವನಕ್ಕೆ ಒಂದಲ್ಲ ಒಂದು ದಿಶೆಯನ್ನೀಯಲು ಪ್ರಕಾಶ-ಸ್ತಂಭವಾಗಿ ಪ್ರಕಟವಾಗಿದೆ, ಅವರ ಆಧಾರಸ್ತಂಭವಾಗಿದೆ. ಕಾಶ್ಮೀರದಿಂದ ಕನ್ಯಾ-ಕುಮಾರಿಯ ವರೆಗೆ, ಆಸೇತು ಹಿಮಾಚಲ- ವಿಭಿನ್ನ ನಗರಗಳಲ್ಲಿ ಅವರು ಮಾಡಿದ ಪ್ರವಚನಗಳು ಭಾರತದ ಅಂತರಾತ್ಮನನ್ನು ಜಾಗೃತಗೊಳಿಸಿವೆ ಮತ್ತು ಲೋಕ-ಜೀವನವನ್ನು ಪ್ರಬುದ್ಧಗೊಳಿಸಿವೆ. ವಿಶಿಷ್ಟ ದೃಷ್ಟಿಯಿಂದ ನೋಡಿದಲ್ಲಿ ಕಂಡುಬರುವುದೇನೆಂದರೆ ಪ. ಪೂ. ಏಲಾಚಾರ್ಯರ ಈ ವರೆಗಿನ ಜೀವನವು ಮಾತ್ರ ವ್ಯಕ್ತಿಗತದ ವರೆಗೆಯೇ ಸೀಮಿತವಾಗಿರದೆ ಒಂದು ಸಮರಸತೆಯ ಆಧ್ಯಾತ್ಮಿಕ ಸಾಧನೆಯೊಂದಿಗೆ ಅನಾಸಕ್ತಿ ಮತ್ತು ಅಪರಿಗ್ರಹದ ಉತ್ತಮ ಪ್ರಯೋಗಶಾಲೆಯಾಗಿಯೂ ಸಿದ್ಧವಾಗಿದೆ. ಜ್ಞಾನದ ಕ್ಷೇತ್ರದಲ್ಲೂ ಅವರು ಗ್ರಂಥೀಯ ಮತ್ತು ಸ್ವಾನುಭವಿಕ ಪ್ರಯೋಗಗಳನ್ನು ಮಾಡಿದ್ದಾರೆ. ನಿರ್ಗ್ರಂಥರಾಗಿ ಅವರು ಗ್ರಂಥಗಳ ಅಭೀಕ್ಷ್ಣ ಪಾರಾಯಣವನ್ನು ಮಾಡಿದ್ದಾರೆ ಮತ್ತು ಪರಂಪರೆಯ ಯುಕ್ತಿಯುಕ್ತ ವ್ಯಾಖ್ಯೆಗಳನ್ನು ಅದರಿಂದ ಯಾವ ರೂಪದಲ್ಲಿ ಅವರು ಪ್ರಸ್ತುತೀಕರಿಸಿದರೋ ಅದರಿಂದ ಅಂಧ ವಿಶ್ವಾಸಗಳ ಜಡವು ನಡುಗಿದೆ ಹಾಗೂ ಮನುಷ್ಯನಿಗೆ ಪ್ರಖರ ಮನೋಬಲವು ಪ್ರಾಪ್ತವಾಗಿದೆ. ಪ. ಪೂ. ಏಲಾಚಾರ್ಯರ ಉದಾರ ಚಿಂತನೆಯಿಂದ ಭಾರತೀಯತೆಗೆ ಯಾವ ನವೀನ ಪ್ರಕಾಶವು ಉಪಲಬ್ಧವಾಗಿದೆಯೋ ಅದನ್ನು ರಾಷ್ಟ್ರದ ಇತಿಹಾಸವು ಎಂದೂ ಮರೆಯಲಾರದು.

ಸಂತ್ರಸ್ತ ಲೋಕ ಜೀವನ ಮತ್ತು ಜ್ವಲಂತ ಸಮಸ್ಯೆಗಳ ಮಧ್ಯದಲ್ಲಿ ಪ. ಪೂ. ಏಲಾಚಾರ್ಯರ ಈ ಷಷ್ಠ್ಯಬ್ದಿಯು ಅನೇಕ ದೃಷ್ಟಿಗಳಿಂದ ಮಹತ್ವಪೂರ್ಣವಾಗಿದೆ.

ಈ ಸ್ವರ್ಣಿಮ ಕ್ಷಣಗಳಲ್ಲಿ ನಾವು ಮುನಿಶ್ರೀಗಳವರ ಜೀವನ-ತಥ್ಯಗಳನ್ನು ಮತ್ತು ಅವರ ವಿಚಾರ-ಮಂಥನಗಳನ್ನು ಸೂಕ್ಷ್ಮತೆಯಿಂದ ನೋಡಬೇಕು. ಅವರ ಅನ್ವೇ-ಕಾಂತಿಸೀ ಮುದ್ರೆಯು ನಿಶ್ಚಯತಃ ನಮಗೆ ಅನೇಕ ಸಮಾಧಾನಗಳನ್ನೀಯಬಲ್ಲದು ಮತ್ತು ಅನೇಕ ಕಠಿಣತೆಗಳ ಮಧ್ಯದಲ್ಲೂ ಸರಳ ಪಥಾನುಗಾಮಿಗಳಾಗಲು ಅದು ಸಹಕರಿಸುತ್ತದೆ.

ಪ. ಪೂ. ಏಲಾಚಾರ್ಯರನ್ನು ಪರಂಪರಾನುಯಾಯಿ ಮುನಿಗಳಿಂದ ಬೇರೆ ಇಡುವಂತಹ ಕೆಲವು ಅವರ ಮಾನ್ಯತೆಗಳಿವೆ. ಅವರು ದಿಗಂಬರ ಪರಮಹಂಸರಾಗಿದ್ದಾರೆ: ಅನಾಸಕ್ತ ಮತ್ತು ಅಪರಿಗ್ರಹಿಗಳಾಗಿದ್ದಾರೆ. ಅವರಿಗೆ ಸಂಸಾರದಿಂದ ಏನಾಗಬೇಕಾಗಿದೆ? ಬಿಂದುವಿನಷ್ಟು ಆದಾನ ಮತ್ತು ಸಿಂಧುವಿನಷ್ಟು ಪ್ರದಾನ ಅವರ ಜೀವನ ಸಂತತಿಯಾಗಿದೆ. ಅಂಜಲಿಯಷ್ಟು ಆದಾನ ಮತ್ತು ನದಿಯಷ್ಟು ಪ್ರದಾನ ಇದು ಅವರ ದೈನಂದಿನ ಜೀವನ ಚರ್ಯೆಯಾಗಿದೆ. ಈ ಕಾರಣದಿಂದಾಗಿಯೇ ಈ ಉದಾರಚರಿತ ಸಂತರ ಮಾಧ್ಯಮದ ಮೂಲಕ ಶತಾಬ್ದಿಗಳಿಂದ ಪರಿಪಕ್ವಗೊಂಡ ವಿಶ್ವಧರ್ಮವು ಇಂದು ಪೂರ್ಣ ಸಮರ್ಥತೆಯಿಂದ ಆಕಾರವನ್ನು ಗ್ರಹಿಸುತ್ತಿದೆ. ಅವರಿಂದ ಉದ್ಘೋಷಿಸಲ್ಪಟ್ಟ ವಿಶ್ವಧರ್ಮವು ಹೊಸತಾಗಿಲ್ಲ, ಶಾಶ್ವತವಾಗಿದೆ. ಧರ್ಮದಲ್ಲಿ ಹೊಸತಾಗಿ ಏನೂ ಇರುವುದಿಲ್ಲ, ಅದು ಸದಾ ಸನಾತನವಾಗಿಯೇ ಇರುತ್ತದೆ. ಯಾವುದೊಂದು ವಸ್ತುವೂ ಹೊಸತಾಗಿರುವುದು ಅಪಾಯಕಾರಿಯಾಗುತ್ತದೆ: ಅದರ ಪುರಾತನತೆಯು ಆ ಅಪಾಯಗಳಲ್ಲೊಂದಾಗಿದೆ. ಆದುದರಿಂದಲೇ ಏಲಾಚಾರ್ಯರ ಎಲ್ಲಾ ಪ್ರವರ್ತನೆಗಳು 'ಉತ್ಪಾದವ್ಯಯಧ್ರೌವ್ಯಯುಕ್ತಂ ಸತ್'ನ ಸೂತ್ರಚಕ್ರದಲ್ಲಿ ತಿರುಗುತ್ತಿರುತ್ತವೆ ನೂತನವೂ ಅಲ್ಲ; ಪುರಾತನವೂ ಅಲ್ಲ. ಸದೈವ, ಸನಾತನ, ಏಕರೂಪತ್ವದ್ದಾಗಿರುತ್ತದೆ. ಅವರ ತತ್ತ್ವದೃಷ್ಟಿಯು ಧರ್ಮವು ಇದೇ ಆಗಿದೆ, ಇದೇ ಆಗಿರುತ್ತದೆ. ಒಂದು ಗಹನ ನಿರ್ಗ್ರಂಥತೆ ಮತ್ತು ಆಕಿಂಚನ್ಯವು ಅವರ ಪ್ರತ್ಯೇಕ ಶ್ವಾಸದಲ್ಲಿ ಜೀವಂತವಾಗಿರುತ್ತದೆ. ಈ ನಿರ್ಲಿಪ್ತತೆಯೊಂದಿಗೆ ಅಗಾಧ-ಗಹನ ಸಾಮಾಜಿಕ ವಾತ್ಸಲ್ಯದ ನಿರ್ವಾಹವು ಜನರನ್ನು ಆಶ್ಚರ್ಯಾನ್ವಿತರನ್ನಾಗಿ ಮಾಡುತ್ತದೆ. ಅವರ ಯಾವ ಸಘನ ವತ್ಸಲತೆ ಮತ್ತು ಕರುಣೆಯು ಪ. ಪೂ. ಏಲಾಚಾರ್ಯರ ಆಚರಣೆಯಲ್ಲಿ ಕಂಡುಬರುತ್ತದೋ ಅದು ಅವರ ಒಳಗೆ ಪಕ್ವಗೊಳ್ಳುತ್ತಿರುವ ನಿರ್ಮಮತೆಯ ಪರಿಣತಿಯೇ ಆಗಿದೆ. ಮಮತ್ವವು ಶೂನ್ಯತೆಗೆ ಮುಟ್ಟುವುದೇ ಅದರ ಅಧಿಕ ಪ್ರಗಾಢತೆ ಮತ್ತು ವಿಸ್ತೃತೆಯಾಗಿರುತ್ತದೆ.

ಪ. ಪೂ. ಏಲಾಚಾರ್ಯರ ಮಮತೆಯು ಒಂದು ಹೊಸ ಆಯಾಮಕ್ಕೆ ಒಂದು ವಿಶ್ವವಾತ್ಸಲ್ಯದ ರೂಪದಲ್ಲಿ ರೂಪುಗೊಂಡಿದೆ. ಅಪಾರ ಕರುಣೆಯಿಂದಾಗಿಯೇ ಅವರ ಸ್ವ-ಜೀವನವು 'ಸ್ವೋಪಕಾರಾಯ' ಆಗಿರದೆ ಸಂಪೂರ್ಣ ವಿಶ್ವದಲ್ಲಿ ವ್ಯಾಪ್ತವಾದ ಜೀವನವಂತಾಗಿದೆ. ಹಿಮಾಲಯದಲ್ಲೇರಿ ಸಂಪೂರ್ಣ ಭಾರತ ಮತ್ತು ವಿಶ್ವದ ಭಾಗ್ಯ ವಿಧಾನವನ್ನು ಯಾರು ಕಂಡರೋ, ಅಂತಹ ಏಲಾಚಾರ್ಯರು ವಿಶ್ವವ್ಯಾಪಿಯಾಗಿರುವುದೇನೂ ಸೋಜಿಗದ ಮಾತಲ್ಲ. ವಿಂಶತಿ ಶತಾಬ್ದಿಯ ದಿಗಂಬರ ಮುನಿಗಳಲ್ಲಿ ಹಿಮಾಲಯ ಯಾತ್ರೆಯನ್ನು 'ಸಿಂಹವೃತ್ತಿ' ಹಾಗೂ 'ಬ್ರಹ್ಮತೇಜಸ್ಸಿ'ನ

ಮೂಲಕ ಪದದಲ್ಲೇ ಸಂಚರಿಸಿದ ಶ್ರೇಯಸ್ಸು 'ಚಿತ್ರಂ ಜೈನೀ ತಪಸ್ಯಾ ಹಿ ಸ್ವೈರಾ-ಚಾರ ವಿರೋಧಿನೀ' ಎಂಬ 'ನಗ್ನಸತ್ಯ'ವನ್ನು ಜಗತ್ತಿಗೇ ತೋರಿಸಿದ ಸರ್ವಪ್ರಥಮ ಮುನಿಶ್ರೀಗಳು ಪ. ಪೂ. ಏಲಾಚಾರ್ಯರೇ ಆಗಿರುವರೆಂಬುದು ನಿರ್ವಿವಾದ.

ಜೈನಾಚಾರ್ಯರ ಮತ್ತು ಮುನಿಗಳ ಪರಂಪರೆಯಲ್ಲಿ ಪೂಜ್ಯ ಏಲಾಚಾರ್ಯ ವಿದ್ಯಾನಂದರತ್ತ ನೋಡುವಾಗ ಈ ಮಹಾಮುನಿಗಳ ಜೀವನಯಾತ್ರೆಯಲ್ಲಿ ಸಮಸ್ತ ಆಚಾರ್ಯರು, ಉಪಾಧ್ಯಾಯರು ಮತ್ತು ಸಾಧುಗಳು ಸಮವೇತ್ತರಾಗಿ ಪ್ರತಿಚ್ಛಾ-ಯಿತರಾದಂತೆ ಕಂಡುಬರುತ್ತದೆ. ಏಲಾಚಾರ್ಯರು ಕೇವಲ ಜೈನ ಸಂತರೇ ಆಗಿದ್ದಲ್ಲಿ ನಾವು ಅವರ ವಿಶೇಷ ಚರ್ಚೆಯನ್ನು ಸಂಭವತಃ ಮಾಡುತ್ತಿರಲಿಲ್ಲ. ಆದರೆ ಅವರು ತಮ್ಮ ಜೀವನ ಚಿಂತನೆಯಲ್ಲಿ ಜೈನರಾಗಿರುವುದಕ್ಕಿಂತಲೂ ಮೊದಲು ಅತ್ಯಂತ ಮಾನವೀಯರಾಗಿದ್ದಾರೆ, ಆದುದರಿಂದಲೇ ಭಿನ್ನರಾಗಿದ್ದಾರೆ. ಅನೇಕರು ಮುನಿ-ಗಳಾಗಿರುವ ಉದಾಹರಣೆಯು ಸಮ್ಮೆದುರಿಗೆ, ಆದರೆ ಮಾನವೀಯತಾ ಪೂರ್ಣ ರಾಗಿಲ್ಲ. ಈ ಸ್ಥಿತಿಯಲ್ಲಿ ಮುನಿತ್ವದ ಪರಾಜಯವೆಂದೇ ಹೇಳಬೇಕು. ಏಕೆಂದರೆ ಮುಕ್ತಿಗೆ ಮಾನವತ್ವವು ಆವಶ್ಯಕವಾಗಿರುವಾಗ ಮುನಿತ್ವಕ್ಕಂತೂ ಅದು ಅತ್ಯಂತ ಅವಶ್ಯಂಭಾವಿಯಾಗಿದೆ. ವಿದ್ಯಾನಂದತ್ವದ ಮಹತ್ತ್ವವು ತನ್ನ ಚರ್ಯೆ ಮತ್ತು ವಿಚಾರ ಯಾತ್ರೆಯಲ್ಲಿ ಅವರು ಕೇವಲ ಜೈನರಾಗಿಲ್ಲ. ಅಪಿತು ಸಂಪೂರ್ಣ ಭಾರತೀ-ಯತೆಯ ಸಮವೇತಪುಂಜರಾಗಿದ್ದಾರೆಂಬುದು ಕಾರಣವಾಗಿದೆ. 1970ಕ್ಕೆ ಪ. ಪೂ. ಏಲಾಚಾರ್ಯರು ಮಾಡಿದ ಹಿಮಾಲಯದ ಪದಯಾತ್ರೆ ಮತ್ತು ತನ್ಮೂಲಕ ಅವರು ಸಾಂಸ್ಕೃತಿಕ ಸಮನ್ವಯದ ಯಾವ ಗಂಗೋತ್ರಿಯನ್ನು ಉನ್ಮುಕ್ತಗೊಳಿಸಿದರೋ ಅದು ಅವಿಸ್ಮರಣೀಯವಾಗಿದೆ. ಅದು ವರ್ತಮಾನದ ಯುವ ಪೀಳಿಗೆಯನ್ನು ಮಾನವನ ಚಂದ್ರಲೋಕ ಯಾತ್ರೆಗಿಂತಲೂ ಹೆಚ್ಚಾಗಿ ಆಕರ್ಷಿತರನ್ನಾಗಿ ಮಾಡಿದೆ.

ಪ. ಪೂ. ಏಲಾಚಾರ್ಯರಲ್ಲಿರುವ ಒಂದು ವಿಸ್ಮಯದ ವಿಷಯವೇನೆಂದರೆ ಅವರ ಸಮೀಪ ಕುಳಿತಿರುವ ವ್ಯಕ್ತಿಯು ಜೈನನೋ, ಹರಿಜನನೋ, ಕೃಷಿಕನೋ, ಶ್ರಮಿಕನೋ, ಪ್ರಾಧ್ಯಾಪಕನೋ ಯಾ ಕುಲಪತಿಯೋ ಎಂಬುದನ್ನು ಅವರ 'ವಸುಧೈವ ಕುಟುಂಬಕಮ್' ದೃಷ್ಟಿ ನೋಡುವುದೇ ಇಲ್ಲ. ಅವರ ದೃಷ್ಟಿಯು ಎಷ್ಟು ಪಾರಗಾಮಿಯಾಗಿದೆಯೆಂದರೆ ಅದು ಪ್ರತ್ಯೇಕ ವ್ಯಕ್ತಿಯೊಳಗೆ ಕುಳಿತಿರುವಂತಹ ವ್ಯಕ್ತಿಯನ್ನು ನೋಡುತ್ತದೆ ಮತ್ತು ಆ 'ವ್ಯಕ್ತಿತ್ವ'ದೊಳಗೆ ತಲುಪಿ ಪ್ರಭಾವಿತ ಮಾಡುತ್ತದೆ. ಅವರ ದೃಷ್ಟಿಯ ಶೋಧವು ಒಂದೇ ಆಗಿದೆ: ವ್ಯಕ್ತಿಯು ಏನನ್ನು ಇಚ್ಛಿಸುತ್ತಾನೆ? ಅವನಲ್ಲಿ ಮಾನವೀಯ ಶಕ್ತಿಯು ಎಷ್ಟಿದೆ ಮತ್ತದನ್ನು ಮಾನ-ವತೆಯ ಕಲ್ಯಾಣದತ್ತ ಎಷ್ಟು ತಿರುಗಿಸಬಹುದು? ಎಂಬುದು. ಆದುದರಿಂದಲೇ ಅವರ ದೃಷ್ಟಿಯಲ್ಲಿ ಭೇದವಿಜ್ಞಾನವು ವಿದ್ಯಮಾನವಾಗಿದ್ದರೂ ಭೇದವಿರುವುದಿಲ್ಲ; ಜೈನ ಧರ್ಮದಲ್ಲೂ ಭೇದವಿಜ್ಞಾನಕ್ಕೆ ಮಹತ್ತ್ವವಿದೆಯೇ ಹೊರತು ಭೇದವು ಮಹತ್ತ್ವಹೀನವಾಗಿದೆ. ಏಲಾಚಾರ್ಯ ವಿದ್ಯಾನಂದರು ಪರಮ ಜೈನ ಶ್ರಮಣ ರಾಗಿದ್ದಾರೆ. ಎಲ್ಲಾ ರೀತಿಯಿಂದಲೂ 'ಫಕೀರರು' ಅಂದರೆ ನಿರ್ಗ್ರಂಥರಾಗಿದ್ದಾರೆ. ಅವರ ವೈಶ್ವಿಕ ದೃಷ್ಟಿಯು ಮುಸಲ್ಮಾನ, ಹಿಂದು, ಸಿಕ್ಖ, ಕ್ರೈಸ್ತ ಮತ್ತು ಪಾರಸಿ

ಗಳಲ್ಲಿ ಏನೊಂದೂ ಭೇದವನ್ನುಂಟುಮಾಡುವುದಿಲ್ಲ. ಅವರ ವಿಚಾರ ಯಾತ್ರೆಯು ಸಂಪ್ರದಾಯಾತೀತವಾಗಿದೆ. ಸಂಕೀರ್ಣತೆಯನ್ನು ಅತಿಕ್ರಮಿಸುವ ಅತಿ ಪಾವನ ಯಾತ್ರೆಯಾಗಿದೆ.

ಅವರ ವಿಚಾರ ಯಾತ್ರೆಯ ಪ್ರಮುಖ ವಿಶೇಷತೆಯೇನೆಂದರೆ ಅವರು ವಿಕಾಸದ ಮಹತ್ತ್ವವನ್ನು ಸ್ವೀಕರಿಸುತ್ತಾರೆ. ಅವರಿಗೆ ಜಡತೆ ಮತ್ತು ಪ್ರಮಾದವು ಅಸ್ವೀಕಾರವಾಗಿದೆ. ಆದುದರಿಂದಲೇ ವಿಕಾಸಕ್ಕೆ ಅವರು ಮಹತ್ತ್ವವನ್ನಿತ್ತು ಅದನ್ನೇ ಧರ್ಮವೆಂದು ಮನ್ನಿಸುತ್ತಾರೆ ಮತ್ತು ಪ್ರತ್ಯೇಕ ಅಸ್ತಿತ್ವಕ್ಕೆ ಪುರಶ್ಚರಣೆಯ ಪ್ರೇರಣೆಯನ್ನು ನೀಡುತ್ತಿರುತ್ತಾರೆ. ಅವರು ಅನುಕ್ಷಣ ಊರ್ಧ್ವಗಾಮಿಗಳಾಗಿದ್ದಾರೆ. ಆದುದರಿಂದ ಜೀವನದ ಉದಾತ್ತ ಊರ್ಧ್ವಗಾಮಿ ಶಕ್ತಿಗಳಲ್ಲಿ ಅವರಿಗೆ ಗಹನಶ್ರದ್ಧೆ ಇದೆ. ಸಮಯದ ಒಂದೊಂದು ಕ್ಷಣ ಮತ್ತು 'ಸಮಯ' (ಆತ್ಮ)ದ ಒಂದೊಂದು ಊರ್ಜಾಕಣದ ಮಹತ್ತ್ವವನ್ನರಿತು ಅವರು ಅದರ ಸಂಪೂರ್ಣ ಉಪಯೋಗವನ್ನು ಮಾಡಲಿಚ್ಛಿಸುತ್ತಾರೆ. ಸಮಯದ ಮೌಲ್ಯ ಮತ್ತು ಶಕ್ತಿಯನ್ನರಿಯದವರ ಬಗ್ಗೆ ಅವರಿಗೆ ಪ್ರಸನ್ನತೆ ಇಲ್ಲ. ಅವರು ಸಮಯದ ನಿಜ ಮೌಲ್ಯವನ್ನರಿಯುವುದನ್ನೇ ವಿಕಾಸದ ಆತ್ಮವೆನ್ನುತ್ತಾರೆ ಮತ್ತು ಅದರ ಸಮಗ್ರತೆಯನ್ನು ಉಪಯೋಗಿಸುವುದರಲ್ಲೇ ಸಾರ್ಥಕತೆಯೆಂದು ತಿಳಿಯುತ್ತಾರೆ. ಅವರಿಗೆ ಪ್ರವಚನದಲ್ಲಿ ವಿಶ್ವಾಸವಿದೆ, ಭಾಷಣದಲ್ಲಿಲ್ಲ. ತಾನು ಹೇಳಿದ್ದನ್ನು ಜೀವನದಲ್ಲಿ ಯಥಾರೂಪದಲ್ಲವತರಿಸುವುದನ್ನವರು ನೋಡಲಿಚ್ಛಿಸುತ್ತಾರೆ. ಯಾವುದನ್ನು ಆಚರಣೆಯ ರೂಪದಲ್ಲಿ ತರುತ್ತಾರೋ ಅದನ್ನೇ ವಾಣಿಯಲ್ಲೂ ಹೇಳುತ್ತಾರೆ. ಅವರ ಅನೈಕಾಂತಿಕ ವಾಣಿಯಲ್ಲಿ ಭಾರತದವಿಗತ 2500 ವರುಷಗಳ ಚಿಂತನ ಯಾತ್ರೆಯ ಒಂದು ಸಾರ ಪೂರ್ಣ ದೃಶ್ಯವು ಕಂಡು ಬರುತ್ತದೆ. ಅವರ ಪ್ರವಚನದಲ್ಲಾಗುವ ಅಥಾಹ ಜನಸಾಗರವು ಉಲ್ಲೇಖನೀಯವಾಗಿದೆ.

ಯಾವ ವಕ್ತಾರನಾದರೂ ಇಷ್ಟು ದೊಡ್ಡ ಜನಸಾಗರವನ್ನು ಕಂಡು ಉನ್ಮಾದಿಯಾಗದಿರಲಾರನು. ಆದರೆ ಪ. ಪೂ. ಏಲಾಚಾರ್ಯರ ವಾಗ್ಮಿತೆಯ ಮಹತ್ತ್ವತೆಯೇನೆಂದರೆ ಜನಸಾಗರದಲ್ಲೂ ಅವರನ್ನದು ಏಕಾಕಿಯಾಗಿಡುತ್ತದೆ; ಮತ್ತು ಏಕಾಕಿಯಾಗಿದ್ದರೂ ಸಮುದಾಯದ ಮಧ್ಯದಲ್ಲಿಡುತ್ತದೆ. ಅವರು ವಾಗ್ಮಿ–ನಿರ್ಲಿಪ್ತ–ನಿಷ್ಕಾಮ ಸಂತರಾಗಿದ್ದಾರೆ. ಏಕಾಂತದಲ್ಲೂ ಅನೇಕಾಂತದ ಆರಾಧನೆಯನ್ನು ಮಾಡುವುದು ಮತ್ತು ಅನೇಕಾಂತದಲ್ಲೂ ಏಕಾಂತತೆಯ ಅನುಭವವನ್ನು ಮಾಡುವುದೇ ದಿಗಂಬರತ್ವದ ವಿಶೇಷತೆಯಾಗಿದೆ. ಅದು ಬಹ್ವರ್ಥವಾದಿಯಾಗಿರುತ್ತದೆ. ಆದರೆ ಯಾವೊಂದು ಏಕಾರ್ಥ ಯಾ ವಿಷಯದಲ್ಲೇ ನಿಲ್ಲುವುದರಲ್ಲಿ ಸಾರ್ಥಕತೆಯನ್ನು ಮನ್ನಿಸದು. ಏಲಾಚಾರ್ಯರು ಶಬ್ದಕ್ಕಿಂತಲೂ ಹೆಚ್ಚಾಗಿ ಅದರ ಅರ್ಥ ಮತ್ತು ಸಂದರ್ಭದ ಮೇಲೆ ಧ್ಯಾನವನ್ನಿಡುತ್ತಾರೆ. ಆದುದರಿಂದಲೇ 'ಏಕಾಂತ', 'ಜನಸಾಗರ', 'ಅನೇಕಾಂತ' ಇತ್ಯಾದಿ ಎಲ್ಲಾ ಶಬ್ದಗಳು ಅವರನ್ನು ಕಷ್ಟದಲ್ಲಿ ಸಿಲುಕಿಸುವುದಿಲ್ಲ ಶಬ್ದವನ್ನೇ ಕಷ್ಟದಲ್ಲಿ ಸಿಲುಕಿಸುವವನಿಗೆ ಶಬ್ದವು ಹೇಗೆ ಕಷ್ಟವನ್ನೀಯಬಲ್ಲುದು? 'ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಸರ್ವಂ

ಸವಮಿತ್ಯಪಪ್ಯಂ' ಎಂಬುದೇ ಮುನಿಶ್ರೀಗಳವರ ಪರಮ ಸೂತ್ರವಾಗಿದೆ. ಅವರ ವೈಚಾರಿಕ ಸಹಿಷ್ಣುತೆಯು ವಿಚಾರಣೀಯವಾಗಿದೆ.

ಪ. ಪೂ. ವಿದ್ಯಾನಂದರು ಜೈನ ಮುನಿ ಎಂದರಿತೂ ಎಲ್ಲಾ ಸಂಪ್ರದಾಯ, ವರ್ಗ ಮತ್ತು ವ್ಯವಸಾಯದ ಜನರು ಅವರೊಂದಿಗೆ ಪೂರ್ಣ ಉನ್ಮುಕ್ತತೆಯಿಂದ ಸೇರಿಕೊಂಡು ಮುಕ್ತಕಂಠದಿಂದ ಹೃದಯೋನ್ಮುಕ್ತರಾಗಿ ವಿಚಾರ-ವಿಮರ್ಶೆಯನ್ನು ಮಾಡುತ್ತಾರೆ. ಇದು ನಿಜವಾಗಿಯೂ ಒಂದು ಸೋಜಿಗದ ವಿಷಯವಾಗಿದೆ. ಏಲಾಚಾರ್ಯರೂ ಪ್ರಾಯಃ ಎಲ್ಲರೊಂದಿಗೂ ಯಾವೊಂದು ಭೇದಭಾವವಿಲ್ಲದೆಯೇ ಸ್ಥಿತ್ಯತೀತರಾಗಿ ಸೇರಿಕೊಳ್ಳುತ್ತಾರೆ. ಅವರನ್ನು ಸಂದರ್ಶಿಸಲು ಮತ್ತು ದರ್ಶನ ಮಾಡಲು ಒಂದು ಪ್ರದೇಶ ಯಾ ಭಾಷೆಯ ಜನರೇ ಬರದೆ ಎಲ್ಲಾ ಭೂಗೋಲ ಮತ್ತು ಸಂಸ್ಕೃತಿಗಳು ಅವರ ದರ್ಶನಾರ್ಥ ಬರುತ್ತವೆ. ಅವರ ಚುಂಬಕ ವ್ಯಕ್ತಿತ್ವವೇ ಇದಕ್ಕೆ ಕಾರಣ. ಅವರು ಪರಂಪರಾವಾದಿ ಯಾ ರೂಢಿವಾದಿಗಳಲ್ಲ, ಸ್ವಾಭಾವಿಕ ರಾಗಿದ್ದಾರೆ ಮತ್ತು ಪ್ರತಿಯೊಬ್ಬನನ್ನೂ ಸ್ವಾಭಾವಿಕನಾಗಲು ಸಲಹೆಯನ್ನೀಯು ತ್ತಾರೆ. 'ಸ್ವಭಾವವೇ ಧರ್ಮವಾಗಿದೆ' ಎಂಬುದನ್ನು ಪ. ಪೂ. ಮುನಿಶ್ರೀಗಳವರ ಜೀವನದಲ್ಲಿ ಚರಿತಾರ್ಥವಾಗಿ ನೋಡಬಹುದಾಗಿದೆ.

ಪ. ಪೂ. ಏಲಾಚಾರ್ಯರ ಈ ಷಷ್ಟ್ಯಬ್ದಿಯನ್ನು ನಾವೊಂದು ಪುಷ್ಪಗುಚ್ಛದ ಷಷ್ಠಿ ಪೂರ್ತಿಯೆಂದು ಹೇಳಬಹುದಾಗಿದೆ. ಅವರು ಬರೀ ಪುಷ್ಪವಾಗಿಲ್ಲ, ಒಂದು ಸಮ್ಮೋಹಕ ಪುಷ್ಪಗುಚ್ಛವಾಗಿದ್ದಾರೆ. ನಾನಾ ವರ್ಣದ ಪುಷ್ಪಗಳ ಸ್ತವಕರಾಗಿ-ದ್ದಾರೆ. ಅನೇಕಾಂತ ಮತ್ತು ಪುಷ್ಪಸ್ತವಕದಲ್ಲಿ ಏನೂ ಭೇದವಿಲ್ಲವಾಗಿದೆ. ಎರಡೂ ವೈವಿಧ್ಯವನ್ನು ಮನ್ನಿಸುತ್ತವೆ; ಮತ್ತದನ್ನು ಒಂದೇ ಬಂಧನದಲ್ಲಿ ಸಮಾಹಿತಗೊಳಿ-ಸುವ ಕ್ಷಮತೆಯನ್ನಿಡುತ್ತವೆ. ಯಾವ ರೀತಿಯಲ್ಲಿ ಒಂದು ಪುಷ್ಪಗುಚ್ಛವು ಸುಗಂಧಿತ ವರ್ಣಭರಿತ ವರ್ಣಗಳ ಮತ್ತು ಆಕೃತಿಗಳ ಪುಷ್ಪಗಳನ್ನು ಒಂದೇ ಬಾರಿಗೆ ತೆಗೆದು-ಕೊಂಡು ತನ್ನ ವ್ಯಕ್ತಿತ್ವವನ್ನು ನಿರ್ಮಿಸಲು ಸಮರ್ಥವೋ ಅದೇ ಸ್ಥಿತಿ ಪ. ಪೂ. ಏಲಾಚಾರ್ಯರದ್ದಾಗಿದೆ. ಅವರು ವೈವಿಧ್ಯದ ಪರ್ಯಾಯ-ಸತ್ತೆಯನ್ನು ಮನ್ನಿಸು ತ್ತಾರೆ ಮತ್ತು ತನ್ನ ಅನೈಕಾಂತಿಕ ಪ್ರತಿಭೆಯಿಂದ ಅದನ್ನು ಸಮಾಯೋಜಿಸಿ ಇಡುತ್ತಾರೆ. ಅವರು ಅನೇಕ ಪರಸ್ಪರ ವಿರೋಧಿ ಶಕ್ತಿಗಳ ಮತ್ತು ದೃಷ್ಟಿಕೋನ ಗಳ ಸಮಾಯೋಜಕರಾಗಿದ್ದಾರೆ. ಆದುದರಿಂದಲೇ ಅವರ ಷಷ್ಟ್ಯಬ್ದಿಯನ್ನು ಒಂದು ಸ್ತವಕದ ವರ್ಷಗ್ರಂಥಿಯೆಂದು ಸಂಬೋಧಿಸಬಹುದಾಗಿದೆ.

ಪ. ಪೂ ಏಲಾಚಾರ್ಯರ 'ವಿಶ್ವಧರ್ಮ'ವನ್ನು ಕೆಲವರು 'ಸಮ್ಮಿಶ್ರಣ', 'ಸರ್ವ ಪ್ರಸನ್ನ ನೀತಿ' ಎಂದು ಮೊದಲಾಗಿ ತಿಳಿಯಬಹುದು. ಆದರೆ ಇದು ಭ್ರಮೆ ಯಾಗಿದೆ. ಎಲ್ಲರನ್ನೂ ಪ್ರಸನ್ನರನ್ನಾಗಿ ಮಾಡುವುದರಿಂದ ಮುನಿಗಳಿಗೇನು ಲಾಭ ವಿದೆ? ಮತ್ತು ಎಲ್ಲರನ್ನೂ ಪ್ರಸನ್ನಪಡಿಸುವುದು ಅದೇನು ಅಷ್ಟು ಸುಲಭವಾಗಿದೆಯೇ? ಎಲ್ಲಾ ಧರ್ಮಗಳ 'ಸಮ್ಮಿಶ್ರಣ' ಮಾಡುವುದರಿಂದಲೂ ಪೂಜ್ಯ ಮುನಿಗಳಿಗೇನು ಲಾಭವಿದೆ? ನಾವು ದುರಾಗ್ರಹ, ಕದಾಗ್ರಹ ಮತ್ತು ಪೂರ್ವಾಗ್ರಹಗಳಿಂದ ವಿರಕ್ತ ರಾದಾಗ ಮತ್ತು ನಮ್ಮ ಸ್ವಾಭಾವಿಕ ಸ್ಥಿತಿಯಲ್ಲಿರುವಾಗ ಯಾವ ಧರ್ಮವು

ಮಾನವೀಯತೆ ಹಾಗೂ ಮಾನವ ಕಲ್ಯಾಣದ ನೆಲೆಯಲ್ಲಿ ನಮ್ಮೆದುರು ಪ್ರತಿಬಿಂಬಿಸುವುದೋ ಅದೇ ವಿಶ್ವಧರ್ಮವಾಗಿದೆ. ಇದೇ ಉಜ್ಜ್ವಲತೆಯ ಪ್ರತೀಕವಾಗಿದೆ. ವಿಶ್ವಧರ್ಮವು ಸಮ್ಮಿಶ್ರಣವಾಗಿಲ್ಲ, ಅದು ತಪ್ಪೊಪ್ಪಿಗೆಯ ತಿಳುವಳಿಕೆಯೂ ಅಲ್ಲ. ಅದು 'ಸ್ವಲ್ಪ ಇದರಿಂದ ಮತ್ತು ಸ್ವಲ್ಪ ಅದರಿಂದ'ದ ಪರಿಣತಿಯೂ ಆಗಿಲ್ಲ; ವಸ್ತುತಃ ಅದು ಆತ್ಮನ ನಿರ್ಮಲಾವಸ್ಥೆಯ ಉದ್ರೇಕವೇ ಆಗಿದೆ. ನಾವು ಸ್ವಭಾವಸ್ಥರಾದಾಗ ('ವತ್ಥುಸಹಾವೋ ಧಮ್ಮೋ') ಆತ್ಮನಲ್ಲಾಗುವ ವಿಕಿರಣ (Radiation)ವೇ ವಿಶ್ವಧರ್ಮದ ಆಧಾರ ಭೂಮಿಗಳನ್ನು ನಿರ್ಮಿಸುತ್ತವೆ.

ಪ. ಪೂ. ಏಲಾಚಾರ್ಯರು ಯಾವ ಪರಂಪರೆಯ ಸಂತತಿಯಾಗಿದ್ದಾರೋ, ಅವರಲ್ಲಿ ಅಂಧ ವಿಶ್ವಾಸ ಮತ್ತು ಆಡಂಬರಗಳಿಗೆ ಏನೊಂದೂ ಸ್ಥಾನವಿಲ್ಲವಾಗಿದೆ. ಯಾವುದನ್ನು ಸ್ವತಃ ಅಲ್ಲಿ ಜೀವಿಸ (ಅನುಭವಿಸ)ಲಾಗಿದೆಯೋ ಅದನ್ನೇ ಅಲ್ಲಿ ಹೇಳಲಾಗಿದೆ ಮತ್ತು ಮುಂದೆ ಅದೇ ಪೂರ್ಣತಃ ಉಪಲಬ್ಧವೂ ಆಗಿದೆ. ಈ ಪರಂಪರೆಯಲ್ಲಿ ಸಿದ್ಧಾಂತದೊಂದಿಗೆ ಜೀವಿಸುವುದೇ ಮಹೋಪಲಬ್ಧಿಯಾಗಿದೆ. ಸಿದ್ಧಾಂತದೊಂದಿಗೆ ಜೀವಿಸದಿರುವುದೇ ಇಂದಿನ ಅರಾಜಕತೆಗೆ ಕಾರಣವಾಗಿದೆ: ಅಂದರೆ ಸಿದ್ಧಾಂತವಿದೆ, ಆದರೆ ಅದರೊಂದಿಗೆ ಜೀವಿಸುವ ಯಾವ ಸ್ಥಿತಿಯೂ ಇಲ್ಲವಾಗಿದೆ. ವಸ್ತುತಃ ವಿಧಾಯಕರಿಗೆ ಇಂದು ಸಿದ್ಧಾಂತವೇ ಇಲ್ಲವಾಗಿದೆ. ವಿಧಾನದ ಯಾ ಶಾಸ್ತ್ರದ ಈ ಅಪಂಗಾವಸ್ಥೆಯಲ್ಲೇ ಮಹಾವೀರರು 'ಎದ್ದು ನಿಂತಿದ್ದರು' ಮತ್ತು ಶಾಸ್ತ್ರಕಾರರಿಗೆ ಈ ದ್ವೈತ ಸಿದ್ಧಾಂತಕ್ಕಾಗಿ ಗರ್ಜಿಸಿದ್ದರು. ಆದುದರಿಂದ ಆತ್ಮ-ಕ್ರಾಂತಿಯೇ ಮೂಲತಃ ಸಮಾಜ ಕ್ರಾಂತಿಯಾಗಿದೆ. ಈ ಮರ್ಮದ ಶೋಧವೇ ಪೂ. ಏಲಾಚಾರ್ಯರ ಷಷ್ಠಿ ಪೂರ್ತಿ ಉತ್ಸವವಾಗಿದೆ. 'ಧರ್ಮನಿರ್ಮೂಲ ವಿಧ್ವಂಸೇ ಸಹಂತೇ ನ ಪ್ರಭಾವಕಾಃ । ವಿನಾ ಸಾವದ್ಯಲೇಶ್ಯೇನ ನಾಸ್ತಿ ಧರ್ಮಪ್ರಭಾವನಾ' ಎಂಬುದರ ಜೀವಂತ ಮೂರ್ತಿಯಾಗಿದ್ದಾರೆ ಪೂ. ಮುನಿವರ್ಯರು.

ಪ. ಪೂ. ಏಲಾಚಾರ್ಯರ ಜೀವನವು ಸೂರ್ಯನಂತೆ ನಿಷ್ಕಾಮ ಮತ್ತು ತೇಜೋಮಯ ಜೀವನವಾಗಿದೆ. ಅವರು ದೃಷ್ಟಾರರಾಗಿದ್ದಾರೆ: ದೃಷ್ಟಿಯಾಗಿದ್ದಾರೆ, ಅವರು ನೋಡುತ್ತಾರೆ ಮತ್ತು ಅನ್ಯರನ್ನು ಸಮಗ್ರತೆಯಲ್ಲಿ ಪರಿವರ್ತಿಸುತ್ತಾರೆ. ಸೂರ್ಯನು ಉಷಃಕಾಲದಿಂದ ಸಾಯಂಕಾಲದ ವರೆಗೆ ನಿರಂತರ ಯಾತ್ರೆ ಮಾಡುತ್ತಾನೆ. ಅವನು ತನ್ನ ಕಿರಣಾಂಗುಲಿಗಳಿಂದ ಸ್ಪರ್ಶಿಸುತ್ತಾನಷ್ಟೇ! ಆದರೆ ಅವನ ಈ ಸ್ಪರ್ಶದಿಂದ ಯಾರಾದರೂ ಅಸ್ಪೃಷ್ಟರಾದಲ್ಲಿ ಅವನು ರೋಷಗೊಳ್ಳದೆ ನಿಷ್ಕಾಮತಃ ತನ್ನ ಪಥದಲ್ಲಿ ಮುಂದೆ ಸಾಗುತ್ತಾನೆ. ಅಂತಹ ಸ್ಥಿತಿಯಲ್ಲೂ ಅವನ ಮನಸ್ಸಿನಲ್ಲಿ ಆಕುಲತೆ ಮತ್ತು ರೋಷವುಂಟಾಗುವುದಿಲ್ಲ ಇದಕ್ಕೆ ವಿಪರೀತವಾಗಿ ದ್ವಿಗುಣಿತ ಉತ್ಸಾಹವಿರುತ್ತದೆ. ಇದೇ ರೀತಿ ಪೃಥ್ವಿಯಲ್ಲಿ ನಿಲ್ಲದೆ ಸಾಗುವುದೇ ಏಲಾಚಾರ್ಯರ ಕೆಲಸವಾಗಿದೆ.

'ಆಗತೇ ಸ್ವಾಗತಂ ಕುರ್ಯಾತ್ । ಗಚ್ಛಂತಂ ನ ನಿವಾರಯೇತ್ ॥
ತಿಷ್ಠಂತಂ ಕಾರಯೇತ್ ಭಿಕ್ಷಾ । ಏಷ ಧರ್ಮಃ ಸನಾತನಃ ॥'

ಎಂಬ ನೀತಿಯಂತೆ ಸಹಸ್ರಶಃ ಗ್ರಾಮ–ನಗರಗಳಲ್ಲಿ ಧರ್ಮಭೇರಿಯನ್ನು ಮೊಳಗಿಸುತ್ತಾ ನಿರಂತರ ಅವರ ಪದಯಾತ್ರೆಯು ಸಾಗಿದೆ. ಕತ್ತಲೆಯನ್ನು ಅಸ್ವೀಕರಿಸುತ್ತಾ ಬೆಳಕನ್ನು ಸ್ವಾಗತಿಸುತ್ತಾ ಅವರು ತಮ್ಮ ತೀರ್ಥಯಾತ್ರೆಯಲ್ಲಿ ಅವಿರಾಮವಾಗಿ ಸಾಗಿದ್ದಾರೆ. ಜೀವನದ 'ಮಧ್ಯಾಹ್ನೋತ್ತರಾವಸ್ಥೆ'ಯಲ್ಲಿ ಅವರ ಈ ಪ್ರಖರತೆಯು ಒಂದೇ ರೀತಿಯಲ್ಲಿ ವೃದ್ಧಿಂಗತವಾಗುತ್ತಿದೆ. ಜನರು ಮುಂದೆ ಬಂದು ಪ್ರಕಾಶವನ್ನೆದುರಿಸಲು ತನ್ನ ವ್ಯಕ್ತಿತ್ವದ ನಿರ್ಮಾಣ ಮಾಡಬೇಕೆಂಬುದು ಅವರ ಕಾಮನೆಯಾಗಿದೆ. ಪೂ. ಮುನಿವರ್ಯರು ಪ್ರಕಾಶದೆದುರು ಸಮರ್ಪಿತರು, ಅವರ ಪೂರ್ಣ ಜೀವನವು ಆತ್ಮಾನುಸಂಧಾನಕ್ಕೆ ಅರ್ಪಿತವಾಗಿದೆ. ಅವರು ಮಾಡುವ ಲೋಕಕಲ್ಯಾಣವು ಮಜ್ಜಿಗೆ ಮಾತ್ರವಾಗಿದೆ. ಅವರ ಅನಿರತ–ಅವಿರಾಮ ಸಾಧನೆಯ ನಿಜವಾದ ನವನೀತವು ಅವರ ಆತ್ಮಮಂಥನವಾಗಿದೆ. ಅದು ಪ್ರಾಯಃ ಅವರೊಳಗೆಯೇ ಸೀಮಿತವಾಗಿದೆ. ನಮಗೆ ಸಿಗುವಂಥದ್ದು ಕೇವಲ ಮಜ್ಜಿಗೆ ಮಾತ್ರ. ಅವರಲ್ಲಿ ಯಾವ ನವೀನತೆವಿದೆಯೋ, ಯಾವುದು ನಮಗೆ ಸಿಗಬಹುದೋ ಅದು ಪ್ರಾಯಃ ಶಬ್ದಾತೀತವಾಗಿಯೇ ಇರುತ್ತದೆ. ಆದುದರಿಂದಲೇ ಇಂದು ನಾವು ಯಾವ ಅವರ ಉದ್‌ಗ್ರೀವ ಪದಯಾತ್ರೆಯನ್ನು ನೋಡುತ್ತಿದ್ದೇವೋ ಅರುವತ್ತೊಂದನೆಯ ವಯಸ್ಸಿನತ್ತ, ಅದಂತೂ ಅವರ ಆತ್ಮಕಲ್ಯಾಣ ಸಾಧನೆಯದೇ ಒಂದು ನಿಷ್ಕಾಮ ಅಧ್ಯಾಯವಾಗಿದೆ.

ಪ. ಪೂ. ಏಲಾಚಾರ್ಯ ವಿದ್ಯಾನಂದರ ವಿಶ್ವಧರ್ಮವು ಒಂದು ಹೊಸ ಯಾ ಭಿನ್ನ ಪ್ರತಿಪಾದನೆಯಾಗಿಲ್ಲ. ಅದು ಭಾರತೀಯ ಪರಂಪರೆಯಲ್ಲಿ ಶತಾಬ್ದಿಗಳಿಂದ ಆಕಾರವನ್ನು ಗ್ರಹಿಸುತ್ತಿರುವ ವಿಶ್ವಕಲ್ಯಾಣದ ನವ್ಯತಮ ಸಂಸ್ಕರಣವಾಗಿದೆ. ತೀರ್ಥಂಕರರು ತಮ್ಮ ಆತ್ಮಕಲ್ಯಾಣದ ಊರ್ಜಾದ ಒಂದು ಭಾಗವನ್ನು ಯಾವ ತಥ್ಯಗಳನ್ನು ಪ್ರಾಣಿಮಾತ್ರನ ಹಿತಕಾಮನೆಯಿಂದ ಪ್ರಕಟಿಸಿದ್ದರೋ, ವಿಶ್ವಧರ್ಮವು ಕೂಡಾ ಅದರದ್ದೇ ರೂಪಾಂತರವಾಗಿದೆ. ಈ ಸ್ವರ್ಣಿಮ ಕ್ಷಣಗಳಲ್ಲಿ ಪೂ. ಏಲಾಚಾರ್ಯರ 'ವಿಶ್ವಧರ್ಮ'ವನ್ನು ಅದರ ಸಂಪೂರ್ಣ ಗಹನತೆಯಲ್ಲಿ ಶೋಧಿಸಿ ನಾವು ಅದರ ಸೂಕ್ಷ್ಮತೆಯನ್ನು ತಿಳಿಕೊಳ್ಳಬೇಕು. ಈ ವಿಶ್ವಧರ್ಮವು ಮಹಾವೀರರ ಪ್ರಾಣತಂತ್ರವೇ ಆಗಿದೆಯೆಂಬುದನ್ನು ನಾವು ಸ್ವಲ್ಪ ಯೋಚಿಸಿದಲ್ಲಿ ಕಾಣಬಹುದಾಗಿದೆ. ಮಹಾವೀರರು ತೀರ್ಥಂಕರರ ಪರಂಪರೆಯಲ್ಲಿ ಸಾಗಿ ಪ್ರಾಣಿಮಾತ್ರನ ಸಮ್ಮಾನ ಮಾಡುವ ಮಾತನ್ನು ಹೇಳಿದ್ದರು; ಅವರು ಜನತಂತ್ರದ್ದಲ್ಲ ಅಪಿತು ಪ್ರಾಣತಂತ್ರದ ಪ್ರತಿಪಾದಕರಾಗಿದ್ದರು. ಯಾವ ಪಂಚಾಂಗದಲ್ಲಿ ಕರುಣೆಯು ಸಂಪೂರ್ಣ ಪ್ರಖರತೆಯೊಂದಿಗೆ ಪ್ರಜ್ವಲಿಸುತ್ತಿದೆಯೋ ಅಂತಹ ಪ್ರಾಣತಂತ್ರದ ಪ್ರತಿಪಾದಕರಾಗಿದ್ದರು. ಪೂ. ಏಲಾಚಾರ್ಯರ ಅರುವತ್ತೊಂದನೆಯ (61) ವರ್ಷದಲ್ಲಿ ಪ್ರವೇಶವು ಇದೇ ಪ್ರಾಣತಂತ್ರದ ವರ್ಷಗ್ರಂಥಿಯಾಗಿದೆ. ಈ ತಂತ್ರವು ಅಮರವಾಗಿದೆ, ಅನಂತವಾಗಿದೆ. ಆದುದರಿಂದ ವಿದ್ಯಾನಂದತ್ವವು ಕೂಡಾ ಅಷ್ಟೇ ಅಮರವಾಗಿದೆ, ಅನಾದಿಯಾಗಿದೆ, ಅನಂತವಾಗಿದೆ. ನಾವು ಆತ್ಮದೀಪದ ಈ ಅಖಂಡ–ಅಕಂಪ ಜ್ಯೋತಿಗೆ ಪ್ರಣಾಮ ಮಾಡುತ್ತೇವೆ.

ಪ್ರಸ್ತುತ ಸಂದರ್ಭದಲ್ಲಿ ಪ. ಪೂ. ಏಲಾಚಾರ್ಯರ ಜಿನಶಾಸನ ಪ್ರಭಾವನಾ ಕೊಡುಗೆಯನ್ನು ಯತ್ಕಿಂಚಿತ್ ಸ್ಮರಿಸದಿದ್ದರೆ ಲೋಪದೋಷವಾಗದಿರದು. ಶ್ರವಣ-ಬೆಳಗೊಳದ ಸಹಸ್ರಾಬ್ದಿ ಮಹೋತ್ಸವವಂತೂ ವಿಶ್ವಕ್ಕೆಯೇ ಒಂದು ಮಹತ್ತ್ವರ ಕೊಡುಗೆಯಾಗಿದೆ. ಶ್ರವಣಬೆಳಗೊಳದ ಪ್ರತ್ಯೇಕ ಕಣವು ಏಲಾಚಾರ್ಯರ ದಿವ್ಯ ಯಶೋಗಾಥೆಯನ್ನೇ ಸಾರಿ-ಸಾರಿ ಹೇಳುತ್ತಿದೆ; ಅದನ್ನೆಂದಿಗೂ ಅಳಿಸಗಳೆಯಲು ಸಾಧ್ಯವೇ ಇಲ್ಲ. ಧರ್ಮಚಕ್ರಪ್ರವರ್ತನೆ, ಜನಮಂಗಲ ಕಲಶದ ಮೂಲಕ ಭಾರತಾ-ದ್ಯಂತ ಜೈನ ಧರ್ಮದ 'ಅನೇಕಾಂತ ಸ್ಯಾದ್ವಾದ'ವು ಪ್ರತ್ಯಕ್ಷೀಕೃತವಾಗಿ ಜಿನಶಾಸನವು ಮನೆ–ಮನೆಯಲ್ಲಿ ಬೆಳಗುವಂತಾಯಿತು. ಮಹಾವೀರರ 2500ನೆಯ ಪರಿನಿರ್ವಾಣ ಮಹೋತ್ಸವದ ಶುಭಾವಸರದಲ್ಲಿ ಸಮಾಜ ಮತ್ತು ಸಮಸ್ತ ದೇಶದಲ್ಲಿ, ಪ್ರಾಯಃ ವಿದೇಶಗಳಲ್ಲಿ ಕೂಡಾ ಮಹಾವೀರರ ಜನಕಲ್ಯಾಣಕಾರಿ ಉಪದೇಶಗಳಿಂದ ಯಾವ ಚೇತನೆಯು ಜಾಗೃತವಾಯಿತೋ, ಅದರ ಸಂಪೂರ್ಣ ಶ್ರೇಯಸ್ಸು ಕೇವಲ ಪ.ಪೂ. ಏಲಾಚಾರ್ಯರಿಗೆ ಎಂಬುದು ಸರ್ವ ಜನವಿದಿತವಾಗಿದೆ. ಪೂಜ್ಯ ಏಲಾಚಾರ್ಯ ವಿದ್ಯಾನಂದರ ತಪಸ್ಯೆ ಮತ್ತು ಪ್ರೇರಣೆ ಹಾಗೂ ಸಾಧನೆಯಿಂದ ಶ್ರವಣಬೆಳಗೊಳದ ಭಗವಾನ್ ಬಾಹುಬಲಿ ಮೂರ್ತಿ ಪ್ರತಿಷ್ಠಾಪನೆಯ ಸಹಸ್ರಾಬ್ದಿ ಮಹೋತ್ಸವವು 'ನ ಭೂತೋ ನ ಭವಿಷ್ಯತಿ' ರೂಪದಲ್ಲಿ ಅಭೂತಪೂರ್ವವಾಗಿ ಜರುಗಿ, ಒಂದು ಇತಿಹಾಸವನ್ನೇ ನಿರ್ಮಿಸಿತು. ಈ ದೃಷ್ಟಿಯಿಂದ ಪ. ಪೂ. ಏಲಾಚಾರ್ಯರ ಹೆಸರನ್ನು ಶ್ರವಣಬೆಳಗೊಳದಲ್ಲಿ ಸ್ವರ್ಣಾಕ್ಷರದಲ್ಲಿ ಅಜರಾಮರವಾಗುವಂತೆ ಮುದ್ರಿಸು ವುದು ಸದ್ಭಕ್ತರ ಆದ್ಯ ಹಾಗೂ ಪುನೀತ ಕರ್ತವ್ಯವಾಗಿದೆ.

ದೆಹಲಿಯಲ್ಲಿ ಕೆಲವು ವರುಷಗಳಿಂದ 'ಮಾಸ್ಟರ್ ಪ್ಲೇನ್' ಹಾಕಿ ಸಹಸ್ರಾಬ್ದಿ ಮಹೋತ್ಸವದ ಬಗ್ಗೆ ಅನವರತ ಸಹಸ್ರಶಃ ಮೈಲು ದೂರದಲ್ಲೇ ಕುಳಿತು ಶ್ರವಣ-ಬೆಳಗೊಳದ ಕಣ–ಕಣದ ಚಿಂತೆಯನ್ನು ಮಾಡಿದ ಶ್ರವಣಬೆಳಗೊಳದ 'ಆಧುನಿಕ ಶಿಲ್ಪಿ'–'ಅಧುನಾತನ ಧರ್ಮಚಕ್ರಪ್ರವರ್ತಕ' ಪೂ. ಏಲಾಚಾರ್ಯರ ಸಹಸ್ರಾಬ್ದಿ ಮಹೋತ್ಸವದ ಕೊಡುಗೆಯನ್ನು ವರ್ಣಿಸುವುದು ಯಾ ಬರೆಯುವುದು ಈ ಲೇಖನಿಗೆ ಅಸಾಧ್ಯ. ಶ್ರವಣಬೆಳಗೊಳ ಕ್ಷೇತ್ರದ ಬಾಹುಬಲಿಗೆ ಸಹಸ್ರ ವರುಷಗಳಲ್ಲಿ ಸಿಗದ ಕೀರ್ತಿಯು ಪೂ. ಏಲಾಚಾರ್ಯರ ಅಭೀಕ್ಷ್ಣ ಚಿಂತನೆ ಮತ್ತು ತಪಶ್ಚರ್ಯೆಯಿಂದ ಸಹಸ್ರ ದಿವಸಗಳಲ್ಲಿ ಸಿಕ್ಕಿ ಸಹಸ್ರಾಬ್ದಿ ಮಹೋತ್ಸವದ ಸಂದರ್ಭದಲ್ಲಿ ವಿಶ್ವದಲ್ಲೇ ವ್ಯಾಪಕರೂಪದಲ್ಲಿ ಬಾಹುಬಲಿಯ ಕೀರ್ತಿಯು ಪಸರಿಸಿ ವಿಶ್ವಮಾನವತೆಗೆ ತನ್ಮೂಲಕ ಅಹಿಂಸೆ, ಅನೇಕಾಂತ, ಅಪರಿಗ್ರಹದ ಸಂದೇಶವು ಮನೆ-ಮನೆಗೆ ತಲುಪುವಂತಾಯ್ತು. ಶ್ರವಣಬೆಳಗೊಳದ ಒಂದೊಂದು ಕಲ್ಲೂ ಪ. ಪೂ. ಏಲಾಚಾರ್ಯರಿಗಿಂದು ಕೃತಜ್ಞ ವಾಗಿದೆ.

ಭಗವಾನ್ ಮಹಾವೀರರ ಧರ್ಮಚಕ್ರ ವಿಶ್ವಾದ್ಯಂತ ಪರಿನಿರ್ವಾಣ ಮಹೋ-ತ್ಸವದ ಪ್ರಸಾರ, ಜನಮಂಗಲ ಕಲಶ ಹಾಗೂ ಸಹಸ್ರಾಬ್ದಿ ಮಹೋತ್ಸವ ಈ ಎಲ್ಲಾ ಕಾರ್ಯಗಳಲ್ಲಿ ಸ್ವ। ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು ಹಾಗೂ ಭಾರತ ಸರಕಾರವು ಸಕ್ರಿಯವಾಗಿ ಪಾಲುಗೊಳ್ಳುವಂತೆ ಮಾಡಿದ ಸಂಪೂರ್ಣ

ಶ್ರೇಯಸ್ಸು 'ಏಕಮೇವಾದ್ವಿತೀಯ'ರಾದ ಪ. ಪೂ. ವಿದ್ಯಾನಂದರಿಗೆ ಸಲ್ಲತಕ್ಕದ್ದೆಂಬುದು ನಿರ್ವಿವಾದ. ಎಷ್ಟು ಬರೆದರೂ ಸೂರ್ಯನಿಗೆ ದೀಪವನ್ನು ತೋರಿದಂತೆಯೇ ಆಗುತ್ತದೆ. 'ವಿಜ್ಞೇಷು ಕಿಮಧಿಕಮ್'?

— ಷಷ್ಠಿ ಪೂರ್ತಿಯ ಈ ಶುಭ ಸಂದರ್ಭದಲ್ಲಿ —

"ಣಮೋ ಏಲಾಇರಿಯಾಣಂ"

× × ×

ಪ. ಪೂ. ಏಲಾಚಾರ್ಯ ವಿದ್ಯಾನಂದ ಮುನಿ ಮಹಾರಾಜರ ಷಷ್ಠ್ಯಬ್ದಿಯ ಉಪಲಕ್ಷ್ಯದಲ್ಲಿ ಆಯೋಜಿಸಲ್ಪಡುವ 'ಸಮಾರೋಹ'ವನ್ನು ಅಖಿಲ ಭಾರತೀಯ ಸ್ತರದಲ್ಲಿ ಆಚರಿಸಲು ಇಂದೋರ್ ಸಮಾಜ (ಮಧ್ಯ ಪ್ರದೇಶ)ವು ಎಲ್ಲರನ್ನೂ ಆಹ್ವಾನಿಸಿದೆ ಮತ್ತು ತ್ರಿದಿವಸೀಯ ಕಾರ್ಯಕ್ರಮವನ್ನಿಟ್ಟಿದೆ. ಎಪ್ರಿಲ್ 22, 1985ಕ್ಕೆ ಸಮಸ್ತ ದೇಶದಲ್ಲಿ ಪ್ರಾರ್ಥನೆಗಳ ಮೂಲಕ ಸಭೆ, ಗೋಷ್ಠಿಗಳೊಂದಿಗೆ ಶಾಕಾಹಾರ ಪ್ರಚಾರ ಮತ್ತು ನೈತಿಕ ಮೂಲ್ಯಗಳ ಜಾಗರಣೆ, ಚಾರಿತ್ರ ವಿಕಾಸದ ವರ್ಷವನ್ನಾಚರಿಸುವ ಯೋಜನೆಯು ಬಹಳ ಸುಂದರವಾಗಿದೆ, ಲಾಭಪ್ರದವಾಗಿದೆ ಮತ್ತು ಈ ಭೌತಿಕ ಯುಗದಲ್ಲಿ ಅತ್ಯಧಿಕ ಆವಶ್ಯಕವಾಗಿದೆ.

ಚಾರಿತ್ರಿಕ ದೃಷ್ಟಿಯಿಂದ ಸಮಾಜದಲ್ಲಿ ಬಹಳಷ್ಟು ವಿಕೃತಿಗಳು ಬಂದಿವೆ. ನಾವು ಉಚ್ಚ ಚರಿತ್ರವಂತರೆಂದು ಉದ್ಘೋಷಿಸುತ್ತೇವೆ. ನಮ್ಮನ್ನು ನಾವೇ. ಆದರೆ ಜೀವನದಲ್ಲಿ, ಆಚರಣೆಯಲ್ಲಿ ಚಾರಿತ್ರ ಧರ್ಮವು ಎಷ್ಟಿದೆ ಎಂಬುದರ ಮೇಲೆ ಪ್ರಶ್ನ-ವಾಚಕ ಚಿಹ್ನೆಯು ಅಂಕಿಸಲ್ಪಟ್ಟಿದೆ.

ಒಂದು ಪಂಗಡವು ಕ್ರಿಯಾಕಾಂಡವನ್ನೇ ಧರ್ಮವೆಂದು ತಿಳಿದು ಅದರಲ್ಲೇ ತನ್ಮಯವಾಗಿದೆ. ಇನ್ನೊಂದು ಕಡೆ ಯುವಕ ವರ್ಗವು ಕ್ರಿಯಾಕಾಂಡವನ್ನು ವ್ಯರ್ಥವೆಂದು ತಿಳಿದು ಧರ್ಮದ ಬಗ್ಗೆ ಅರುಚಿಯನ್ನು ತೋರಿಸುತ್ತಿದೆ. ಎರಡರ ಸಾಮಂಜಸ್ಯವು ಕೂಡಿಬರುವುದಿಲ್ಲ. ದೇಶದಲ್ಲೇಳುತ್ತಿರುವ ಭೌತಿಕ ಗಾಳಿಯಲ್ಲಿ ತಿರುಗುತ್ತಿದ್ದಾರೆ. ಇದರ ಮೇಲೆ ನಿಯಂತ್ರಣ ಬೇಕಾಗಿದೆ ಮತ್ತು ಉಚಿತ ಮಾರ್ಗದರ್ಶನವನ್ನು ಪಡೆದು ಜೀವನವನ್ನು ಆ ರೂಪದಲ್ಲಿ ಹಾಕಬೇಕಾಗಿದೆ.

ಈ ಯುಗದಲ್ಲಿ ಪ. ಪೂ. ಏಲಾಚಾರ್ಯರ ಪ್ರೇರಣೆಯಿಂದ ಅಭೂತಪೂರ್ವ ಮಹಾನ್ ಕಾರ್ಯಗಳಾಗಿವೆ. ಸಹಸ್ರಶಃ ವರುಷಗಳಲ್ಲಿ ಆಗದಂತಹ ಅನೇಕ ಪುನೀತ ಕಾರ್ಯಗಳಾಗಿವೆ. ಪೂ. ಏಲಾಚಾರ್ಯರು ಸರ್ವ ಮಾನ್ಯ ಹಾಗೂ ಎಲ್ಲರ ಶ್ರದ್ಧಾಸ್ಪದರಾಗಿದ್ದಾರೆ. ಅವರ ವಾಣಿಯಲ್ಲಿ ಶಕ್ತಿಯಿದೆ. ಅವರು ಏಕ-ಸೂತ್ರದಲ್ಲಿ ಎಲ್ಲರನ್ನೂ ಗುಂಪಿಸಬಲ್ಲರು. ಈ ಅವಸರದಿಂದ ನಾವೆಲ್ಲರೂ ಲಾಭ ಪಡೆಯಬೇಕಾಗಿದೆ. ಈ ವರ್ಷದಲ್ಲಿ ನೈತಿಕತೆ, ಸದಾಚಾರ, ಅಹಿಂಸೆ ಮತ್ತು

ಧರ್ಮತತ್ತ್ವದ ನೈಜ ಪಾಠವನ್ನೋದಿ ಅದನ್ನು ಜೀವನದಲ್ಲಿ ಆಚರಿಸಿದಲ್ಲಿ ಬಹಳ ಉಪಯೋಗಿಯಾದೀತು. ನಾವು ಸುಧಾರಿಸಿ ನಮ್ಮ ಚಾರಿತ್ರಿಕ ಬಲವು ವೃದ್ಧಿಯಾಗಿ ನಾವು ವಾಸ್ತವಿಕ ಜೈನರೆಂದು ಹೇಳಲ್ಪಡುವ ಅಧಿಕಾರಿಗಳಾಗುವೆವು. ನಿಜವಾಗಿಯೂ ಹಾಗೆ ಮಾಡಿದಲ್ಲಿ ನಾವೆಲ್ಲರೂ ನಮ್ಮ ಶ್ರದ್ಧಾಸ್ಪದರಿಗೆ ಈ ಸರ್ವ ಗುರುದಕ್ಷಿಣೆಯ ರೂಪದಲ್ಲಿ ಸಮ್ಯಕ್ ಕೊಡುಗೆಯನ್ನು ನೀಡುವ ಪಾತ್ರರಾಗುತ್ತೇವೆ.

॥ ವರ್ಧತಾಂ ಜಿನಶಾಸನಂ ॥

॥ ಜೈನಂ ಜಯತು ಶಾಸನಂ ॥



# ಪ್ರಥಮ ಖಂಡ

## ಶ್ರದ್ಧಾಂಜಲಿ ಖಂಡ
## (ವ್ಯಕ್ತಿತ್ವ ಮತ್ತು ವಿಶೇಷತೆ)

**ವಿಷಯಾನುಕ್ರಮ:**



ಪ. ಪೂ. ಪೂಜ್ಯಪಾದ ಸಿದ್ಧಾಂತ ಚಕ್ರವರ್ತಿ
ಏಲಾಚಾರ್ಯ ವಿದ್ಯಾನಂದ ಮುನಿ ಮಹಾರಾಜರು
**H. H. Siddhanta Chakravarty Elacharya Vidyananda Muni Maharaj**



ಲೋಕಾನುಗ್ರಹನಿರತ ಮುನಿಪುಂಗವ ಪೂ. ವಿದ್ಯಾನಂದರು.





'ವಿಶ್ವಧರ್ಮ'ದ ಮಹಾನ್ ಸಂದೇಶವನ್ನು ವಿಶಾಲ ಜನತೆಗೆ ನೀಡುತ್ತಿರುವ
ಪ. ಪೂ. ಏಲಾಚಾರ್ಯ ವಿದ್ಯಾನಂದರು.



ಭಟ್ಟಾರಕತ್ರಯರ ಉಪಸ್ಥಿತಿಯಲ್ಲಿ ಪೂ. ವಿದ್ಯಾನಂದರು.



ಪ. ಪೂ. ಏಲಾಚಾರ್ಯ ವಿದ್ಯಾನಂದರು ಮತ್ತು ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು.

## ಪರಮಪೂಜ್ಯ ಜಗದ್ಗುರು ಸ್ವಸ್ತಿ ಶ್ರೀ
## ಶ್ರೀ ದೇವೇಂದ್ರಕೀರ್ತಿ ಭಟ್ಟಾರಕ
## ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರು

ಶ್ರೀ ಹೊಂಬುಜ ಜೈನ ಮಠ

ಅಂಚೆ ಕಛೇರಿ: ಹೊಂಬುಜ – ೫೭೭೪೩೬, ಶಿವಮೊಗ್ಗ ಜಿಲ್ಲೆ, ಕರ್ನಾಟಕ ರಾಜ್ಯ.

ರಾಷ್ಟ್ರಸಂತ

## ಏಲಾಚಾರ್ಯ ಶ್ರೀ ವಿದ್ಯಾನಂದ ಮುನಿಮಹಾರಾಜರ
## 'ಷಷ್ಟ್ಯಬ್ಧಿ ಸಮಾರಂಭ'ದ

**ಶುಭಪ್ರಸಂಗದಲ್ಲಿ ಪೂಜ್ಯ ಏಲಾಚಾರ್ಯರ ಗೌರವಾರ್ಥವಾಗಿ ವಿವೇಕಾಭ್ಯುದಯ ಪತ್ರಿಕೆಯು ವಿಶೇಷ ಸಂಚಿಕೆಯೊಂದನ್ನು ಪ್ರಕಟಿಸಲು ಉದ್ದೇಶಿಸಿರುವುದು ಪ್ರಶಂಸನೀಯವಾಗಿದೆ.**

ಪರಮಪೂಜ್ಯ ವಿದ್ಯಾನಂದ ಮುನಿಮಹಾರಾಜರು ದಿಗಂಬರ ಮುನಿಯಾಗಿ ತನ್ನ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುತ್ತಿರುವ ಜೊತೆಗೆ ಸಮಷ್ಟಿಯ ಹಿತಕ್ಕಾಗಿಯೂ ಶ್ರಮಿಸುತ್ತಿರುವುದು ಸರ್ವವಿದಿತ. ದೇಶ, ಧರ್ಮ, ಕಾಲಗಳನ್ನು ಅರ್ಥಮಾಡಿಕೊಂಡು ಈ ರಾಷ್ಟ್ರದ ಹಿತಚಿಂತನೆಯನ್ನು ಮಾಡುತ್ತಿರುವವರಲ್ಲಿ ಅವರೂ ಒಬ್ಬರು. ರಾಷ್ಟ್ರದ ಏಕತೆ ಮತ್ತು ಅಖಂಡತೆಗಳು ಚಿರಕಾಲ ಉಳಿಯಬೇಕೆಂಬ ಅವರ ಕಳಕಳಿ ನಿಜಕ್ಕೂ ಶ್ಲಾಘನೀಯವಾದುದು. 'ದೇಶ ಉಳಿದರೆ ಧರ್ಮ ಉಳಿಯುತ್ತದೆ' ಎಂಬ ಅವರ ಉಕ್ತಿಯು ಸರ್ವಜನಾದರಣೀಯವಾದುದು. ಅವರ ಪ್ರವಚನಗಳಲ್ಲಿ ಸದಾ ರಾಷ್ಟ್ರೀಯ ಭಾವೈಕ್ಯತೆಯ ಧ್ವನಿಯು ಪ್ರತಿಧ್ವನಿಸುತ್ತಿರುತ್ತದೆ. ರಾಷ್ಟ್ರ ಮತ್ತು ಜನಾಂಗದ ಉಳಿಯು ಮತ್ತು ಸಮುನ್ನತಿನಯನ್ನು ಬಯಸುತ್ತಿರುವ ಅಪರೂಪದ ಸಂತರಲ್ಲಿ ಪೂಜ್ಯ ಮುನಿ ವಿದ್ಯಾನಂದರೂ ಒಬ್ಬರು. ಆದುದರಿಂದಲೇ ಅವರು ರಾಷ್ಟ್ರಸಂತರು.

ರಾಷ್ಟ್ರಸಂತ ಪರಮಪೂಜ್ಯ ವಿದ್ಯಾನಂದ ಮುನಿಮಹಾರಾಜರ ಷಷ್ಟ್ಯಬ್ಧಿ ಸಮಾರಂಭವು ಯಶಸ್ವಿಯಾಗಿನೆರವೇರಲೆಂದು ಈ ಸಂದರ್ಭದಲ್ಲಿ ಪ್ರಕಟವಾಗರುವ ವಿವೇಕಾಭ್ಯುದಯ ವಿಶೇಷಾಂಕವು ವಿದ್ವಜ್ಜನರ ಪ್ರೌಢ ಲೇಖನಗಳಿಂದ ಸರ್ವಾಂಗ ಸುಂದರವಾಗಿ ಪ್ರಕಟಗೊಂಡು ತನ್ನ ವಿಶಿಷ್ಟ ಗುರಿಯನ್ನು ತಲುಪಲೆಂದೂ ಭಗವಾನ್ ಶ್ರೀ ೧೦೦೮ ಪಾರ್ಶ್ವನಾಥಸ್ವಾಮಿ ಮತ್ತು ಶ್ರೀಮಹಾದೇವಿ ಪದ್ಮಾವತೀ ಸನ್ನಿಧಿಯಲ್ಲಿ ಪ್ರಾರ್ಥಿಸುತ್ತಾ ಈ ಮೂಲಕ ಆಶೀರ್ವದಿಸಲಾಗಿದೆ.

ಶ್ರೀ ಹೊಂಬುಜ ಅತಿಶಯ ಮಹಾಕ್ಷೇತ್ರ,
ಶಿವಮೊಗ್ಗ ಜಿಲ್ಲೆ,
ಕರ್ನಾಟಕ.
ದಿ. ೫-೨-೧೯೮೫.

ಇತೀ ಶುಭಾಶೀರ್ವಾದಗಳು
**ಪರಮಪೂಜ್ಯ ಜಗದ್ಗುರು**
**ಸ್ವಸ್ತಿ ಶ್ರೀ ದೇವೇಂದ್ರಕೀರ್ತಿ ಭಟ್ಟಾರಕ**
**ಮಹಾಸ್ವಾಮಿಗಳವರು.**

# Swasthi Sri Lalithakeerthi Bhattaraka Swameeji.

**Danasala Sri Jaina Mutt,**
KARKALA - 574104, D. K.

Date 15-3-1985.

ಪರಮ ಪೂಜ್ಯ ವಿಶ್ವಧರ್ಮ ಪ್ರರೂಪಕ, ಸಿದ್ಧಾಂತ ಚಕ್ರವರ್ತಿ, ಏಲಾಚಾರ್ಯ 108 ಮುನಿಶ್ರೀ ವಿದ್ಯಾನಂದ ಮಹಾರಾಜರ ಷಷ್ಟ್ಯಬ್ದಿ ಸಮಾರಂಭವನ್ನು ಸ್ಯಾದ್ವಾದ ಲೋಕದ ಹಿರಿಯ ಪತ್ರಿಕೆ 'ವಿವೇಕಾ-ಭ್ಯುದಯ' 'ವಿನಯಾಂಜಲಿ ವಿಶೇಷಾಂಕ' ಪೂರ್ವಕ ಗೌರವ ಸಲ್ಲಿಸು ವುದು ಸಕಾಲಿಕವೂ, ಸಾರ್ಥಕ್ಯವೂ ಮಾತ್ರವಲ್ಲ 'ನ ಹಿ ಕೃತಮುಪ ಕಾರಂ ಸಾಧವೋ ವಿಸ್ಮರಂತಿ' (-ಮುನಿ ವಿದ್ಯಾನಂದಿ) ಎಂಬ ಆಚಾರ್ಯ ವಚನಕ್ಕೆ ಸಕ್ರಿಯಾಲಂಕಾರವಾಗಿರುವುದು ನಮಗೆ ಪರಮಾನಂದವಾಗಿದೆ.

2500ರ ಶ್ರೀಮಹಾವೀರ ಸ್ವಾಮಿಯ ನಿರ್ವಾಣ ಪರ್ವ, ಜನ-ಮಂಗಲ ಕಲಶ ವಿಹಾರ, ಶ್ರವಣಬೆಳಗೊಳ ಶ್ರೀಗೊಮ್ಮಟ ಸಹಸ್ರಾಬ್ದಿ ಮಸ್ತಕಾಭಿಷೇಕ ಮುಂತಾದ ನೂರಾರು ನಿತ್ಯ ನೂತನ ಪ್ರೋನ್ನತ ಯೋಜನೆಗಳಿಂದ ಅನೇಕಾಂತ ಲೋಕದ ಅಂತಃಶ್ರೀಯನ್ನು ಮೇರುವಿ ಗೇರಿಸಿ ಮೆರೆದ ಮಹಾರಾಜರು ನಮ್ಮ ಶ್ರೀ ಪೀಠದತ್ತ ಚಿತ್ತೈಸಿ ಸಾಗಾರ ಜಗತ್ತಿಗೆ ಸಾತಿಶಯ ಸಮ್ಯಕ್ತ್ವ ಸಂಪತ್ತನ್ನು ಸುರಿದರು. ಈ 20ನೇ ಶತಮಾನದಲ್ಲಿ ಅನೇಕಾಂತ ಲೋಕದ ಪ್ರಾತಃ ಸ್ಮರಣೀಯ ಅಮರ ಶಿಲ್ಪಿ ಸ್ವಸ್ತಿಶ್ರೀ ನೇಮಿಸಾಗರ ವರ್ಣಿಜಿಯವರ 'ಸ್ಮಾರಕ ಭವನ' ಆಯೋ-ಜಿಸಲ್ಪಟ್ಟು ಅದರಲ್ಲಿ ಸ್ವಾಧ್ಯಾಯ ಮಂದಿರ, ಸ್ಯಾದ್ವಾದ ಗ್ರಂಥಾಲಯ, ಮುನಿ ನಿವಾಸ. ಯಾತ್ರಿಕರ ವ್ಯವಸ್ಥೆ, 18 ಶ್ರೀಜಿನ ಮಂದಿರ ಜೀರ್ಣೋ-ದ್ಧಾರ, ನಿತ್ಯ ಪೂಜಾ ವ್ಯವಸ್ಥೆ ನಿರ್ಣಯಿಸಲ್ಪಟ್ಟಿತು;

ಅಂತಾರಾಷ್ಟ್ರೀಯ ಅಪಾರ ಕೀರ್ತಿವೆತ್ತ ಶ್ರೀ ಶ್ರೀ ಮಹಾರಾಜರ ಷಷ್ಟ್ಯಬ್ದ ಮಹೋತ್ಸವಕ್ಕೆ ಈ ಸಾಹಸದ ಮೂಲಕ ಶಕ್ತಿ ಮೀರಿ ವಿನ-ಯಾಂಜಲಿ ಸಮರ್ಪಿಸುತ್ತಿರುವ ನಮ್ಮ ಮೂಡುಬಿದ್ರಿ ಶ್ರೀ ಶ್ರೀಗಳವರ ಪ್ರಭಾವನಾಂಗ ಸರ್ವಾಂಗ ಸುಂದರವಾಗಿ ಶೋಭಿಸಲಿ ಆ ಸರ್ವೋದಯ ತೀರ್ಥ ಸರ್ವರಲ್ಲಿ ಹರಿದಾಡಿ ಪುರುಪರಮೇಶನ ಪವಿತ್ರ ಪರಂಪರೆಯ ಪರಿಮಳ ವಿಶ್ವವ್ಯಾಪಿಯಾಗಿ ಪಸರಿಸಲೆಂದು ಸದಾ ಹಾರೈಸುತ್ತೇವೆ.

ಇತಿ ವರ್ಧತಾಂ ಜಿನಶಾಸನಂ

**(ಶ್ರೀ ಲಲಿತಕೀರ್ತಿ ಸ್ವಾಮೀಜಿ)**

# His Holiness Sri Madabhinava Laxmisena Bhattaraka Pattacharyavarya Swamiji,

**Basti Mutt, Narasimharajapura - 577134**

**(Karnataka.)**

6243

ಪ. ಪೂ. ಸಿದ್ಧಾಂತ ಚಕ್ರವರ್ತಿ ಏಲಾಚಾರ್ಯ ವಿದ್ಯಾನಂದ ಮುನಿ ಮಹಾರಾಜರು ವಿಂಶತಿ ಶತಾಬ್ದಿಯ ಮಹಾನ್ ಜಿನಶಾಸನ ಪ್ರಭಾವಕರೂ, 'ಸದ್ಧರ್ಮ ರತ್ನಾಕರ'ರೂ, ಯುಗ ಪ್ರವರ್ತಕ ಧರ್ಮ ನೇತಾರರೂ ಆಗಿರುತ್ತಾರೆ. 2500ನೇ ಪರಿನಿರ್ವಾಣ ಮಹೋತ್ಸವ, ಜನಮಂಗಲ ಮಹಾಕಲಶ, ಶ್ರಮಣ ಸಂಸ್ಕೃತಿ ಪ್ರಸಾರಕ ಮಹಾನ್ ಕಾರ್ಯಗಳು ಪೂ. ಏಲಾಚಾರ್ಯರ ಅವಿಸ್ಮರಣೀಯ ಹಾಗೂ ಐತಿಹಾಸಿಕ ಪುನೀತ ಕೊಡುಗೆಗಳಾಗಿವೆ. ಅಖಿಲ ಭಾರತೀಯ ಸ್ತರದಲ್ಲಿ ಅವರ ಷಷ್ಠಿ ಪೂರ್ತಿ ಮಹೋತ್ಸವವನ್ನು ಆಚರಿಸಲಾಗುತ್ತಿದೆ. ಇಂತಹ ಪವಿತ್ರ ಸಂದರ್ಭದಲ್ಲಿ ಜೈನ ಸಮಾಜದ ಪ್ರಮುಖ 'ವಿವೇಕಾಭ್ಯುದಯ'ವು 'ಷಷ್ಠ್ಯಬ್ದಿ ವಿನಯಾಂಜಲಿ ವಿಶೇಷಾಂಕ'ವನ್ನು ಪ್ರಕಟಿಸುತ್ತಿರುವುದು ಸರ್ವಥಾ ಸ್ತುತ್ಯ, ಸಾಮಯಿಕ ಹಾಗೂ ಪ್ರಶಂಸನೀಯವಾಗಿದೆ. 'ವಿಶೇಷಾಂಕ'ಕ್ಕೆ ನಮ್ಮ ಹಾರ್ದಿಕ ಶುಭಾಶಯಗಳು ಮತ್ತು ಪೂ. ಏಲಾಚಾರ್ಯರಿಗೆ ತ್ರಿವಾರ ನಮೋಸ್ತು, ನಮೋಸ್ತು, ನಮೋಸ್ತು.

॥ ವರ್ಧತಾಂ ಜಿನಶಾಸನಂ ॥

**ಸ್ವಸ್ತಿಶ್ರೀ ಲಕ್ಷ್ಮೀಸೇನ ಭಟ್ಟಾರಕ**
**ಪಟ್ಟಾಚಾರ್ಯವರ್ಯ ಸ್ವಾಮಿಗಳು,**
ಬಸ್ತಿಮಠ, ನರಸಿಂಹರಾಜಪುರ,
(ಕರ್ನಾಟಕ.)

ದೂರವಾಣಿ: ಕಛೇರಿ: 72536.
ನಿವಾಸ: 365562.

**ಜಿ. ಬಸವಣ್ಣಪ್ಪ, ಬಿ.ಎಸ್‌ಸಿ.,**
ಆಹಾರ ಮತ್ತು ನಾಗರಿಕ
ಸರಬರಾಜು ಸಚಿವರು.
MFCS / 26-4-85.

ವಿಧಾನ ಸೌಧ, ಬೆಂಗಳೂರು - 1.
ದಿನಾಂಕ: 24-1-1985.

## ಸಂದೇಶ

ಪರಮಪೂಜ್ಯ ಸಿದ್ಧಾಂತ ಚಕ್ರವರ್ತಿ ಏಲಾಚಾರ್ಯ 108 ಮುನಿಶ್ರೀ ಸ್ವಾಮೀಜಿಯವರು ಇದೇ 61ನೇ ವರುಷಕ್ಕೆ ಕಾಲಿಡುವ ಮುನ್ನಾ ದಿನದಂದು ಅವರ ಜನ್ಮ ದಿನಾಚರಣೆ ಆಚರಿಸುವ ವಿಷಯ ತಿಳಿದು ಬಹಳ ಸಂತೋಷವಾಯಿತು. ಶ್ರೀ ಸ್ವಾಮೀಜಿಯವರ ಅಹಿಂಸಾ ತತ್ಪರತೆಯು ಭಾರತದ ಉದ್ದಗಲಕ್ಕೂ ಹರಡಿರುವುದು ಎಲ್ಲರಿಗೂ ವೇದ್ಯವಾದ ವಿಷಯ.

ಪುರಾತನವಾದ ಜೈನ ಮತದ ತತ್ತ್ವ ಮುಖೇನ ಸಾಮಾನ್ಯ ಜನತೆಯ ಉದ್ಧಾರಕ್ಕಾಗಿ ಹಗಲಿರುಳು ಪ್ರಯತ್ನಿಸುತ್ತಲಿರುವ ಪರಮ ಪೂಜ್ಯರ ಜನ್ಮದಿನೋತ್ಸವದಂದು ಅವರಿಗೆ ಗೌರವ ಸೂಚಿಸಲು ಮತ್ತು ದಿಗಂಬರ ಪಂಥ ಹಾಗೂ ಪದ್ಧತಿಯನ್ನು ಪ್ರಚಾರಕ್ಕೆ ಇಂಬುಗೊಡಲು 'ವಿನಯಾಂಜಲಿ' ಎಂಬ ವಿಶೇಷ ಹೊತ್ತಿಗೆಯನ್ನು ಬಿಡುಗಡೆ ಮಾಡಲು ಉದ್ದೇಶಿಸಿರುವುದು ಸಮಯೋಚಿತ ಹಾಗೂ ಸೂಕ್ತ ಕಾರ್ಯವಾಗಿದೆ.

ಪರಮ ಪೂಜ್ಯ ಸ್ವಾಮಿಗಳ ಸೇವೆ ನಮ್ಮ ದೇಶಕ್ಕೆ ಹಾಗೂ ಸಂಸ್ಕೃತಿಯ ಬೆಳವಣಿಗೆಗೆ ಅಗತ್ಯವಾಗಿದೆ. ದಯಾಮಯನಾದ ಆ ಪರಮಾತ್ಮನು ಶ್ರೀ ಸ್ವಾಮೀಜಿಯವರಿಗೆ ಇನ್ನೂ ಹೆಚ್ಚಿನ ಆಯುಸ್ಸು, ಆರೋಗ್ಯ ಕೊಟ್ಟು ಅವರ ಆಶೀರ್ವಾದ ಲೋಕಕಲ್ಯಾಣಕ್ಕೆ ಲಭಿಸಲೆಂದು ಪ್ರಾರ್ಥಿಸುವ.

**(ಜಿ. ಬಸವಣ್ಣಪ್ಪ)**

ಮ್ಯಾನೆಜಿಂಗ್ ಟ್ರಸ್ಟೀ,
ದಿ. ಸಿದ್ಧಾಂತ ಮತ್ತು 18 ಜೈನ ದೇವಾಲಯಗಳ ಸಮೂಹ,
ಮೂಡಬಿದ್ರೆ - ದಕ್ಷಿಣ ಕನ್ನಡ ಜಿಲ್ಲೆ.

*M. Raghupathy,*
*Minister of Education.*

Phone- Office: 72475
Res: 70887
Vidhana Soudha, Bangalore-1.

Dated 19th January, 1985.

## MESSAGE

I am glad to know that in commemoration of the event of H. H. Siddhanta Chakravarthy Elacharya 108 Munishri Vidyananda Muni Maharaj completing his 60th year, it is intended to release a combined volume of "Vivekabhyudaya" a monthly magazine of Jaln Math, Moodbidri and also a souvenir "Vinayanjali."

H. H. Vidyananda Muni Maharaj is an embodiment of Peace and is regarded as a Saint not only by the People of Jain Community but also others. It was under his noble guidance ihat the 2500th Pari Nirvana Mahotsava, the Dharmachakra Pravarthan and the recent Mahamasthakabhisheka of Shravanabelagola were successfully conducted. It is appropriate that the event of completion of 60th year of this great saint is performed with great rejoice and in a befitting manner.

It is my sincere desire that H. H. Vidyananda Muni Maharaj may live for many more years to serve the humanity. I wish the celebrations every success.

**(M. Raghupathy)**
Minister for Education.

The Chairman,
Swasti Sri Bhattarak Charukeerti
Panditacharyavarya Swamy,
Sri Digamber Jain Math,
Moodbidri - 574 227 (D. K.)

Phone: 74429

*VasanthaRao L. Patil,*
*Minister for large & Medium Industries.*

Vidhana Soudha, Bangalore-1.

Dated 21-1-1985.

D.O.No.MLMI/1032/85.

Most Respected Jnanayogi Swasti Sri Bhattaraka Charukeerthi Panditacharyavarya Swamiji,

I am extremely happy to know that you are celebrating Shashtyabdi of H. H. Siddhanta Chakravarthy Elecharya 108 Munishri Vidyananda Muni Maharaj during April 1985. I am also glad to know that you are releasing a souvenir to commemorate the occasion. I really love and admire the great service of H. H. Vidyananda to the suffering humanity.

Pray Almighty to give long life and happiness to H. H. Vidyananda Muniji to serve the humanity. Also convey my best wishes to him on the occasion.

With regards,

Yours Sincerely,

**(V. L. Patil)**

To

Swasti Sri Bhattarak Charukeerti Panditacharyavarya Swamiji,
Sri Digamber Jain Math,
P. O. Moodbidri - 574 227, D. K. District.

**ಶ್ರೀ ಕೆ. ಅಮರನಾಥ ಶೆಟ್ಟಿ,**
ಪ್ರವಾಸೋದ್ಯಮ ಮತ್ತು
ಧಾರ್ಮಿಕ ದತ್ತಿಗಳ ಸಚಿವರು.

ವಿಧಾನ ಸೌಧ, ಬೆಂಗಳೂರು - 1.

ದಿನಾಂಕ: 20-1-1985.

ಜೈನ ಪತ್ರಿಕೆಗಳ ಪೈಕಿ ಪ್ರಾಚೀನತಮವಾದ ತಮ್ಮ ವಿವೇಕಾಭ್ಯುದಯ ಪತ್ರಿಕೆಯು, ಪ್ರಸಿದ್ಧರಾದ ಪರಮ ಪೂಜ್ಯ ಸ್ವಸ್ತಿ ಶ್ರೀ ಏಲಾಚಾರ್ಯ ವಿದ್ಯಾನಂದ ಮುನಿ ಮಹಾರಾಜರಿಗೆ ವಿನಯಾಂಜಲಿ ರೂಪದಲ್ಲಿ ಹೊರಬರುತ್ತಿರುವುದು ಸಂತೋಷದ ಸಂಗತಿ. ತಮ್ಮ ಈ ಕೆಲಸವು ಸಮಯೋಚಿತವಾದುದು, ಶ್ಲಾಘ್ಯವಾದುದು.

ಈ ವಿನಯಾಂಜಲಿ ವಿಶೇಷಾಂಕವು ಮುನಿಶ್ರೀಗಳ ಬಹುಮುಖ ಪ್ರತಿಭೆಯನ್ನು ಪರಿಚಯಿಸುವುದಲ್ಲದೆ, ಜೈನ ಸಮಾಜದಲ್ಲಿ ಒಂದು ಹೊಸ ಜಾಗೃತಿಯನ್ನು ಉಂಟುಮಾಡೀತೆಂದು ನಂಬುತ್ತೇನೆ.

ತಮ್ಮ ಈ ಸ್ತುತ್ಯ ಕಾರ್ಯಕ್ಕೆ ವಂದನೆಗಳು, ವಿವೇಕಾಭ್ಯುದಯದ ಈ ಸಾಧನೆಗೆ ಅಭಿನಂದನೆಗಳು.

**(ಕೆ. ಅಮರನಾಥ ಶೆಟ್ಟಿ)**

**ವೀತರಾಗಾಯ ನಮಃ**

**ಬಿ. ಎ. ಪಾಟೀಲ,**
ಜಿಲ್ಲಾಧಿಕಾರಿಗಳವರ ಕಾರ್ಯಾಲಯ.

ಬೆಳಗಾಂವ್ - 590 002.
ದಿನಾಂಕ: 11-3-1985.

ಸನ್ಮಾನ್ಯರೇ,

ತಾವುಗಳು ವಿವೇಕಾಭ್ಯುದಯ ಮಾಸಿಕದ ಮಾರ್ಚ್ ಎಪ್ರಿಲ್ 1985ರ ಪರಮ ಪೂಜ್ಯ ವಿದ್ಯಾನಂದ ಷಷ್ಟ್ಯಬ್ದಿ ವಿನಯಾಂಜಲಿ ವಿಶೇಷಾಂಕವನ್ನು ಸರ್ವ ಪ್ರಥಮ ವಿಶಿಷ್ಟ ಶೈಲಿಯಲ್ಲಿ ಪ್ರಕಾಶಪಡಿಸುತ್ತಿರುವುದು ಸಂತೋಷದ ಸಂಗತಿ.

'ಈ ವಿಶೇಷಾಂಕವು ಭಾರತದ ಏಕತೆ, ಅಖಂಡತೆಗೆ ಹಾಗೂ ಗೌರವಾರ್ಹತೆಗೆ ಸಹಕಾರ ನೀಡಲಿ, ಸದ್ಧರ್ಮ ಪ್ರಭಾವನೆ ಬೆಳಗಿಸಲಿ ಮತ್ತು ವಿಶ್ವ ಶಾಂತಿಗೆ ಭಗವಾನ್ ಶ್ರೀ ಮಹಾವೀರರ ಅಹಿಂಸೆಯ ಸಂದೇಶವನ್ನು ಸಾರಲಿ' ಎಂದು ಹಾರೈಸುವ,

**(ಬಿ. ಎ. ಪಾಟೀಲ.)**

# ಶ್ರೀ ವಿದ್ಯಾನಂದ ವಿನಯಾಂಜಲಿ ಮಂಗಲಾಷ್ಟಕಮ್

ರಚನೆ– ಶ್ರೀ ಬಿ. ಚಂದ್ರಯ್ಯ, ವಿದ್ವಾನ್, (ಗಮಕಿ), ಮೂಡುಬಿದ್ರಿ.

(ವಾರ್ಧಕ ಷಟ್ಪದಿ)

॥ ೧ ॥

ಶ್ರೀ ದಿಗಂಬರ ಮುನಿವರೇಣ್ಯ ವಿದ್ಯಾನಂದ ।
ಸಾಧಕ ಶಿರೋಮಣಿಯೆ ಸರ್ವಗುಣ ಸಂಪನ್ನ ।
ಭೇದ ವಿಜ್ಞಾನ ಕೋವಿದ ಜೈನಾಗಮಾದಿಗಳನೆಲ್ಲ ತಿಳಿದ ॥
ಸಾಧು ಸನ್ಯಾಸಿಗಳೊಳಗ್ರಗಣ್ಯರುಯೆನಿಸಿ ।
ನಾದ ಮಾಧುರ್ಯದಿಂ ಧರ್ಮಬೋಧಯ ಮಾಳ್ಪ ।
ಹೇ ದಯಾಮೂರ್ತಿ ವಿದ್ಯಾನಂದಯತಿವರರೆ ನಿಮಗಿದೋ ವಿನಯಾಂಜಲಿ ॥

॥ ೨ ॥

ಕನ್ನಡದ ನೆಲದಲ್ಲಿ ಬೆಳಗಾವಿ ಜಿಲ್ಲೆಯಲಿ ।
ಘನತೆವೆತ್ತಿಹ ಶೇಡಬಾಳ ತಾಲೂಕಿನಲಿ ।
ಮನ್ನಣೆಯ ಸತ್ಕೀರ್ತಿವಂತ ದಂಪತಿಗಳಿಗೆ ಸತ್ಪುತ್ರರಾಗಿ ಜನಿಸಿ ॥
ಉನ್ನತಾದರ್ಶನಗಳ ಹೊಂದಿ ವೈರಾಗ್ಯದಿಂ ।
ತನ್ನ ಜೀವನವನಧ್ಯಾತ್ಮ ಸಾಧನೆಗೆ ಸಂ- ।
ಪನ್ನಗೊಳಿಸಿದ ಯತಿವರೇಣ್ಯ ವಿದ್ಯಾನಂದ ನಿಮಗಿದೋ ವಿನಯಾಂಜಲಿ ॥

॥ ೩ ॥

ದೇಶಭೂಷಣರಿಂದ ದೀಕ್ಷೆಯನು ಕೈಗೊಂಡು ।
ದೇಶದುದ್ದಕು ದಿಗಂಬರರಾಗಿ ಸಂಚರಿಸಿ ।
ಕ್ಲೇಶದಿಂ ಪರಿತಪಿಸುತಿರುವ ಜನತೆಗೆ ಸುಬೋಧೆಯದಿತ್ತು, ಮತ್ತವರನು ॥
ತೋಷಗೊಳಿಸುತ, ಸತ್ಯ, ಶಾಂತಿ, ಧರ್ಮಗಳ ಸಂ- ।
ದೇಶವನು ವಿಶ್ವದೆಲ್ಲೆಡೆಗೆ ಪಸರಿಸುವಂತೆ ।
ಘೋಷಿಸುತ, ನಡೆವ ವಿದ್ಯಾನಂದ ಮುನಿವರ್ಯ, ನಿಮಗಿದೋ ವಿನಯಾಂಜಲಿ ॥

॥ ೪ ॥

ಮೊದಲು ಜರುಗಿದ ಮಹಾವೀರ ನಿರ್ವಾಣೋತ್ಸವ- ।
ವದಲಿ, ಮತ್ತಾ ಶ್ರವಣಬೆಳಗೊಳದ ಬಾಹುಬಲಿ- ।
ಗೊದಗಿದ ಮಹಾಮಸ್ತಕಾಭಿಷೇಕದಲಿ, ಧರ್ಮಸ್ಥಳದ ಕ್ಷೇತ್ರದಲ್ಲಿ ॥
ವಿಧಿಯಂತೆ ಬಾಹುಬಲಿ ಪ್ರತಿಮೆಯ ಪ್ರತಿಷ್ಠಾಪಿ ।
ಸಿದ ಕಾರ್ಯಗಳಲಿ, ನೇತೃತ್ವವಹಿಸಿದ ಮಹಾ ।
ಚದುರ ಗುರುವರ್ಯ, ಏಲಾಚಾರ್ಯ ಮುನಿವರ್ಯ, ನಿಮಗಿದೋ ವಿನಯಾಂಜಲಿ ॥

॥ ೫ ॥

ಹಿಂದಿ, ಗುಜರಾಥಿ, ಕನ್ನಡ, ತೆಲುಗು, ಬಂಗಾಳಿ ।
ಸಂಸ್ಕೃತಾಂಗ್ರೇಜಿ, ಪ್ರಾಕೃತ ಭಾಷೆಗಳ ತಿಳಿದ ।
ಸಂಗೀತ ವಿದ್ವತ್ಕಲಾನಿಪುಣ, ವಾಗ್ಮಿ, ಪರಮರ್ಷಿ, ನಿರ್ಗ್ರಂಥ ಮುನಿರ್ಯೆ ॥
ಕುಂದಕುಂದಾಚಾರ್ಯಕೃತ 'ಸಮಯಸಾರ'ವನು ।
ಚಂದದಿಂದೋದಿ ತತ್ತ್ವಾರ್ಥಗಳನರಿತ ಪ್ರ- ।
ಚಂಡ ಸಾಹಸಿಯೆ ವಿದ್ಯಾನಂದ ಮುನಿವರರೆ. ನಿಮಗಿದೋ ವಿನಯಾಂಜಲಿ ॥

॥ ೬ ॥

ಪರಮ ಸದ್ಗುರು, ಪುಣ್ಯರೂಪ, ವಿದ್ಯಾನಂದ ।
ಗುರುವೆ, ಸನ್ಮುನಿಯೆ, ಸ್ಯಾದ್ವಾದ ತತ್ತ್ವಜ್ಞಾನಿ ।
ಸರಸ, ಮೃದು, ಮಧುರ, ವಾಕ್ಚತುರ, ನಿತ್ಯಾನಂದ, ಮುನಿ ಮಹಾರಾಜ ತೇಜ ॥
ವರಶಾಂತಿದೂತ, ಸನ್ಮಂಗಳಾತ್ಮಕ ದಿಗಂ- ।
ಬರಮೂರ್ತಿ, ವರಮುನಿಯೆ, ಸದ್ಗುಣ ಶಿರೋಮಣಿಯೆ ।
ಗುರುವರ್ಯ, ಪೂಜ್ಯ ವಿದ್ಯಾನಂದ ಮುನಿವರ್ಯ ನಿಮಗಿದೋ ವಿನಯಾಂಜಲಿ ॥

॥ ೭ ॥

ಶುದ್ಧ ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ ।
ಸಿದ್ಧಿಯನು ಪಡೆದ ಯೋಗೀಂದ್ರ ವಿದ್ಯಾನಂದ ।
ಸಿದ್ಧಪುರುಷರೆ ನಿಮ್ಮ ಷಷ್ಟ್ಯಬ್ದಿ ಜಗಕೆಲ್ಲ ಸುಖ ಶಾಂತಿಯನ್ನೀಯಲಿ ॥
ಅಧ್ಯಾತ್ಮತತ್ತ್ವಪಾಳವ ಕಂಡ ಪರಮ ಪ್ರ- ।
ಸಿದ್ಧ ಮುನಿಪುಂಗವರೆ, ಜಿನಧರ್ಮರಕ್ಷಕರೆ ।
ಸಿದ್ಧಾಂತ ಚಕ್ರವರ್ತಿಯೆ ನಿಮ್ಮ ಚರಣಾರವಿಂದಕಿದೊ ವಿನಯಾಂಜಲಿ ॥

॥ ೮ ॥

ತುಂಬಿತರುವತ್ತು ವರುಷವು ನಿಮ್ಮ ದೇಹಕೀ ।
ಸಂದರ್ಭದಲ್ಲಿ ಸದ್ಭಕ್ತಿಯಿಂ ತವಪಾದ- ।
ದ್ವಂದ್ವಗಳಿಗರ್ಪಿಸಲು ರಚಿಸಿದ 'ವಿಶೇಷಾಂಕ'ವಿದು ಮಹಾಯೋಗೀಶ್ವರ ॥
ಸುಂದರ ವಿಚಾರ, ವೈವಿಧ್ಯಮಯ ಲೇಖಂಗ- ।
ಳಿಂದ ತೀವಿದ ಸುಶೋಭಿತವಾದ ಕೃತಿಯ ನಾ- ।
ವಿಂದು ನಿಮಗರ್ಪಿಸೆವು, ವಂದ್ಯ ವಿದ್ಯಾನಂದ ನಿಮಗಿದೋ ವಿನಯಾಂಜಲಿ ॥



# ಶ್ರೀ ವಿದ್ಯಾನಂದ ಸ್ತುತಿ

ರಚಯಿತಾ- ಆಸ್ಥಾನ ವಿದ್ವಾನ್ ಪಂ. ಶಿಶುಪಾಲ ಶಾಸ್ತ್ರೀ, ಮೂಡುಬಿದಿರೆ.

ವಿದ್ಯಾನಂದ ಮುನೀಂದ್ರ! ವಂದ್ಯ ಚರಣಂ ನೀಂ ಧರ್ಮಚಕ್ರಂಧರಂ
ದ್ಯಾವಾ ಪೃಥ್ವಿಯ ಚಂದ್ರನೋಲ್ ಚಲಿಸಿದಂ ಷಷ್ಟ್ಯಬ್ದ ಸಂಪೂರ್ಣನುಂ
ನಂದಂ ಶ್ರೀಜನಮಂಗಲಾಂತಕಲಶಂ ನೀಂ ಮಾಳ್ಕೆ ಶ್ರೇಯಸ್ಕರಂ
ದಮನೆಂ ನೀಂ ಮುನಿವರ್ಯ! ಶಾಂತ ಹೃದಯಂ ತತ್ತ್ವೋಪಸಂದೇಶಕಂ
ಉದ್ಧಾವೋತ್ತಮನುಂ ವಿನೀತ ಜನತಾ ಜ್ಞಾನಾಭಿ ಸಂವರ್ಧಕಂ
ಪಾರಂಗಾಮಿ ಪುರಾಣ ವರ್ಣನ ಪಟುಂ ಕ್ಷೇತ್ರಾದಿ ಸಂರಕ್ಷಕಂ
ಧ್ಯಾನಾಸಕ್ತನು ಜೈನ ಧರ್ಮ ಹಿತ ಸಂರಕ್ಷಾಪರಂ ಸಂತನುಂ
ಯತ್ನೋಪಾತ್ತ ಸರಸ್ವತೀ ಪರಿಚಯಂ ನೂರ್ಕಾಲ ಬಾಳ್ಕೆ ಸುಖಂ

ಷಷ್ಟ್ಯಬ್ದಿಯು ನಿಮ್ಮಯ ವಿದ್ಯಾನಂದರೆ!
ರಾಷ್ಟ್ರಕೆ ಗೌರವ ತಂದವರೇ
ಭಾರತ ಜನನಿಯ ಮುಡಿಲಲಿ ನೀವೂ
ಭರದಿಂ ಬಾಳಿರಿ ಎನ್ನುವೆವೂ ||೧||

ಪ್ರೇರಣೆ ನೀಡೀ ಧರ್ಮಚಕ್ರದಾ
ರಾಷ್ಟ್ರಕೆ ಪರಿಚಯ ಮಾಡಿದಿರೀ
ಜನಮಂಗಲ ಕಲಶದ ಮಹತ್ತ್ವ ಬೋಧಿಸಿ
ಜನರಿಗೆ ವೈಭವ ತೋರಿದಿರೀ ||೨||

ಉಪವಾಸವಗೈಯುತ ಕುಂಭೋಜದಲೀ
ಕ್ಷೇತ್ರದ ರಕ್ಷಣೆ ಮಾಡಿದಿರೀ
ರಾಜ್ಯ-ರಾಜ್ಯದಲಿ ಧರ್ಮಧ್ವಜವನು
ಎತ್ತುತ ಮೆರೆದಿರಿ ಮುನಿವರರೇ ||೩||

— ಓಂ ಶಾಂತಿಃ —



# 108 ಮುನಿಶ್ರೀ ವಿದ್ಯಾನಂದರ ಸ್ತುತಿ.

ಶ್ರೀ ಮದನಕೇಸರಿ, ಎಂ.ಎ.,ಬಿ.ಎಲ್., ಬೆಂಗಳೂರು.

ಅರಿತರು ಮುನಿಶ್ರೀ ವಿದ್ಯಾನಂದರು ಸಂಸಾರದ ಕಷ್ಟ ಬಾಧಕ
ಸಂಸಾರ ತೊರೆದು ನಿಂತರು ಆಗಿ ಸಾಧಕ
ಮಾಡಿಕೊಂಡಿಹರು ಎಲ್ಲ ಶಾಸ್ತ್ರಗಳ ಕರತಲಾಮಲಕ
ಅಹಿಂಸೆಯ ಬೋಧಿಸಿ ಆಗಿಹರು ಜಿನವಾಣಿಯ ಉದ್ಬೋಧಕ ॥ ೧ ॥

ಮುನಿವರ್ಯ ವಿದ್ಯಾನಂದರು ಸಂಸಾರದ ಮಹಾ ಅನುಭವಿ
ಸಂಸಾರಕೆ ಹೇಸಿ ತೊಟ್ಟರು ಪ್ರಥಮವಾಗಿ ಕಾವಿ
ದಿಗಂಬರರಾಗಿ ಈಜಾಡಳಿಳಿದರು ಅಹಿಂಸಾ ಶಾಸ್ತ್ರದ ಬಾವಿ
ಶಾಸ್ತ್ರ ಪಾರಂಗತರಾಗಿ ಕರೆಸಿಕೊಂಡಿಹರು 'ಮಹಾಮೇಧಾವಿ' ॥ ೨ ॥

ಮುನಿಶ್ರೀ ವಿದ್ಯಾನಂದರು ಜೈನ ಸನ್ಯಾಸಿ ಭಿಕ್ಷು
ಅವರಿಗುಂಟು ಬಾಹ್ಯ-ಅಂತರಂಗವೆಂಬೆರಡು ಚಕ್ಷು
ಕುಡಿಸುತಿಹರು ಜನತೆಗೆ ಸುಜ್ಞಾನವೆಂಬ ರಸ ಇಕ್ಷು
ಜೈನ ಯತಿಗಳಲ್ಲವರು ಮಹಾ ಮುಮುಕ್ಷು ॥ ೩ ॥

ಜೈನ ಸನ್ಯಾಸಿಗಳಲ್ಲಿ ಪ್ರಥಮ ಘಟ್ಟ ಕ್ಷುಲ್ಲಕ
ಮತ್ತದರಲ್ಲಿ ದ್ವಿತೀಯ ಘಟ್ಟ ಐಲಕ
ಇವುಗಳ ಕಳೆದು ಮುನಿ ವಿದ್ಯಾನಂದರೀಗ ದಿಗಂಬರ ಸಾಧಕ
ಅವರೀಗ ಭಾರತೀಯ ಸಂಸ್ಕೃತಿಯ ಮಹಾ ಪ್ರತೀಕ ॥ ೪ ॥

ಮುನಿಶ್ರೀಗಳು ಸುರೇಂದ್ರರಾಗಿದ್ದಾಗ ಸದ್ಧರ್ಮ ಶ್ರಾವಕ
ಉಪದೇಶಗೈದು ಆಗಿಹರು ಜನರ ಅಜ್ಞಾನದ ನಿವಾರಕ
ಭಾರತ ದೇಶವ ಸಂಚರಿಸಿ ಅಡಿಯಿಂದ ಮುಡಿಯು ತನಕ
ಶಾಂತಿ ಅಹಿಂಸೆಯ ಕಹಳೆಯೂದಿ ಆಗಿಹರು ವಿಶ್ವಧರ್ಮ ಪ್ರವರ್ತಕ ॥ ೫ ॥

ಯತಿವರ್ಯ ವಿದ್ಯಾನಂದರು ಧರ್ಮಾರಾಧಕ
ಅಂತೆಯೇ ಸದ್ಧರ್ಮದ ಮಹಾ ಪ್ರಭಾವಕ
ಉದ್ಧಾರರಾಗಿಹರು ಅವರಿಂದ ಲಕ್ಷಾಂತರ ಶ್ರಾವಕಿ-ಶ್ರಾವಕ
ಅವರಿಂದಾಗಲಿ ಸದ್ಧರ್ಮ ಪ್ರಭಾವನೆ ಇನ್ನೂ ವರ್ಷ ಅನೇಕ ॥ ೬ ॥

ಮುನಿಶ್ರೀಯವರಲ್ಲಿ ತುಂಬಿವೆ ವಿಶ್ವಧರ್ಮಾಂಶಗಳು ಭರ್ತಿ
ಬೆಳಗಿಹರವರು ನಾಲ್ಕೂ ದಿಕ್ಕಿನಲ್ಲಿ ಜಿನ ಧರ್ಮದ ಕೀರ್ತಿ
ಸಂಚರಿಸಿ ಭಾರತಾದ್ಯಂತ ಅನೇಕಾವರ್ತಿ
ಮಾನವ ಧರ್ಮವ ಪ್ರತಿಪಾದಿಸಿ ಆಗಿಹರು ವಿಶ್ವಧರ್ಮ ಮೂರ್ತಿ ॥ ೭ ॥

ಭಗವಾನ್ ಮಹಾವೀರರ 2500ನೇ ನಿರ್ವಾಣೋತ್ಸವ
ಶ್ರವಣಬೆಳಗೊಳ ಬಾಹುಬಲಿಯು ಸಾವಿರ ವರ್ಷದ ಮಹಾಮಸ್ತಕಾಭಿಷೇಕೋತ್ಸವ
ಧರ್ಮಸ್ಥಳದ ಬಾಹುಬಲಿಯ ಪ್ರಥಮ ಮಹಾ ಮಸ್ತಕಾಭಿಷೇಕೋತ್ಸವ
ಅವುಗಳ ನಡೆಸಿದರು ಮುನಿಶ್ರೀ ವಿದ್ಯಾನಂದರು ವಹಿಸಿ ನೇತೃತ್ವ
ಜೈನ ಧರ್ಮ ಶ್ರ. ಬೆ. ಧರ್ಮಸ್ಥಳಗಳ ಇತಿಹಾಸದಲ್ಲಿ ಅವುಗಳ ಮಹತ್ತ್ವ ॥ ೮ ॥

ಗುರುವರ್ಯ ವಿದ್ಯಾನಂದರಿಗೆ ಒಳ್ಳೆಯ ಕಲೆ ವಕ್ತೃತ್ವ
ಪಡೆದಿಹರು ಜಿನಧರ್ಮಾಗಮ ವಾಣಿಗಳ ಮೇಲೆ ಪ್ರಭುತ್ವ
ಹೀರಿಕೊಂಡಿಹರು ಸರ್ವ ಧರ್ಮಗಳ ಸಾರ ತತ್ತ್ವ
ಅವುಗಳನ್ನಾಧರಿಸಿ ಜನತೆಗೆ ಬೋಧಿಸುತಿಹರು ವಿಶ್ವಧರ್ಮ ತತ್ತ್ವ ॥ ೯ ॥

ಯೋಗಿಶ್ರೀ ವಿದ್ಯಾನಂದರು ಉಂಡಿಹರು ನಾನಾ ನೋವ
ಅಂತೆಯೇ ಪಡೆದಿಹರು ನಾನಾ ರೀತಿಯ ಅನುಭವ
ದೇಶದ ನಾನಾ ಕಡೆಗಳಲ್ಲಿ ನಡೆಸಿ ಪಂಚಕಲ್ಯಾಣಾದಿ ಮಹೋತ್ಸವ
ತಂದಿಹರು ಜಿನಧರ್ಮಕೆ ಅಪಾರ ಕೀರ್ತಿ, ಯಶಸ್ಸು, ಗೌರವ ॥ ೧೦ ॥

ಮುನಿಶ್ರೀ ವಿದ್ಯಾನಂದರಿಗೆ ಬಿರುದು ಏಲಾಚಾರ್ಯ
ಜಿನಧರ್ಮ ಗಗನಕೆ ಅವರು ಪ್ರಕಾಶಿಸುವ ಸೂರ್ಯ
ಜೈನ ಸನ್ಯಾಸಿಗಳ ಗುಂಪಿನಲ್ಲಿರುವರು ಯತಿವರ್ಯ
ತುಂಬಿ ತುಳುಕುತಿಹುದವರಲ್ಲಿ ರತ್ನತ್ರಯದೈಶ್ವರ್ಯ
ಆಗಿಹುದು ಅವರ ಪವಿತ್ರಾತ್ಮ ಸಾರ ಭವ್ಯ
ಅವರ ಸದ್ಧರ್ಮದುಪದೇಶ ಬಹು ನವ್ಯ
ಅದನು ಕೇಳಿದ ಜೀವಾತ್ಮರಾಗುವರು ದಿವ್ಯ ॥ ೧೧ ॥

ಜೈನ ಮುನಿ ವಿದ್ಯಾನಂದರು ಮಹಾ ವಾಕ್ಪಟು
ಬಂಧಿಸದು ಅವರನು ಸಂಸಾರದ ಯಾವ ಅಂಟು
ಬೆಳೆಸಿಕೊಂಡಿಹರವರು ರತ್ನತ್ರಯದ ನಂಟು
ಕತ್ತರಿಸಲು ಸಂಸಾರದ ತಾಪತ್ರಯವೆಂಬ ಗಂಟು ॥ ೧೨ ॥

ಮುನಿಶ್ರೀ ವಿದ್ಯಾನಂದರು ಪರಮ ವಾಗ್ಮಿ
ಒಡೆಯರಾಗಲು ಅಂತರಂಗ-ಬಹಿರಂಗ ಲಕ್ಷ್ಮಿ
ಅವರಾಗಿಹರು ಅಂತರಾತ್ಮ ಸೂಕ್ಷ್ಮಿ
ಪಸರಿಸುತಿಹರು ಆಗಲು ಮೋಕ್ಷಗಾಮಿ ॥ ೧೩ ॥

1985ರ ಈ ದಿನದ ಹೊತ್ತು
ತುಂಬಿಹುದು ಮುನಿಶ್ರಿ ವಿದ್ಯಾನಂದರಿಗೆ 60
ನಡಿದಿದೆ ಇಂದೂರಿನಲ್ಲಿ ಅವರ ಸಮಾರಂಭ ಬೃಹತ್ತು
ಶ್ರಾವಕಾಚಾರ ವರ್ಷವಾಗಿ 1985ಕೆ ಬಂದಿದೆ ಮಹತ್ತು । ೧೪ ॥

ಏಲಾಚಾರ್ಯ ವಿದ್ಯಾನಂದರು ಜೈನಧರ್ಮದ ಮಣಿ ಪುರುಷ
ಜೈನ ಗುರು ಪರಂಪರೆಯಲ್ಲಿ ಈ ಶತಮಾನದ ಯುಗ ಪುರುಷ
ತುಂಬಿಹುದೀಗ ಅವರಿಗೆ ಅರವತ್ತು ವರುಷ
ಆಗಲವರು ಶೀಘ್ರ ವೀತರಾಗ, ಗೆದ್ದು ರಾಗ ದ್ವೇಷ ॥ ೧೫ ॥

ಮುನಿಶ್ರೀ ವಿದ್ಯಾನಂದರು ಏರಿಹರು ಹಂತ ಹಂತ
ಆಗಿಹರು ಸನ್ಯಾಸಿಗಳಲ್ಲಿ ಶಿರೋಮಣಿ ಸಂತ
ಅರಿತಿಹರು ಚೆನ್ನಾಗಿ ಧರ್ಮ ಸ್ಯಾದ್ವಾದ ಅನೇಕಾಂತ
ಬೇಗನೆ ಆಗಲಿಹರವರು ಜಿನ ಭಗವಾನ ಅರಹಂತ ॥ ೧೬ ।



ವಿದ್ಯಾನಂದ ವಾಣಿ

## ದೀಪಂ ಜ್ಞಾನ ಪ್ರವರ್ಧನಂ

ಕೇವಲಜ್ಞಾನ ಪ್ರಾಪ್ತವಾಗಲೆಂದು ಭಗವಾನ್ ನಾನು ಈ ದೀಪವನ್ನು ಬೆಳಗುತ್ತೇನೆ. ಬೆಳಕಿನಲ್ಲಿ ಎಲ್ಲ ಪ್ರಾಣಿಗಳಿಗೂ ಆನಂದ. ಕತ್ತಲೆಯಾದರೆ ಪ್ರಾಣಿಗಳು ಅಡಗಿಕೊಳ್ಳುವುವು. ಅಜ್ಞಾನವೇ ದುಃಖಕ್ಕೆ ಕಾರಣ. ಜ್ಞಾನವೇ ಮುಕ್ತಿಗೆ ಕಾರಣ. ಅಜ್ಞಾನ ನಷ್ಟವಾಗಿ ಕೇವಲಜ್ಞಾನ ಪ್ರಾಪ್ತಿಯಾಗಲಿ ಅಂತ ಹೇಳಿ ಭಗವಂತ, ನಾನು ತಮ್ಮ ಪಾದವಲ್ಲಿ ದೀಪಾರ್ಚನೆ ಮಾಡುತ್ತೇನೆ.

# ವಿದ್ಯಾನಂದ ಮುನಿ ವಿಶ್ವಜ್ಞಾನದ ಖನಿ

**ಡಿ. ಸುಬ್ಬಣ್ಣ ಜೈನ್, ಚಕ್ಕೂರು, ಹೆಗ್ಗಡೆದೇವನ ಕೋಟೆ, ಮೈಸೂರು.**

ರಾಗ: ಹಂಸಾನಂದಿ. ತಾಳ: ತ್ರಿಶ್ರುತ್ರಿ ಪುಟ.

ವಿದ್ಯಾನಂದ ಮುನಿ ವಿಶ್ವಜ್ಞಾನದ ಖನಿ. ಅಧ್ಯಾತ್ಮಪ್ರೇಮಿಹೇ ಮೋಕ್ಷಗಾಮಿ ॥ ಪ ॥

ಕರ್ನಾಟಕದ ಶೇಡ ಬಾಳಿದೊಳು ನೀ ಜನಿಸಿ। ಭಾರತ ಮಾತೆಯ ವರಪುತ್ರನೆನಿಸಿ। ಪರಮ ಅಹಿಂಸಾ ಧರ್ಮವ ಪ್ರಚುರಗೊಳಿಸಿ। ವಿಶ್ವವಂದ್ಯನಾದೇ ಹೇ ವಿಶ್ವವಂದ್ಯಾ ॥ ೧ ॥ ವಿದ್ಯಾನಂದ ಮುನಿ.

ದೇಶಭೂಷಣರಿಂದ ದೀಕ್ಷೆಯನು ಸ್ವೀಕರಿಸಿ ವಿದ್ಯಾಪ್ರೇಮದಿ ವಿದ್ಯಾನಂದನಾದೇ। ವಿಶ್ವ ಜನಗಳಿಂದ ವಿಶ್ವವಂದ್ಯನೆನಿಸಿ ವಿಶ್ವಧರ್ಮವ ಪೇಳ್ದ ಹೇ ನಗ್ನರೂಪಾ ॥ ೨ ॥ ವಿದ್ಯಾನಂದ ಮುನಿ.

ಹಿಮಾಲಯದಿ ಸಂಚರಿಸಿ, ಜ್ಞಾನಗಂಗೆಯ ಹರಿಸಿ, ಧರ್ಮ ತೀರ್ಥವನು ಜಗಕೆಲ್ಲ ಸುರಿಸಿ। ಸರ್ವ ಜೀವಿಗಳಿಂಗೆ ಧರ್ಮಾಮೃತವ ಕುಡಿಸಿ, ಸ್ಯಾದ್ವಾದ ಧರ್ಮವನು ಸಾರಿದಾ ಮುನಿಶ್ರೀ ॥ ೩ ॥ ವಿದ್ಯಾನಂದ ಮುನಿ.

ಆರು ದಶಕವನು ಅಧ್ಯಯನದಿ ಕಳೆದು, ಅನೇಕಾಂತ ಧರ್ಮದ ಮರ್ಮವನು ತಿಳಿದು। ಸ್ಯಾದ್ವಾದ ಶಾಸನ ಧ್ವಜವ ಹಾರಿಸಿದ ಸ್ಯಾದ್ವಾದ ಪ್ರೇಮಿ, ಹೇ ಪರಮ ಯೋಗೀ ॥ ೪ ॥ ವಿದ್ಯಾನಂದ ಮುನಿ.

ಅನೇಕಾಂತವನು ಪೇಳ್ದ ಮುನಿಶ್ರೀ ವಿದ್ಯಾನಂದ, ಆತ್ಮಧರ್ಮವ ಪೇಳ್ದ ಹೇ ಆತ್ಮಾನಂದ। ಏಕತ್ವವನು ಪೇಳ್ದ ಹೇ ಪರಮಜ್ಞಾನೀ। ಮೋಕ್ಷತತ್ತ್ವ ಪೇಳ್ದ ಹೇ ಮುಕ್ತಿಗಾಮಿ ॥ ೫ ॥ ವಿದ್ಯಾನಂದ ಮುನಿ.

ಪ್ರಕೃತಿರೂಪನೆನಿಸಿ, ಪ್ರಕೃತಿ ರೂಪವ ಧರಿಸಿ, ಬಾಹ್ಯಾಂಭ್ಯತರ ಪರಿಗ್ರಹವನ್ನು ತ್ಯಜಿಸಿ। ವಿಶ್ವವೇ ಜಿನಮುದ್ರಾಂಕಿತವೆಂದು ತಿಳಿಸಿ ನಗ್ನತ್ವದ ಮಹತ್ತ್ವವನು ಪೇಳ್ದ ॥ ೬ ॥ ವಿದ್ಯಾನಂದ ಮುನಿ.

ಶ್ರವಣಬೆಳುಗೊಳದ ಶ್ರೀ ಗೊಮ್ಮಟೇಶ್ವರನ। ಸಾವಿರ ವರುಷದ, ಮಸ್ತಕಾಭಿಷೇಕದಿ, ಜಾತಿ, ವಿಜಾತಿ ಎನ್ನದೆ ಸೇರ್ದ ಭಕುತರಿಗೆ ಆಶೀರ್ವದಿಸಿದ ಶ್ರೀ ಏಲಾಚಾರ್ಯ ॥ ೭ ॥ ವಿದ್ಯಾನಂದ ಮುನಿ. ವಿಶ್ವಜ್ಞಾನದ ಖನಿ, ಅಧ್ಯಾತ್ಮ ಪ್ರೇಮಿ, ಹೇ ಮೋಕ್ಷಗಾಮಿ.



# ಮುನಿ ವಿದ್ಯಾನಂದ ಸ್ತುತಿ ಪಂಚಕಮ್

ರಚಯಿತಾ- ಆಸ್ಥಾನ ವಿದ್ವಾನ್ ಪಂ. ಶಿಶುಪಾಲ ಶಾಸ್ತ್ರಿ, ಮೂಡುಬಿದಿರೆ.

॥ ೧ ॥

ವಿದ್ಯಾನಂದ ಮುನೀಂದ್ರಸ್ಯ ಷಷ್ಟ್ಯಬ್ದಿಃ ಶಾಂತಿದಾಯಿನೀ ।
ಸದ್ವಿದ್ಯಾ ಮುನಿರಾಜಸ್ಯ ಪ್ರಕಾಶಯತು ಭಾರತೀಮ್ ॥

॥ ೨ ॥

ಧರ್ಮಚಕ್ರ ಪ್ರಸಾರಸ್ಯ ಸೃಷ್ಟ್ಯಾಽಯಂ ಧರ್ಮ- ವೈಭವಃ ।
ರಾಷ್ಟ್ರೇ ಸರ್ವತ್ರ ಧರ್ಮಸ್ಯ ಪ್ರಸಾರಮಕರೋತ್ ಯತಿಃ ॥

॥ ೩ ॥

ಜನಮಂಗಲ ಕುಂಭಸ್ಯ ಪ್ರೇರಕೋಽಯಂ ಸದಾಶಯಃ ।
ಪ್ರೋದ್ಘಾದಿತೋ ಮಹಾಕುಂಭಃ ಪ್ರಧಾನ- ಸಚಿವೇನ ಹಿ ॥

॥ ೪ ॥

ಧರ್ಮಸ್ಥಲೇ ಮಹಾಕ್ಷೇತ್ರೇ ಮೂರ್ತಿ ಬಾಹುಬಲೀಯಸೀ ।
ನವೀನಾ ಸ್ಥಾಪಿತಾ ತತ್ರ ಪ್ರತಿಷ್ಠಾಮಕರೋತ್ ಮುನಿಃ ॥

॥ ೫ ॥

ಇತ್ಥಂ ಸರ್ವತ್ರ ಸತ್ತತ್ತ್ವಂ ಸರ್ವಧರ್ಮ ಸಮನ್ವಿತಮ್ ।
ಬೋಧಯನ್ ಸರ್ವದಾ ಜೀಯಾತ್ ಏಲಾಚಾರ್ಯೋ ಮಹಾಮುನಿಃ ॥



ವಿದ್ಯಾನಂದ ವಾಣಿ

## ಪುಷ್ಪಂ ಐಶ್ವರ್ಯ ನೇಮಿಚಂ

ಮೂರು ಲೋಕದ ಐಶ್ವರ್ಯಗಳನ್ನು ಪರಮಾತ್ಮ ಪಡೆದಿರುವನು. ಅನಂತಜ್ಞಾನಾದಿ ಐಶ್ವರ್ಯಗಳು ಪ್ರಾಪ್ತಿಯಾಗಲಿ ಎಂದು ಪುಷ್ಪವನ್ನು ಅರ್ಪಿಸುವೆವು.

# ಪ. ಪೂ. 108 ಶ್ರೀ ವಿದ್ಯಾನಂದ ವಿನಯಾಂಜಲಿರೂಪ ಪದ್ಯಮಾಲಿಕಾ

ರಚನೆ- ಎಸ್. ಡಿ. ನಾಗೇಂದ್ರ ಶಾಸ್ತ್ರಿ, ಸಂಸ್ಕೃತ ಪಂಡಿತ, ಸಾಹಿತ್ಯರತ್ನ
ಸಂಸ್ಕೃತ ಹಿಂದೀ ಸಾಹಿತ್ಯಮಣಿ ಶ್ರವಣಬೆಳಗೊಳ.

ಶ್ರೀಮತೇ ಸಕಲಜ್ಞಾನ ಸಾಮ್ರಾಜ್ಯ ಪದಮಿಾಯುಷೇ ।
ಧರ್ಮಚಕ್ರಭೃತೇ ಭರ್ತೇ ನಮಃ ಸಂಸಾರಭೀಮುಷೇ ॥

ಶ್ರೇಯೋಮಾರ್ಗ ವಿವೇಕಶೂನ್ಯ ಮನುಜಾನ್ ಧರ್ಮೋಪದೇಶೇನಯೋ ।
ವಿದ್ಯಾ ಬುದ್ಧಿ ಸುಧರ್ಮ ನೀತಿ ಚತುರಾನ್ ಸರ್ವಾನ್ ಸದಾ ಕಾರಯನ್ ॥
ಕಾಮ ಕ್ರೋಧ ಭಯಾರ್ತಿ ಮೋಹರಹಿತಃ ಸ್ವಾಧ್ಯಾಯ ಕಾರ್ಯೇರತಃ ।
ವಿದ್ಯಾನಂದ ಮುನೀಶ್ವರೋ ವಿಜಯತಾಂ ಕಾರುಣ್ಯ ರತ್ನಾಕರಃ ॥೧॥

ಸಕಲಗುಣ ಸಮುದ್ರಃ ಧ್ವಸ್ತ ಮಿಥ್ಯಾತ್ವ ಮಾರ್ಗಃ ।
ದವಲಿತ ನಿಜವಾಕ್ಯ ಜ್ಯೋಸ್ನಯಾ ಸರ್ವಲೋಕಃ ॥
ಪ್ರಶಮಿತಭವಖೇದಃ ಧ್ಯಾನಕಾರ್ಯ್ಯೆ ಪ್ರವೃತ್ತಃ ।
ಸಜಯತುವರ ವಿದ್ಯಾನಂದ ಯೋಗೀಂದ್ರ ಶ್ರೇಷ್ಠಃ ॥೨॥

ನಮಿತಸಕಲವಿದ್ಯಾಲಂಕೃತ್ಯೆ ಸ್ಸರ್ವಕಾಲೇ ।
ವಿಹಸಿತ ನಿಜ ವಿದ್ಯಾ ವೈಭವೈ ಶಿಷ್ಯವೃಂದಂ ॥
ವಿಜಿತ ಸಕಲ ಮೋಹಃ ನಿರ್ಮಲಾಚಾರಯುಕ್ತಃ ।
ವಿಚರತು ಮುನಿವರ್ಯೋ ಭಾರತೇ ಪುಣ್ಯದೇಶೆ ॥೩॥
(ವಿಜಯತು ಯತಿವರ್ಯೋನಂದ ವಿದ್ಯಾಭಿಧಾನಃ ।)

ನಿರುಪಮ ಗುಣವಾರ್ಧಿಃ ವಿಶೃತಾನಂತ ಕೀರ್ತಿಃ
ಬುಧನುತವಿಮಲಾಂಘ್ರಿಃ ಸುಂದರಾಕಾರಮೂರ್ತಿಃ ॥
ಪ್ರಮಿತದುರಿತಾರಿ ಪ್ರಾಪ್ತ ಸುಜ್ಞಾನಧಾರೀ ।
ಸಜಯತು ಚಿರಕಾಲಂ ವಿದ್ಯಾನಂದ ಯೋಗೀಂದ್ರ ಶ್ರೇಷ್ಠಃ ॥೪॥
(ಸಜಯತು ವರ ಏಲಾಚಾರ್ಯನಾಮಾಖ್ಯ ಯೋಗೀಃ ।)

ಸತತತವ ಪ್ರಸಾದೇನೋದ್ಧಾರಿತಾಸ್ಸರ್ವಗ್ರಾಮಾಃ ।
ವಿಚರತು ಬುಧವೃಂದಂ ಜೀವರಕ್ಷಾ ವಿಧಾನೆ ॥
ಕುವಲಯ ಜನವೃಂದಂ ಯಾಂತು ಸ್ವಾತಂತ್ರ್ಯ ಸೌಖ್ಯಂ ।
ವಿಶತುಭುವಿಸಮಂತಾತ್ ಜೈನ ಧರ್ಮ(ಸೂರ್ಯ) ಪ್ರಕಾಶಃ ॥೫॥

ಇತ್ಯನೇಕ ಗುಣಾಗಾರಂ, ಯೋಗೀಂದ್ರಂ ಶಾಂತಮುದ್ರಿಕಾಂ
ಪ್ರಣಮಾಮಿ ಸದಾಕಾಲಂ ಸರ್ವ ವಿಘ್ನೋಪಶಾಂತಯೇ ॥ ೬ ॥

ಶುಭಕಾಮನ ಮಿಚ್ಛಾಮೋ ಷಷ್ಠ್ಯಬ್ದೀರ್ಘವರ್ತಃಪ್ರಭೋ ।
ಶತಾಯುಷ್ಯಮಪಿಶ್ಯಾತ್ತ್ರೇ ಜಿನಾನುಗ್ರಹಪೂರ್ವಕಂ ॥ ೭ ॥

ಮಂಗಲಂತವ ಯೋಗೀಂದ್ರ, ಮಂಗಲಂ ಧರ್ಮ ರಕ್ಷಕ,
ಮಂಗಲಂತವ ಸರ್ವತ್ರ, ಮಂಗಲಂ ಜ್ಞಾನ ಭಾಸ್ಕರ ॥ ೮ ॥

ತ್ರೈಕಾಲಿಕ ನಮಸ್ತುಭ್ಯಂ ಏಲಾಚಾರ್ಯ (ವಿದ್ಯಾನಂದ) ಮಹಾಮುನೇ ।
ಸಂಸಾರಜನಿತಂಖೇದಂ ನಷ್ಟಂ ಭೂಯಾತ್ತ್ವಾಶಿಷಾ ॥ ೯ ॥



**ವಿದ್ಯಾನಂದ ವಾಣಿ**

## ಭಗವಂತನ ಭಜನೆ ಏಕೆ?

'ಮಲಿನಾತ್ ಜನ್ಮ ಹೇತುಶ್ಚ' ಸಂಸಾರದಲ್ಲಿ ಪರಿಭ್ರಮಣ ಮಾಡಲಿಕ್ಕೆ ಮೂಲ ಕಾರಣ ಪಾಪ ಪುಣ್ಯ. ಸಂಸಾರ ಪರಿಭ್ರಮಣದಿಂದ ಮುಕ್ತ ಆಗಬೇಕಾದರೆ ಶುದ್ಧ ಪರಿಣಾಮ, ನಿರ್ಮಲ ಪರಿಣಾಮಬೇಕು. ಅಂದರೆ ಯಾವ ಇಚ್ಛೆಯೂ ಇಲ್ಲದೇ ಇರತಕ್ಕಂಥ ಪರಿಣಾಮ ಯಾವುದಕ್ಕೋಸ್ಕರ ಭಗವಂತನು ತಪ ಮಾಡಿದನೋ ಅದಕ್ಕೋಸ್ಕರ ನಾವೂ ಕೂಡಾ ಭಗವಂತನ ಭಜನೆ ಮಾಡಬೇಕೇ ಹೊರತು ಸಂಸಾರ ವಸ್ತುಗಳಿಗಾಗಿ ಅಲ್ಲ.



# ಮುನಿ ವಿದ್ಯಾನಂದ - ಸ್ತವನಮ್.

## (ಶಿಖರಿಣೀ ಛಂದ)

**ಸ್ವ! ಡಾ. ನೇಮಿಚಂದ್ರ ಜೈನ ಶಾಸ್ತ್ರಿ, ಎಂ.ಎ., ಪಿಎಚ್.ಡಿ., ಆರಾ. (ಬಿಹಾರ ಪ್ರಾಂತ)**

ಯದೀಯೈಃ ತೇಜೋಭಿಃ ಪರಿಣತ ವಿಚಾರೈಃ ಪ್ರವಚನೈಃ,
ಮನೋರಾಗದ್ವೇಷಾಃ ವಿಲಯಮಧಿಗಚ್ಛಂತಿ ಜಗತಾಮ್ ।
ಶಿವಂ ಸತ್ಯಂ ದಿವ್ಯಂ ಸುಖದ ಮಥ ಯದ್ದರ್ಶನ ಮಹೋ,
ಸದಾ ವಿದ್ಯಾನಂದೋ ಜಯತು ಭುವಿ ಸೋಽಯಂಮುನಿವರ ॥ ೧ ॥

ಯದೀಯಂ ವ್ಯಕ್ತಿತ್ವಂ ಗುಣಗಣನಿಧಾನಂ ಸುವಿದಿತಮ್,
ಯದೀಯಂ ಪಾಂಡಿತ್ಯಂ ಬುಧ ಜನ ಸಮಾಹಾಸ್ಪದಮ ಭೂತ್ ।
ಪ್ರಸಿದ್ಧಿಸಿದ್ಧಿರ್ವಾ ದಿಶಿ ದಿಶಿ ಯದೀಯಾ ಪ್ರಚಲಿತಾ,
ಪದ ದ್ವಂದ್ವೇ ತಸ್ಯ ಪ್ರಣತಿರನಿಶಂ ಮೇ ವಿಲಸತಾತ್ ॥ ೨ ॥

ಯದೀಯಾ ಸತ್ಕೀರ್ತಿಃ ತುಹಿನ ಧವಲಾಭಾ ಶಿಖರಿಣೀ
ಪ್ರತಿಷ್ಠಾ ಯಸ್ಯಾಸ್ತಿ ಪ್ರಭುಪದ ಸಮಾನಾ ವನಿ ತಲೇ ।
ಯದೀಯಂ ಸಮ್ಮಾನಂ ನಿಖಿಲ ಜನವರ್ಗೇಷ್ವತಿಶಯಮ್,
ಉಪಾಸ್ತೇ ತಂ 'ಚಂದ್ರಃ' ಪ್ರಣತಹೃದಯೋ 'ನೇಮಿ' ಸಹಿತಃ ॥ ೩ ॥

ಚಮತ್ಕಾರಂ ವಾಣೀ ವಿತರತಿ ಯದೀಯಾ ಸುಲಲಿತಾ,
ಯದೀಯ ತ್ಯಾಗಸ್ಯಾ ಪರಿಮಿತ ಕಥಾ ಕಾಸ್ತು ಕಥಿತಾ ।
ಲಭಂತೇ ನೋ ಶಾಂತಿಂ ಕ ಇಹ ಪರಮಾಂ ಯಸ್ಯ ಶರಣೇ,
ಅಪೂರ್ವಃ ನಿರ್ಗ್ರಂಥಃ ವಿಹರತಿ ತರಾಂ ಕೋಽಪಿ ಭುವನೇ ॥ ೪ ॥

ಪರಂ ಪೂಜ್ಯಂ ಲೋಕೈಃ ಜಗತಿ ಜನನಂ ಯಸ್ಯ ಸತತಮ್,
ಪರಂ ಶ್ಲಾಘ್ಯಂ ಲೋಕೈರಮಲ ಚರಿತಂ ಯಸ್ಯ ಸುಗುರೋಃ ।
ಪರಂ ಧ್ಯೇಯಾ ಲೋಕೈರಮರರಚನಾ ಯಸ್ಯ ನಿಖಿಲಾ,
ಮಹಾವೀರ ಸ್ವಾಮಿ ಪ್ರಥಿತ ಪರಶಿಷ್ಯೋ ಜಯತು ಸಃ ॥ ೫ ॥

ಜನೋಽಸ್ಯಾಲ್ಪಜ್ಞೋ ವಾ ಭವತಿ ಸುಮಹಾನ್ ಯಸ್ಯ ಕೃಪಯಾ,
ಯದೀಯ ಸ್ಪರ್ಶೋ ವಾ ಮಟುಮಪಿ ಸುವರ್ಣಂ ಪ್ರಕುರತೇ।
ಯದೀಯಾಶೀರ್ವಾಣೇ ವಿಕಿರತಿ ಸುಧಾ ಸಿಂಧುಲಹರೀಮ್,
ಸಮಂತಾದ್ಭದ್ರಃ ಭವತು ಚಿರ ಭದ್ರಾಯ ಸ ಭುವಃ ।೬।

ಸಮಸ್ತಸ್ಮಿನ್ ಭೂಯೋ ಯುಗ ಪುರುಷವರ್ಯಾಯ ಸತತಮ್,
ಸಮಸ್ತಸ್ಮಿನ್ ಭೂಯೋಽಖಿಲ ಜನ ನಮಸ್ಯಾಯ ಸತತಮ್।
ಸಮಸ್ತಸ್ಮಿನ್ ಭೂಯೇ ಭವತು ಚ ಮುನೀಂದ್ರಾಯ ಸತತಮ್,
ಅಹಂ ಲೋಕೇ ಮನ್ಯೇ ಯದಿಮ ಮಕಲಂಕಂ ಶ್ರುತಧರಮ್ ॥ ೭ ॥



## ವಿದ್ಯಾನಂದ ವಾಣಿ

# ಗಂಧಂ ಆಯುಷ್ಯವರ್ಧನಂ

ಗಂಧಾಭಿಷೇಕವನ್ನು ಆಯುಸ್ಸು ಪಡೆಯಲು ಮಾಡಬೇಕು. ನಮ್ಮ ಶರೀರ ನಿರೋಗಿಯಾಗಿದ್ದರೇನೇ ನಾವು ಧರ್ಮ ಧ್ಯಾನ ಮಾಡಬಹುದು. ನಮಗೆ ಅಕಾಲ ಮೃತ್ಯು ಆಗದೆ, ಜೀವನ ಇರುವ ತನಕ ಅಂತ್ಯ ಕ್ಷಣದ ವರೆಗೆ ಶುದ್ಧ ಪರಿಣಾಮ ಉಳಿಸಿ ಕೊಳ್ಳುವುದಕ್ಕೋಸ್ಕರ ನನಗೆ ಧೀರ್ಘಾಯುಸ್ಸು ಬೇಕು. ಅದ ಕ್ಕೋಸ್ಕರ ಗಂಧಾಭಿಷೇಕ ಮಾಡುವೆನು. ಗಂಧದ ಪರಿಮಳ ಹೇಗೆ ಎಲ್ಲಾ ಕಡೆ ಹರಡುವುದೋ ಅದೇ ರೀತಿ ಆಯುರಾರೋಗ್ಯವೂ ಹರಡಲಿ.



# 'ಸುರೇಂದ್ರಂ ಮುನೀಂದ್ರನಾದಂ'...



ಲೇಖಕರು:
ಶ್ರೀ ಪಂಡಿತ ಬಿ. ದೇವಕುಮಾರ ಜೈನ ಶಾಸ್ತ್ರಿಗಳು, ಮೂಡುಬಿದ್ರಿ.

[ಹಿಂದೆ ದೇವೇಂದ್ರನಾಗಿ ಗಳಿಸಿದ ಪುಣ್ಯದ ಪುಂಜ ಮುನಿಶ್ರೀ ವಿದ್ಯಾನಂದನಾಗಿ ಪ್ರೈದಾಳಿರಬೇಕು. ಇಂದು ಮುನಿಶ್ರೀಯವರ ಧರ್ಮ ವಿಹಾರ, ಜ್ಞಾನ ಪ್ರಸಾರ, ಮಾನವತಾ ಪ್ರಚಾರ ಮತ್ತೆ ಸುರೇಂದ್ರ ಪದಕ್ಕೆ ವರಪ್ರದವಾಗುವುದು ನಿಸ್ಸಂದೇಹ. ಜೀವನದ ರೇಖಾಚಿತ್ರದ ತುಣುಕುಗಳೊಂದಿಗೆ ಲೇಖಕರು ಏಲಾಚಾರ್ಯ ಮುನಿಶ್ರೀಯವರ ವ್ಯಕ್ತಿತ್ವವನ್ನು ಸುಂದರವಾಗಿ, ಬಂಧುರವಾಗಿ ಸಾಕಾರಗೊಳಿಸಿದ್ದಾರೆ.] –ಸಂ.

ಬಾಲ್ಯದ ಹೆಸರು ಸುರೇಂದ್ರ ಅಂದರೆ 'ಸುರರರಸು'. ಸುರರರಸು ಶಬ್ದ ಮುಂದಿನಿಂದ–ಹಿಂದಣಿಂದ ಎರಡು ಕಡೆಯಿಂದ ಹೇಗೆ ಓದಿದರೂ ಒಂದೇ 'ಸುರರರಸು'ವೇ! ಹಿಂದಿನ, ಇಂದಿನ, ಮುಂದಿನ ಮೂರು ಜನ್ಮಗಳಲ್ಲಿ 'ಸುರೇಂದ್ರ'ನಾಗಿ 'ಸುರರರಸು'ವಾಗುವ ಶುಭ ಚಿಹ್ನೆ ಬಹುಶಃ ಇದು ಇರಬಹುದು. ಸುರರರಸು–ದೇವೇಂದ್ರ–ಸೌಧರ್ಮೇಂದ್ರ. ಈತ ಇತರ ಸುರರಿಗಿಂತ ಪರಮ ಭಾಗ್ಯಶಾಲಿ. ಜಿನನ ಯಾವ ಕಲ್ಯಾಣ ಸಾಧನೆಯಲ್ಲೂ ಇವನಿಗೇ ಮೊದಲ ಮಣೆ. ಈತನ ಸ್ಥಾನ ಜೈನ ಭವ್ಯ ಪರಂಪರೆಯಲ್ಲಿ ಅತ್ಯಂತ ಹಿರಿದು. ಜಿನನ ಜೀವನದ ಪ್ರತಿ ಗಳಿಗೆ–ಗಳಿಗೆಗೂ ಈತ ಸಿದ್ಧ. ಪುಣ್ಯ ಸಂಚಯದ ಯಾವ ಅವಕಾಶವನ್ನೂ ಈತ ಬಿಡಲಿಲ್ಲ: ಬಿಡಲೊಲ್ಲ.

ಗರ್ಭಕ್ಕೆ ಜಿನನ ಅವತರಣ: ಮೇರುಗಿರಿ ಶಿಖರಿಯಲ್ಲಿ ಜನ್ಮಮಜ್ಜನ; ದೀಕ್ಷಾಗ್ರಹಣ; ಜಿನನ ಕೇವಲಜ್ಞಾನ; ನಿರ್ವಾಣ ಇವು ಜಿನನ ಪಂಚಕಲ್ಯಾಣಗಳು. ಇಲ್ಲಿ ಎಲ್ಲೆಲ್ಲೂ ಸುರರರಸುವಿನದೇ ಕಾರುಭಾರ. ತಾನೇ ಅಲ್ಲ, ತನ್ನ ಅರಸಿ–ಶಚಿ, ತನ್ನಾನೆ-ಐರಾವತ, ತನ್ನದೇ ಸುರಪರಿವಾರ. ಎಲ್ಲರಿಗೂ ಕೈತುಂಬ ಕೆಲಸ. ಕಾಯಕದಿಂದ ಕೈಲಾಸ. ಈತ ಪುಣ್ಯಾರ್ಜನೆ ಮಾಡಿದ್ದೇ ಮಾಡಿದ್ದು. ಈ ಪುಣ್ಯ ಪಿಂಡದ ಮರುಭವವೇ ನಮ್ಮ ಈ 'ಸುರೇಂದ್ರ'ನ ಹುಟ್ಟು ಇರಬೇಕು. ಬಹುಶಃ ಸುರೇಂದ್ರನ ತಂದೆ-ತಾಯಿ ಕಲ್ಲಪ್ಪ–ಸರಸ್ವತಿಯರಿಗೆ ಈ ಪುಣ್ಯ ಪುರಂದರನ ಪೂರ್ವಭವದ ಪುಣ್ಯಾಸ್ರವ ಕಥಾಕೋಶದ ಒಂದೊಂದೇ ತುಣುಕು ಪದರ ಪದರವಾಗಿ 'ಅಜ್ಞಾತ' ಅವಧಿಜ್ಞಾನದಿಂದ ತಿಳಿದಿರಬೇಕಲ್ಲವೇ? ಆದುದರಿಂದ ಹುಟ್ಟಿದ ದಟ್ಟ–ಪುಟ್ಟ ಮಗುವಿಗೆ 'ಸುರೇಂದ್ರ'ನೆಂದೇ ಹೆಸರು ಇಟ್ಟರೋ, ಅಥವಾ ಈತ ಪುಣ್ಯದ ಜೊತೆಗೆ ಹೆಸರನ್ನೂ ಕಟ್ಟಿಕೊಂಡು ಬಂದುಬಿಟ್ಟನೋ ಏನೋ! ಅಂತು ಪುಣ್ಯಾನುಬಂಧಿ ಪುಣ್ಯ ಅಂದರೆ ಇದುವೇ. ಪುಣ್ಯ ಸಂಪಾದನೆಯಿಂದ ಮತ್ತಷ್ಟು ಪುಣ್ಯದ ಪ್ರಾಪ್ತಿಯೋಗ. ಈ ಯೋಗ ಸುರೇಂದ್ರನನ್ನು ಮಾನವನಿಂದ ಮುನೀಂದ್ರ ಪದದ ಎತ್ತರಕ್ಕೆ ಕೊಂಡೊಯ್ದುದೊಂದು ಅಚ್ಚರಿಯೇ! ಹುಟ್ಟಿದ ಮಗುವಿಗೆ ಸುರೇಂದ್ರನೆಂಬ ಹೆಸರು ಅನ್ವರ್ಥ.

ಮತ್ತೆ ಅದೇ ಸರಪಣಿ, ಅದೇ ಗೊಣಸುಗಳು. ಇಲ್ಲಿ ಮುನಿಶ್ರೀ ಪದದಿಂದ ಮಾಡಿದ, ಮಾಡುತ್ತಿರುವ ಜ್ಞಾನ, ಧ್ಯಾನ, ಚಿಂತನ, ಮಂಥನ, ಮಂತ್ರಮುಗ್ಧ ಪ್ರವಚನ, ಅಪ್ರತಿಮ ಪ್ರಭಾವನೆ ಆಸೇತು–ಹಿಮಾಚಲ ಅರ್ಧ ಶತಮಾನದ ವರೆಗೆ

ಎಡೆಬಿಡದೆ ನಡೆಯಿತು, ಜನರನ್ನು ನಡೆಸಿತು. ಇಂತಹದೊಂದು 'ಮಹಾರಸಾಯನ' ಅಮೃತದ ಸವಿಯನ್ನು ಸುರಿಸುವ, ಸ್ರವಿಸುವ ಪ್ರವಚನ ಗಂಗಾವತರಣ ಯಾವನೇ ಮುನಿಯಿಂದ, ಆಚಾರ್ಯರಿಂದ ಈ ತನಕ ಆದದ್ದೂ ಇಲ್ಲ; ಆಗುವ ಭಾಗ್ಯ ಲಭಿಸಿದ್ದೂ ಇಲ್ಲ. ಇದಕ್ಕಾಗಿಯೋ ಏನೋ ಮುನಿಶ್ರೀ ವಿದ್ಯಾನಂದರು ಸಮ್ಮೇದಶಿಖರವೇರಿ ತಪಗೈಯ್ಯಲಿಲ್ಲ. ಸ್ವಯಂಭೂ ತೀರ್ಥಂಕರ ವೃಷಭನಾಥನು ತಪಃ ಸಾಧನೆಗೈದ ಹಿಮಾಲಯ ಶಿಖರ ಶೇಖರರಾಗಿ ಅತಿಶಯ ಪರೀಷಹ ಸಹನೆಯಿಂದ ಸಿದ್ಧಿ ಪಡೆದರು. ಪರಿಶುದ್ಧ ಭಗೀರಥರಾಗಿ ಜ್ಞಾನ-ಜಾಹ್ನವಿಯನ್ನು, ಪ್ರವಚನ ಗಂಗೆಯನ್ನು ಭುವಿಗವತರಿಸಿ ತಂದು ನಮ್ಮನ್ನೆಲ್ಲ--ಮನುಕುಲವನ್ನೆಲ್ಲ ತಣಿಸಿದರು.

ಈ ಸಾಧನೆಯ ಫಲ ಮುಂದೇನು? ಮತ್ತೆ ಸುರೇಂದ್ರನಾಗುವುದು. ಅಂತು ಆ ಸುರರರಸು ಈ ಸುರೇಂದ್ರನಾಗಿ--ಮುನೀಂದ್ರನಾಗಿ ಪುನಃ ಅದೇ ಸುರೇಂದ್ರಪದವಿಗೆ ಏರುವುದು ಹುಸಿಯಾಗದು. 'ಸರಾಗಸಂಯಮ....ದೈವಸ್ಯ' ಎಂದರೆ ಪಂಚ ಮಹಾವ್ರತ ಧಾರಿಯಾದ ಮುನಿ, ರಾಗ ಪರಿಣಾಮದಿಂದ ಕೂಡಿದಾಗ ಸರಾಗ ಸಂಯಮಿಯಾಗುವನು. ಈ ರಾಗ ಪರಿಣಾಮ ಹತ್ತನೆಯ ಗುಣಸ್ಥಾನದ ತನಕವೂ ಇರಬಹುದು. ಅಂತಹ ಮುನಿಯು ಮುಡುಪಿ ಕಲ್ಪವಾಸಿ ದೇವನಾಗುವನು, ದೇವೇಂದ್ರನಾಗುವನು ಎಂದಿದ್ದಾರೆ ತತ್ತ್ವಾರ್ಥ ಸೂತ್ರಕಾರರು. ಅಂತು ಈ ಸುರೇಂದ್ರ ಮತ್ತೆ ಸುರೇಂದ್ರನಾಗಿ ಜಿನೇಂದ್ರನಾಗಲಿ. ಶುದ್ಧ ಸಿದ್ಧಿಯನ್ನು ಪಡೆದ ಸಿದ್ಧಪರಮೇಷ್ಠಿಯಾಗಲಿ ಎಂದು ಹಾರೈಸೋಣ.

ಇಂದು ಸುರೇಂದ್ರ ಸುರೇಂದ್ರನಾಗಿಲ್ಲ ಮುನೀಂದ್ರ ವಿದ್ಯಾನಂದಿ--ಏಲಾಚಾರ್ಯರಾಗಿದ್ದಾರೆ. ಪುದ್ಗಲ ದೇಹ ಅದೇ. ಪುಣ್ಯ ಆತ್ಮಚೇತನವೂ ಅದುವೇ. ಆದರೆ ಸಂಸ್ಕಾರದ ಕುಲುಮೆಯಲ್ಲಿ ಕುಂದಿ ಕುಂದಣವಾದ ಮುನಿ ದೇಹ. ಅಧ್ಯಯನದ ಆಚಾರದಿಂದ ಪ್ರಕಟಗೊಂಡ ಅಕಲಂಕ ಮಹಾಚೇತನ. ಇಲ್ಲಿ ಮಹೋನ್ನತಿಯ ಮುನಿಪದದ ಉತ್ಪಾದವಾಗಿದೆ. ಸಂಸಾರೀ ಸುರೇಂದ್ರ ಸ್ಥಿತಿಯು ವ್ಯಯವಾಗಿದೆ. ಶುದ್ಧಾತ್ಮನ ಧ್ರೌವ್ಯ--ಧ್ರುವತ್ವ ಮಾತ್ರ ಇಬ್ಬಗೆಯಲ್ಲೂ ಉಳಿದಿದೆ. ಆದ್ದರಿಂದಲೇ 'ಉತ್ಪಾದ--ವ್ಯಯ--ಧ್ರೌವ್ಯಯುಕ್ತಂ ಸತ್' ಆಗಿ ಮುನಿಗಳ ಬದುಕು ಬೆಳೆದಿದೆ. ಇದೇ ಮುಂದೆ ಸಿದ್ಧರಸವನ್ನು ಸವಿವ ಶುದ್ಧ--ಬುದ್ಧ--ಚಿದ್ರೂಪ ಸಿದ್ಧ ಪರಮೇಷ್ಠಿಯಾಗಲಿದೆ. ಅಂತಹ 'ಶ್ರೀ ವಿದ್ಯಾನಂದಾಯ ತೇ ನಮಃ'.

ಛದ್ಮಸ್ಥ ಜೀವನ ಎಂದರೆ ಸಂಸಾರದ ಬದುಕು ಸುರೇಂದ್ರನದೂ ಎಲ್ಲರಂತೆಯೇ. ಹುಟ್ಟು, ಬೆಳವಣಿಗೆ, ಏಳು--ಬೀಳುಗಳು, ಕಷ್ಟ--ಸುಖಗಳು ಎಲ್ಲರವೇ. ವ್ಯತ್ಯಾಸವಿದ್ದರೆ ಪುಣ್ಯ-ಪಾಪಗಳ ಪರ್ಯಾಯ ಮಾತ್ರ. ಅದಕ್ಕೆ ತಕ್ಕಂತಹ, ತಕ್ಕಷ್ಟು ಕುಣಿತ-ಮಣಿತಗಳು. ಆಟ-ಆಟೋಪಗಳು. ಕರ್ಮ ಕಾಷ್ಠಂಗಾರನ ಕೈಗೊಂಬೆಗಳು ತಾನೆ ನಾವು.

ಕನ್ನಡನಾಡಿನ ಉತ್ತರದ ಗಡಿ ಜಿಲ್ಲೆ ಬೆಳಗಾಂವಿಯ ಗಡಿಯ ಬಳಿಯ ಚಿಕ್ಕ ಊರು ಶೇಡಬಾಳ. ಪೂಜ್ಯ ಮುನಿಶ್ರೀ ವಿದ್ಯಾನಂದರ ಪೂರ್ವಾಶ್ರಮದ ಸುರೇಂದ್ರ ದಿನಾಂಕ 22 ಎಪ್ರಿಲ್ 1925ರ ಶುಭದಿನದಂದು ಜನಿಸಿದ. ಪೂರ್ವ ಪುಣ್ಯದ

ಜೊತೆ ಅಂಟಿ ಬಂದ ಅಂದಿನ 'ಸುರರರಸು' ಇಲ್ಲಿ ಸುರೇಂದ್ರನಾಗಿ ಮೈವೆತ್ತು ಬಂದ. ಮಗುವಿಗೆ ಅದೇ ಸುರೇಂದ್ರ ಎಂಬ ನಾಮಕರಣವಾಯಿತು. ಅಂದು ಭುವಿಗವತರಿಸಿದ ಸುರೇಂದ್ರ, ಮುನೀಂದ್ರ ವಿದ್ಯಾನಂದನಾಗಿ ಮಹಾ ಚೇತನವಾದುದೊಂದು ಪ್ರಾಕೃತ ಪವಾಡ. 'ಸುರನ ಪುಣ್ಯಂ ಪುರುಷರೂಪಿಂದ ಮೆರೆಯುತಿದೆ, ಬೆಳೆಯುತಿದೆ' ಎಂದರೂ ತಪ್ಪಾಗದು.

ಶೇಡಬಾಳದಲ್ಲಿ ಸುಮಾರು 500 ವರ್ಷಗಳಷ್ಟು ಪುರಾತನ ಬಸದಿಯೊಂದಿದೆ. ಅಲ್ಲಿಯ ಪುರೋಹಿತ ಅಣ್ಣಪ್ಪ ಉಪಾಧ್ಯೆ ಕುಮಾರ ಸುರೇಂದ್ರನ ಅಜ್ಜ. ಅವರ ಇಬ್ಬರು ಮಕ್ಕಳು ಭರಮಪ್ಪ ಉಪಾಧ್ಯೆ ಮತ್ತು ಕಲ್ಲಪ್ಪ ಉಪಾಧ್ಯೆಯರು ಊರಿನ ಪೌರೋಹಿತ್ಯ, ಪೂಜೆ-ಪುರಸ್ಕಾರಗಳಲ್ಲಿ, ವಿಧಿ-ವಿಧಾನಗಳಲ್ಲಿ ನಿಷ್ಣಾತರು. ಹಳೆಯ ಕಾಲದ ಹಿತ್ತಿಲ ಮನೆಯಲ್ಲಿ ವಾಸವಾಗಿದ್ದು ಊರಿನ ಜನಕ್ಕೆಲ್ಲ 'ನಮ್ಮ ಉಪಾಧ್ಯೆ ಯವರು' ಎಂಬಷ್ಟು ಬೇಕಾದವರು. ವಿದ್ವತೆಗೆ, ವ್ಯವಹಾರಕ್ಕೆ, ಮನೆಯ ಶುಭ-ಶೋಭನ ಕಾರ್ಯಕ್ಕೆಲ್ಲ ಇವರೇ ದಿಕ್ಕು. ತಂದೆ ಕಲ್ಲಪ್ಪ ಉಪಾಧ್ಯೆ ಶಾಂತ, ಭದ್ರ, ಶುಭ ಪರಿಣಾಮಿ, ಅಷ್ಟೇ ಕಟ್ಟು-ನಿಟ್ಟಿನ, ಶಿಸ್ತಿನ ಸಿಪಾಯಿ. ತಾಯಿ ಸೌಭಾಗ್ಯವತಿ ಸರಸ್ವತಿದೇವಿ, ಸುಶೀಲೆ, ಗೌರವಸ್ಥೆ, ಸದ್ಗೃಹಸ್ಥೆ. ಊರಿಗೆ ಬಂದ ಅತಿಥಿ-ಅಭ್ಯಾಗ್ಯ ತರಿಗೆಲ್ಲ ಇಲ್ಲಿಯೇ ನಿತ್ಯದಾಸೋಹ. ಇಂತಹ, ಸಾತ್ವಿಕ, ಸುಸಂಸ್ಕೃತ ಮಾತಾ-ಪಿತರ ಪರಿಪಕ್ವ ಪರಿಸರದ ಅಚ್ಚು ಅಚ್ಚುಕಟ್ಟಾಗಿ ಬಿತ್ತು ಬಾಲಕ ಸುರೇಂದ್ರನ ಮೇಲೆ. ಸರಸ್ವತಿಯ ಮುದ್ದು ಕಂದ ಮುನಿ ವಿದ್ಯಾನಂದ. ಉಪಾಧ್ಯೆಯ ವರಕುವರ 'ಉಪಾಧ್ಯಾಯ' ಪರಮೇಷ್ಠಿಯಾದ. ಇದು ಪ್ರಕೃತಿದತ್ತ ವರವಲ್ಲವೇ? 'ದೈವದೊಲ್ಮೆ ಇರಲುಂ ಎಳೆಗರುಂ ಎತ್ತಾಗದೇ ಲೋಕದೊಳ್'? ಇವರ ತಂದೆಯವರಾದ ಶ್ರೀ ಕಲ್ಲಪ್ಪಾ ಉಪಾಧ್ಯೆಯವರು ವಿಶ್ವವಿಖ್ಯಾತ ತೀರ್ಥ ಕಾಶಿಯಲ್ಲಿ ಶ್ರೀ ಸ್ಯಾದ್ವಾದ ಮಹಾವಿದ್ಯಾಲಯದಲ್ಲಿ ಜೈನ ದರ್ಶನ-ಸಾಹಿತ್ಯ-ನ್ಯಾಯಗಳನ್ನು ಆಳವಾಗಿ ಅಧ್ಯಯನ ಮಾಡಿದವರು. ಸ್ವ। ಶ್ರೀ ಸುಬ್ಬಯ್ಯಾ ಶಾಸ್ತ್ರಿ ಮತ್ತು ಸ್ವ। ಶ್ರೀ ಕುಮಾರಯ್ಯ ಶಾಸ್ತ್ರಿಗಳು ಇವರ ಸಹಪಾಠಿಗಳಾಗಿದ್ದರು. ಇಂತಹ ಓರ್ವ ಘನ ವಿದ್ವಾಂಸನ ಮನೆ ಯಲ್ಲಿ ಸುರೇಂದ್ರನ ಜನ್ಮ ಸಾರ್ಥಕವಾಯಿತೆಂದೇ ಹೇಳಬೇಕು.

ಬಾಲ್ಯದಲ್ಲೇ ಸುರೇಂದ್ರನೆಂದರೆ ಎಲ್ಲರಿಗೂ ಅಚ್ಚು-ಮೆಚ್ಚು. ಮುಗ್ಧ ಬಾಲಕ ಎಲ್ಲರ ಕಣ್ಮಣಿಯಾದ. ಅಜ್ಜ-ಮುತ್ತಜ್ಜ, ಅಜ್ಜಿ-ಮುತ್ತಜ್ಜಿಯರ ಮುಚ್ಚಟೆಯ ಕೊಂಡಾಟ ಪ್ರೀತಿಯ ಮಳೆಯನ್ನೇ ಸುರಿಸಿತು. ಈ ಅಕ್ಕರೆಯ ಬೆಸೆಯಿಂದ ಅವನ ಅಕ್ಷರಪಾಠ ಕುಂಟುತ್ತಾ ಸಾಗಿತು. ಪ್ರಾಥಮಿಕ ಶಾಲೆಯ ವಿದ್ಯಾಭ್ಯಾಸ ತಡವಾಗಿ ಆರಂಭವಾಯಿತು. ಮನೆಯಲ್ಲಿ ತಂದೆಯ ವರ್ಗಾವಣೆಯಿಂದಲೂ ಬಾಲಕನ ಮೇಲಿನ ಅಂಕುಶ, ಹಿಡಿತ ಸಡಿಲಾಯಿತು. ಪಾಠಕ್ಕಿಂತ ಆಟದ ಕೈ ಮೇಲಾಯಿತು.

ಹಾಗೂ ಹೀಗೂ ಓದು ಪ್ರಾರಂಭವಾಯಿತು. ಸುರೇಂದ್ರನ ಮೊದಲ ಪಾಠ ಶಾಲೆ ದಾನವಾಡಿ ಗ್ರಾಮದ ಮರಾಠಿ ಪಾಠಶಾಲೆ. ಮನೆಯ ಮಾತು-ತಾಯಿನುಡಿ ಕನ್ನಡವಾದರೂ ಊರಿನ ಪರಿಸರದ ವ್ಯವಹಾರವೆಲ್ಲ ಮರಾಠಿಯೇ. ಆದುದರಿಂದ ಸಹಚರರೊಡನೆ, ಸಹಪಾಠಿಗಳ ಜೊತೆ ಮರಾಠಿಯಲ್ಲೇ ವಾರ್ತಾಲಾಪ. ಆದುದರಿಂದ

ಈ ಭಾಷೆಯ ಕಡೆಯೇ ಬಾಲಕನ ಒಲವು. ಹಳ್ಳಿಯಲ್ಲಿ ಜೈನರ ಮನೆಯೇ ಹೆಚ್ಚು, ಊರಿನ ಬಸದಿಯೇ ಪೂಜಾರಿಗಳ ಮನೆ. ಬಸದಿ ಎಂದ ಮೇಲೆ ಸಾಧು-ಸಂತರು, ಮುನಿ-ತ್ಯಾಗಿಗಳು ಆಗಾಗ್ಗೆ ಬರುತ್ತಿದ್ದರು. ಮೊದಲೇ ಓದು ಎಂದರೆ ಕಹಿ ಗುಳಿಗೆ ಯಾಗಿದ್ದ ಸುರೇಂದ್ರನಿಗೆ ಈ ವಾತಾವರಣದಿಂದ ಏನೋ ಒಂದು ತೆರನ ಹಿಗ್ಗು, ಉಬ್ಬು. ಅಲ್ಲಿನ ಧರ್ಮಸಭೆ, ಪುರಾಣವಾಚನ, ಭಜನೆ-ಕೀರ್ತನೆಗಳು ಅವನ ಮನ ಸ್ಸನ್ನು ಆಯಸ್ಕಾಂತದಂತೆ ಸೆಳೆಯುವು. ಬಾಲಕ ಸುರೇಂದ್ರನಿಗೆ ಸಂಗೀತ ಎಂದರೆ ಪಂಚಪ್ರಾಣ.

ಸುರೇಂದ್ರ 5-6 ವರ್ಷದವನು. ಆಗ ಚಾತುರ್ಮಾಸಕ್ಕಾಗಿ ಮುನಿ ಸಂಘ ಒಂದು ಬಸದಿಯಲ್ಲಿ ತಂಗಿತ್ತು. ರೊಟ್ಟಿ ಜಾರಿ ತುಪ್ಪದಲ್ಲಿ ಬಿತ್ತು. ಸುರೇಂದ್ರ ಯಾವಾಗಲೂ ಬಸದಿಯಲ್ಲೇ. ಅವರ ಜೊತೆಯೇ, ಅವರ ಯಾವ ಸೇವೆಗೂ ಸಿದ್ಧ. ಬಿಸಿನೀರು ತರುವುದು, ಕಮಂಡಲು ಹಿಡಿಯುವುದು. ಕಾಡ ಶುದ್ಧಿ(ಮಲವಿಸರ್ಜನೆ) ಗಾಗಿ ಊರ ಹೊರಗೆ ಕರೆದೊಯ್ಯುವುದು ಎಲ್ಲಕ್ಕೂ ಇವನದೇ ಕಾರುಭಾರ, ರಾಯ ಭಾರ. ರಾತ್ರೆ ಮಲಗುವುದೂ ಅಲ್ಲೇ ಬರಿ ನೆಲದ ಅಪ್ಪುಗೆಯಲ್ಲಿ. ಈ ಪುಟ್ಟ ಬಾಲಕನ ಆಸಕ್ತಿ, ಅಜ್ಞಾತ ವಿರಕ್ತಿ ಕಂಡು ಮುನಿಗಳಿಗೂ ಹಿಗ್ಗು. ಕೈ ಎತ್ತಿ ಹರಸು ತ್ತಿದ್ದರು, ಪಿಂಛದಿಂದ ನಯವಾಗಿ ನೇವರಿಸುತ್ತಿದ್ದರು. ಪಿಂಛ ಎಂದರೆ ಸುರೇಂದ್ರನಿಗೂ ಪ್ರೀತಿ. ಬಣ್ಣ-ಬಣ್ಣದ ಗರಿಗಣ್ಣುಗಳು, ನುಣ್ಪು-ಬಿಣ್ಪು. ಅದರ ಒಂದು ಗರಿ ಸಿಕ್ಕಿ ದರೆ ಅದೆಷ್ಟು ಹಿಗ್ಗು. ಅದನ್ನು ಕೈಯಿಂದ ಮುಟ್ಟುವುದು, ಸವರುವುದು, ಎತ್ತಿ ಇನ್ನೊಬ್ಬರ ನೆತ್ತಿಗೆ ಎತ್ತಿ ಇಟ್ಟಂತೆ, ಹರಸಿದಂತೆ ನಟಿಸುವುದು ಗುಟ್ಟಿನಲ್ಲಿ ನಡೆದೇ ಇತ್ತು. ಒಮ್ಮೊಮ್ಮೆ ಕಣ್ತಪ್ಪಿ ತಾಯಿ ಕಂಡಾಗ ಪೆಚ್ಚಿ ಬೀಳುತ್ತಿದ್ದ. ಆಕೆ– 'ಅಯ್ಯೋ! ನಿನಗೂ ಈ ಹುಚ್ಚೇ?' ಎಂದು ಎಚ್ಚರಿಸುತ್ತಿದ್ದಳು. ಈ ಹುಚ್ಚಿಗೆ ತನ್ನ ಮಗ ಮುಂದೆ ಮನಂಗೊಡುತ್ತಾ 'ಜಗಮೆಚ್ಚಿದ ಮಗ'ನಾಗುತ್ತಾನೆಂದು ಆ ಮಾ ತಾಯಿಗೇನು ಗೊತ್ತು?

ಆಗಾಗ್ಗೆ ತನ್ನ ಸರ್ಗಾಪಣೆಯಿಂದ ತನ್ನ ಮಗನ ವಿದ್ಯೆ ಹಾಳಾಗುತ್ತಲ್ಲ ಎಂಬುದು ತಂದೆ ಕಲ್ಲಪ್ಪನವರಿಗೆ ಚಿಂತೆ. ಇವನನ್ನು ಕಟ್ಟಿಕೊಂಡು ಊರೂರು ಅಲೆಯುವಂತೆಯೂ ಇಲ್ಲ. ಇದರ ಪರಿಹಾರಕ್ಕಾಗಿ ತಂದೆ ಕಲ್ಲಪ್ಪ ಪಂಡಿತರು ಬಾಲಕ ಸುರೇಂದ್ರನನ್ನು ಶ್ರೀ ಶಾಂತಿಸಾಗರ ವಿದ್ಯಾರ್ಥಿನಿಲಯಕ್ಕೆ ಸೇರಿಸಿದರು. ಹಾಂದು, ಇಲ್ಲಿ ಒಂದು ಮಾತು ನೆನಪಾಯಿತು. ಅದೇನೆಂದರೆ ಬಾಲಕ ಸುರೇಂದ್ರನ ಜನ್ಮನಾಮ 'ಚೂಡಾಮಣಿ' ಎಂದಿತ್ತು. ತೊಟ್ಟಿಲಲ್ಲಿ 'ನಾಮಕರಣ ಸಂಸ್ಕಾರ' ಸುರೇಂದ್ರನೆಂದಾಯಿತು. 'ಚೂಡಾ- ಮಣಿ'ಯ ರೂಪದಲ್ಲಿ ಸಮ್ಯಗ್ದರ್ಶನ–ಜ್ಞಾನ–ಚಾರಿತ್ರವನ್ನು ಗಳಿಸಿ 'ಸುರೇಂದ್ರ' ಪದ ವನ್ನು ಪಡೆಯುವುದು ಶಾಸ್ತ್ರೋಕ್ತವೇ ಆಗಿದೆ. ಇನ್ನೊಂದು ಮಾತೆಂದರೆ ಇವರ ಪ್ರಾಥಮಿಕ ಶಿಕ್ಷಣವು ಕೊಲ್ಹಾಪುರ ಜಿಲ್ಲೆಯ ಗಿಜವುಣೆ ಗ್ರಾಮದಲ್ಲಿ ಅಜ್ಜಿ ಬಾಳವ್ವ ಮತ್ತು ಅಜ್ಜ ಶ್ರೀಪಾಲರ ಸಾನಿಧ್ಯದಲ್ಲಿ ಉತ್ತಮ ರೀತಿಯಲ್ಲಿ ಜರುಗಿತು. ಹೀಗೆ ದಾನವಾಡದಲ್ಲಿ ಮರಾಠಿ ಹಿಂದಿ ಮತ್ತು ಗಿಜವುಣೆ ಗ್ರಾಮದಲ್ಲಿ ಪ್ರಾಥಮಿಕ ಶಿಕ್ಷಣದ ನಾಂದಿಯಾಯಿತು.

ಶೇಡಬಾಳದ ಶ್ರೀ ಶಾಂತಿಸಾಗರ ವಿದ್ಯಾಲಯ ಮರಾಠಿ ಮಾಧ್ಯಮ ಶಾಲೆ. ಮರಾಠಿ ಎಂದರೆ ಸುರೇಂದ್ರನಿಗೆ ಮೊದಲಿನಿಂದಲೂ ಖುಶಿ. ರೊಟ್ಟಿ ಜಾರಿ ಬಿದ್ದದ್ದು ತುಪ್ಪಕ್ಕೇ. ಹತ್ತು ವರ್ಷದ ಬಾಲಕ ಆಶ್ರಮದ ಶಿಸ್ತುಬದ್ಧ ಕಾರ್ಯಕ್ರಮಕ್ಕೆ ತನ್ನನ್ನು ತಾನು ಒಗ್ಗಿಸಿಕೊಂಡ. ಎಲ್ಲ ಪಾಠ ಪ್ರವಚನಗಳಲ್ಲಿ ಶ್ರದ್ಧೆಯಿಂದ ಪಾಲು ಗೊಳ್ಳತೊಡಗಿದ. ಯಾವುದೇ ಕೆಲಸವಿರಲಿ ಕಸ ಗುಡಿಸುವುದು, ಹೂ ಕೊಯ್ಯುವುದು, ಬಸದಿಯ ತಟ್ಟೆ ಬಟ್ಟಲು ತೊಳೆಯುವುದು, ಗಂಧ ತೇಯುವುದು, ಎಲ್ಲದರಲ್ಲೂ ಈತ ಮುಂದು. ಎಲ್ಲರಿಗೂ ಮುಂದಾಳು. ತೋಟಗಾರಿಕೆಗೆ ಸುರೇಂದ್ರನದು ಎತ್ತಿದ ಕೈ. ಬೆವರು ಸುರಿಸಿ ಪಾತಿ ಮಾಡುವುದು, ಬೀಜ ಬಿತ್ತುವುದು, ಗೊಬ್ಬರ ಹಾಕುವುದು, ನೀರು ಹಾಯಿಸುವುದು ಇತ್ಯಾದಿ. ಬೇರೆ ಹುಡುಗರ ಪಾತಿ ಗಿಡಗಳು ಬಲಿಯ ತೊಡಗಿದವು, ಬೆಳೆದವು. ಆದರೆ ಸುರೇಂದ್ರನವು ಯಾಕೋ ಬಿಸಿಲಿಗೆ ಬಾಡಿ ಒಣಗು ತ್ತಿದ್ದುವು. ಎಲ್ಲರಿಗೂ ಚೋದ್ಯ, ಇದೇನು ಹೀಗೆ? ಎಂದು. ಕೊನೆಗೆ ಗುಟ್ಟು ರಟ್ಟಾಯಿತು. ಅವಸರ ಭಟ್ಟನಾದ ಈ ಸುರೇಂದ್ರ ಒಂದೊಂದೇ ಗಿಡವನ್ನು ಕಿತ್ತು 'ಬೇರು ಬಂತೇ? ಎಷ್ಟು ಬೆಳೆಯಿತು?' ಎಂದು ಹೊಸ ಸಂಶೋಧನೆಗೆ ತೊಡಗಿದುದರ ಫಲ ಈ ಅವಾಂತರ ಎಂದು. ಈ ಅನುಸಂಧಾನ ವೃತ್ತಿ ಮುಂದೆ ಬಲಿಯುವುದೆಂಬು ದರ ಸಹಜ ಪರಿಚಯವು ಇದಾಗಿತ್ತು. 'ಮಗ ಜೂಜಿನಲ್ಲಿ ಸೋತರೂ ಅದರ ಒಳವು ಕಂಡ' ಅಲ್ಲವೇ?

ಸುರೇಂದ್ರನಲ್ಲಿ ಬಾಲ್ಯದಲ್ಲೇ ಅನೇಕ ಗುಣಗಳು ಅರಳಿ ಪರಿಮಳಿಸುತ್ತಿದ್ದವು. ಚಿಕ್ಕ-ಪುಟ್ಟ ಸಂಗಡಿಗರಿಗೆ ನೆರವು ನೀಡುವುದು, ಕಾಯಿಲೆ-ಕಸಾಲೆ ಬಿದ್ದವರ ಉಪಚಾರ, ದೀನ-ದಲಿತರಿಗೆ ಧೈರ್ಯದ ಭರವಸೆ, ಇದು ಅವಿರತ ಸಾಗುತ್ತಿತ್ತು. ಒಂದು ಬಾರಿ ತರಕಾರಿ ಮೂಟೆ ತಲೆಯ ಮೇಲೆ ಹೊರಲು ಅಜ್ಜಿಯೊಬ್ಬಳು ದಾರಿಯಲ್ಲಿ ಪೇಚಾಡು ತ್ತಿದ್ದಳು. ಕಂಡವರೆಲ್ಲ ನೋಡಿ ಮುಂದೆ ಹೋಗುತ್ತಿದ್ದರೇ ಹೊರತು ಯಾರೂ ಸಹ ಕರಿಸಲಿಲ್ಲ. ಆ ದಾರಿಯಾಗಿ ಸಾಗುತ್ತಿದ್ದ ಈ ವಾಮನಮೂರ್ತಿ ನಿಂತ. ಹತ್ತಿರ ದಲ್ಲಿ ಹೂತಿದ್ದ ಮೈಲುಗಲ್ಲನ್ನು ಮೂಟೆ ಸಹಿತ ಹೊತ್ತು, ಹತ್ತಿ ಅಜ್ಜಿಯ ತಲೆಗೆ ಸಲೀಸಾಗಿ ಎತ್ತಿ ಇಟ್ಟ. ಅಜ್ಜಿಯ ಮುಖ ಕೃತಜ್ಞಭಾವದಿಂದ ಅರಳಿತು, ಮಗು ವನ್ನು ಮನಸಾರೆ ಹರಸಿತು. 'ಪರಸ್ಪರೋಪಗ್ರಹೋ ಜೀವಾನಾಂ' ಸೂತ್ರ ಸಾರ್ಥಕ ವಾಯಿತು.

ಬಾಲಕನಾದರೂ ಸುರೇಂದ್ರನ ತರ್ಕ, ಯೋಜನೆ ಪ್ರೌಢ್ಯಾಧರಿತವಾಗಿರುತ್ತಿತ್ತು. ಒಮ್ಮೆ ಗುರುಗಳು ಕೊಟ್ಟ ಕೆಲಸ ಈ ಹುಡುಗ ಪೂರ್ತಿ ಮಾಡಿರಲಿಲ್ಲ. ಸಿಟ್ಟಾಗಿ ಗುರುಗಳು ಬೆತ್ತ ಹಿಡಿದು ಕೈ ಮುಂದೆ ಚಾಚಲು ಹೇಳಿದರು. ಸುರೇಂದ್ರ ದಿಟ್ಟತನ ದಿಂದ ಎರಡೂ ಕೈ ಚಾಚುತ್ತ 'ತಪ್ಪು ಮಾಡಿದ್ದು ಎರಡೂ ಕೈಗಳು. ಹೊಡೆಯು ವುದಾದರೆ ಎರಡಕ್ಕೂ ಶಿಕ್ಷೆ ಸಿಗಲಿ' ಎಂದ. ಮತ್ತೊಮ್ಮೆ ಸುರೇಂದ್ರನ ಹೊಸ ಚಡ್ಡಿ ಒಗೆದು ಒದ್ದೆಯಾಗಿ ಒಣಗಿರಲಿಲ್ಲ. ಅದಕ್ಕಾಗಿ ಹಳೆಯ, ಸ್ವಲ್ಪ ಹರಿದ ಚಡ್ಡಿ ಹಾಕಿ ಕೊಂಡು ತರಗತಿಗೆ ಬಂದ. ಗುರುಗಳು ನೋಡಿ ಸಿಟ್ಟಾದರು. ಮರುದಿನ ಅದೇ ಚಡ್ಡಿಯನ್ನು ಅಡಿ-ಮೇಲಾಗಿ ತಿರುಗಿಸಿ ತೊಟ್ಟು ಬಂದಿದ್ದ. ಗುರುಗಳು ಕೇಳಿದಾಗ

ಹುಡುಗನ ಉತ್ತರ- 'ಗುರುಗಳೇ, ಚಡ್ಡಿ ಸ್ವಲ್ಪ ಹರಿದದ್ದು ನಿಜ, ಆದರೆ ಅದರಿಂದ ಹೊರಗೇನೂ ಕಾಣಿಸುವುದಿಲ್ಲವಲ್ಲ.' ಹೌದು, ಭವಿಷ್ಯದಲ್ಲಿ ತೊಡುವುದನ್ನೇ ತ್ಯಜಿಸಿ ಅಪರಿಗ್ರಹಿಯಾಗಲಿರುವ ತ್ಯಾಗಿಗೆ ಹೊಸದೇನು? ಹರಿದುದೇನು? ಎಲ್ಲವೂ, ಎಲ್ಲದ ರಲ್ಲೂ ಸಮಚಿತ್ತ, ಸಮವೃತ್ತ.

ಆಟದಲ್ಲಿ ಮತ್ತು ಭಾಷಣದ ಕಾರ್ಯಕ್ರಮದಲ್ಲಿ ಸುರೇಂದ್ರ ಯಾವಾಗಲೂ ಮುಂದು. ಈ ಸುರೇಂದ್ರ ಟೀಮು ಆಟದಲ್ಲಿ ಸೋತಾಗ ಏನಾದರೂ ನೆಪ ಜಗಳಕ್ಕೆ ಸಿಗುತ್ತಿತ್ತು, ಜಗಳವೂ ಆಗುತ್ತಿತ್ತು. ಆದರೆ ಆ ಮೇಲೆ ನಿಷ್ಠ ಆಟಗಾರನಂತೆ ತಾನೇ ಮುಂದಾಗಿ ಗೆದ್ದ ತಂಡವನ್ನು ಕೈಕುಲುಕಿ ಬಾಚಿ ತಬ್ಬಿಕೊಂಡು ಗೆಲುವಿನ ಬಗೆಗೆ ಶುಭಾಶಯವನ್ನು ಹೇಳುವುದರಲ್ಲಿ ಈ ಸುರೇಂದ್ರ ಎಂದೂ ಹಿಂದುಳಿದವನಲ್ಲ. ಈ ಔದಾರ್ಯದ ಜೊತೆಗೆ ಇವನಲ್ಲಿ ನಿಯಮವನ್ನು ಕಟ್ಟು-ನಿಟ್ಟಾಗಿ ಪಾಲಿಸುವ ಶಿಸ್ತೂ ಕಠೋರವಾಗಿತ್ತು. ಮುಂಜಾನೆ ಏಳುವಲ್ಲಿ ಒಮ್ಮೆ ಹೊತ್ತಾದ ಬಗೆಗೆ ಗುರುಗಳಿಂದ ಬೈಗಳು ಸಿಕ್ಕಿತ್ತು. ಶಿಸ್ತುಬದ್ಧ ಸುರೇಂದ್ರನಿಗೆ ಅಷ್ಟೇ ಸಾಕಾಯಿತು. ಅಂದಿನಿಂದ ಎಲ್ಲರಿಗಿಂತಲೂ ಮೊದಲೇ ಏಳುವ ಹಾಗೂ ಇತರರನ್ನು ಎಬ್ಬಿಸುವ ಗಂಟೆ ಬಾರಿಸುವ ಕೆಲಸ ತಾನೇ ಮಾಡುವ ನಿಷ್ಠುರ ನಿಯಮಬದ್ಧನಾದ. ರಾತ್ರಿ ಗಂಟೆಯ ಅಡಿಯಲ್ಲೇ ಶಯನ, ಹೊತ್ತು ಮೀರೀತೆಂಬ ಭಯ. ರಾತ್ರಿ 2–3 ಬಾರಿ ಎದ್ದು ಗಂಟೆ ನೋಡು ವುದು, ಮಲಗುವುದು. ಆದರೆ ಸರಿಯಾದ ಸಮಯಕ್ಕೆ ಮಾತ್ರ ಗಂಟಾನಾದ. ಒಮ್ಮೆ ಏಳುವುದರಲ್ಲಿ ಗುರುಗಳಿಗೇ ತಡವಾಯಿತು, ಕಾರಣಾಂತರದಿಂದ. ಆದರೆ ಗಂಟೆ ಮಾತ್ರ ಸರಿಯಾದ ಸಮಯಕ್ಕೆ ಬಾರಿಸಿತ್ತು. ಸುರೇಂದ್ರ ಸರಿಯಾದ ಸಮಯಕ್ಕೆ ಎದ್ದಿದ್ದ. ಅಂತೆಯೇ ಮುಂದೆ ಮುನಿಚರ್ಯೆಯಲ್ಲೂ ಈ ನಿಯಮಬದ್ಧ-ಸಮಯ ಪ್ರಬುದ್ಧ ಕಾರ್ಯ ಅವರ ಪೈಗೆ ಒಗ್ಗಿ ಬಂದಿತ್ತು. 'ಕ್ಷಣಶಃ ಕ್ಷಣಶಶ್ಚೈವ ವಿದ್ಯಾ ಮರ್ಥಂ ಚ ಸಾಧಯೇತ್'.

ಕಷ್ಟ ಎಷ್ಟೇ ಬಂದರೂ, ಬಂತಲ್ಲ ಎಂದು ಕೊರಗುವ ಕಾರ್ಪಣ್ಯ ಇವರದಲ್ಲ. ಎದುರಿಸುವ ದಿಟ್ಟ ಎಂಟೆದೆ ಇವರಿಗೆ. ಒಮ್ಮೆ ಕಿವಿಯ ಬುಡದಲ್ಲಿ ಒಂದು ದೊಡ್ಡ ಬೊಕ್ಕೆ ಎದ್ದಿತ್ತು, ಕೀವು ತುಂಬಿ ನೋಯತೊಡಗಿತ್ತು. ಅದನ್ನು ಸಿಗಿದು ಒಳಗಿದ್ದ ಕೀವು ತೆಗೆಸಲು ಹೇಳಿದರು, ತೆಗೆಯಲು ಎಲ್ಲರಿಗೂ ಭಯ. ಒಂದಲ್ಲ ಒಂದು ನೆಪ ಹೇಳಿ ಜಾರಿದರು. ಧೀರ ಸುರೇಂದ್ರ ಕನ್ನಡಿಯ ಮುಂದೆ ನಿಂತು ಚಾಕು ಹಿಡಿದು ಬೊಕ್ಕೆ ಸೀಳಿದ, ಕೀವು ಸೋರಿತು ಬೇನೆ ಬೇಗ ಮಾಯ. ನೋಡಿದವರಿಗೆ ಬೆಕ್ಕಸ ಬೆರಗು. ಆದರೆ ಸುರೇಂದ್ರನ ಬಾಯಿಂದ ಚಕಾರವಿಲ್ಲ, ಔದುಗಚ್ಚಿದ ದೃಢ ನಿರ್ಧಾರ. ಅದೇ ದಿನಗಳಲ್ಲಿ ಸುರೇಂದ್ರನಲ್ಲಿ ದೇಶ-ಭಕ್ತಿಯ ಸ್ರೋತ ಹರಿಯಿತು. 1931-32ರ ಸಮಯ. ಮಹಾತ್ಮಾ ಗಾಂಧೀಜಿಯವರ ಚಳವಳಿಯ ಪ್ರಾರಂಭದ ದಿನಗಳು. ಧೀರ ಸುರೇಂದ್ರ ಹೇಗೆ ಸುಮ್ಮನಿದ್ದಾನು? ದೇಶದಲ್ಲೆಲ್ಲ ಮಿಂಚಿನ ಸಂಚಾರವಾದಾಗ ಇವ ನಲ್ಲೂ ಇದರ ಪ್ರಚಂಡ ಪ್ರಭಾವ ಬೀರಿತು.

1937ರಲ್ಲಿ ಆಶ್ರಮದ ಗುರುಗಳು ಆಶ್ರಮ ಬಿಟ್ಟು ತೆರಳಿದರು. ಪಟ್ಟ ಶಿಷ್ಯ ಸುರೇಂದ್ರನೂ ಆಶ್ರಮ ತೊರೆದ. ಆ ಬಳಿಕ ಸುರೇಂದ್ರನು ಕೊಲ್ಲಾಪುರದ ಹಿಂದಿನ

ಘನ ವಿದ್ವಾಂಸ ಸ್ವ। ಸ್ವಸ್ತಿ ಶ್ರೀ ಲಕ್ಷ್ಮೀಸೇನ ಭಟ್ಟಾರಕರ ಸಾನ್ನಿಧ್ಯದಲ್ಲಿ ಧರ್ಮ, ನ್ಯಾಯ, ಸಾಹಿತ್ಯ, ವ್ಯಾಕರಣಗಳ ಗಹನ ಅಧ್ಯಯನ ನಡೆಸಿ ಕೊಲ್ಲಾಪುರದ ಸಂಸ್ಕೃತ ವಿದ್ಯಾಲಯದಲ್ಲಿ ಬಾಹುಬಲಿ ಶರ್ಮಾ ಶಾಸ್ತ್ರಿಗಳಿಂದ ಸಂಸ್ಕೃತದ ಪೂರ್ಣ ಅಧ್ಯಯನ ವನ್ನು ಮಾಡಿಕೊಂಡು ಧಾರ್ಮಿಕ ಮತ್ತು ಲೌಕಿಕ ಶಿಕ್ಷಣಗಳಲ್ಲಿ ಪರಮ ಪಾರಂಗತ ನಾದನು. ಈ ರೀತಿ ಪ್ರಾರಂಭಿಕ ಜೀವನದಲ್ಲೇ ಸುರೇಂದ್ರನಿಗೆ ಶ್ರಮಣ ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿಯ ಗಹನ ಶಿಕ್ಷಣವು 'ಧರ್ಮ ಮತ್ತು ಅಧ್ಯಾತ್ಮ'ದ ರಸದೊಂದಿಗೆ ಬೇರೂರಿತು. ಇಷ್ಟೇ ಅಲ್ಲದೆ ಇಲ್ಲಿ ಉಲ್ಲೇಖನೀಯವೇನೆಂದರೆ ಶ್ರೀ ಸುರೇಂದ್ರನು ಕುಂಭೋಜ–ಬಾಹುಬಲಿ ಗುರುಕುಲದಲ್ಲಿ 'ಗುರುಕುಲ'ದ 'ಪೂರ್ಣ ಸಂಸ್ಕಾರ'ದೊಂದಿಗೆ ಛಹಢಾಲಾ, ರತ್ನಕರಂಡ ಶ್ರಾವಕಾಚಾರ, ದ್ರವ್ಯ ಸಂಗ್ರಹ, ಸಾಗಾರ ಧರ್ಮಾಮೃತ ಮೊದಲಾದ ಗ್ರಂಥಗಳ ಅಧ್ಯಯನವನ್ನು ಮಾಡಿ 'ಚತುರನು-ಯೋಗ ಕೋವಿ'ದನಾದರೆ ಸ್ವಸ್ತಿ ಶ್ರೀ ಲಕ್ಷ್ಮೀಸೇನ ಭಟ್ಟಾರಕರಿಂದ ಪರೀಕ್ಷಾಮುಖ, ನ್ಯಾಯ ದೀಪಿಕಾ, ಸಮಯಸಾರ ಕಲಶ ಮೊದಲಾದ ಮಹತ್ವಪೂರ್ಣ ಗ್ರಂಥಗಳ ಅಧ್ಯಯನವನ್ನು ಮಾಡಿದನು. ಇದರೊಂದಿಗೆ ಸುಪ್ತವಾಗಿದ್ದ ಸಂಗೀತ ಕಲಿಯುವ ಗೀಳು ಆಳದಿಂದ ಮೇಲೆದ್ದು ಬೆಳೆಯಿತು. ಒಬ್ಬ ಬ್ರಾಹ್ಮಣ ಸಂಗೀತಗಾರರಲ್ಲಿ 4–6 ತಿಂಗಳಿದ್ದು ಶ್ರದ್ಧೆಯಿಂದ ಸಂಗೀತ ಕಲಿತರು.

ಸುರೇಂದ್ರನ ವ್ಯಕ್ತಿತ್ವ ಯಾರನ್ನಾದರೂ ವಶಂಕರಿಸುವಷ್ಟು ಪ್ರಭಾವ ಬೀರುವಂತ ಹುದು. ಆತನು ಪೂನಾದಲ್ಲಿದ್ದಾಗ ಪುಸ್ತಕದ ಬದನೆಕಾಯಿಗಿಂತ ಸೃಜನಾತ್ಮಕ ಕೈಂಕರ್ಯದಲ್ಲಿ ಸುರೇಂದ್ರನಿಗೆ ರಸಾತ್ಮಕ ಅನುಭೂತಿಯ ಅನುಭವವಾಗತೊಡಗಿತು. ಆದರೆ ಉದರಂಭರಣೆಯ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಂಡರೂ ಮನಸ್ಸು ಮಾತ್ರ ಬೇರೊಂದನ್ನೇ ಚಿಂತಿಸುತ್ತಿತ್ತು. ಅವ್ಯಕ್ತವಾದ ಅದಾವುದೋ ಒಂದು ಸೆಳೆತ, ವ್ಯಾಕುಲತೆ ಮನಸ್ಸಿನ ಆಳದಿಂದ ಇಣುಕತೊಡಗಿತು. ಒಂದು ಬಾರಿ ತನ್ನ ಗೆಳೆಯ ನೊಂದಿಗೆ ಸಿನೇಮಾ ನೋಡಲು ಹೋದನು, ಸಿನೇಮಾದ ಹೆಸರು 'ಸಂಸಾರ'. ಒಂದು ಕುಟುಂಬದ ಜನರೊಳಗೆ ಭೇದ-ಲೋಭ, ದಾಹ-ಮೋಹ, ಈರ್ಷ್ಯಾ-ದ್ವೇಷ. ಈ ದ್ವಂದ್ವ ಕಂಡು ಮನಸ್ಸು ಕಲಕಿತು, ಸುರೇಂದ್ರನಿಗೆ ಮಿಂಚು ಹೊಡೆದಂತಾಯಿತು. ನಿಂತ ನಿಲುವಿನಿಂದಲೇ ಹಿಂತಿರುಗಿ ಮತ್ತೆ ಆ ಕಡೆ ಮುಖ ಮಾಡಲಿಲ್ಲ. ರಾಜಯೋಗ ವುಳ್ಳ ಈ ಯೋಗಿಗೆ ಬೇರೆ ಯೋಗಗಳೆಲ್ಲ ಕ್ಷುಲ್ಲಕ, ಕ್ಷುದ್ರ!

ಪೂನಾ ನಗರದಲ್ಲಿರುವಷ್ಟು ದಿನ ಸುರೇಂದ್ರ ಅನೇಕ ದೇಶಭಕ್ತರ ಭಾಷಣ ಕೇಳಿದ್ದ. ಗಾಂಧಿ ಸಿದ್ಧಾಂತ ಮತ್ತು ಬಿಡುಗಡೆಯ ದಾರಿಯ ಮನನ-ಮಂಥನ ವಾಯಿತು. ಮೆರವಣಿಗೆ-ಗೋಷ್ಠಿಗಳಲ್ಲಿ ಭಾಗವಹಿಸಿದನು, ದೇಶಭಕ್ತಿಯ ದೀಕ್ಷೆ ತೊಟ್ಟನು. ಬಾಲ್ಯದಲ್ಲಿ ಆಶ್ರಮ ಮತ್ತು ಗುರುಕುಲ ಜೀವನದಲ್ಲಿ ಬಿದ್ದ ಸಂಸ್ಕಾರ ಮೇಲ್ಮುಖವಾಗಿ ಪುಟಿದು ಮತ್ತಷ್ಟು ಪುಷ್ಟಿಗೊಂಡಿತು. ತನ್ನ ಬದುಕೂ ಸಾಧು-ಸಂತರಂತೆ, ವಿದ್ವಾನ್-ಮಹಾತ್ಮರಂತೆ ರೂಪುಗೊಳ್ಳಬೇಕೆಂಬ ಮಹತ್ವಾಕಾಂಕ್ಷೆ ಬಾರಿ ಬಾರಿಗೂ ಸುಳಿಯತೊಡಗಿತು. ನೌಕರಿಯ ಗಾಣದೆತ್ತಿನ ಬಾಳಿನ ಗೋಳು ಅರುಚಿ ಎನಿಸಿತು. ಫಲವಾಗಿ ಪೂನಾದ ಜೀವನಕ್ಕೆ ಪೂರ್ಣವಿರಾಮ ಬಿತ್ತು. ಮತ್ತೆ ಅವರು

ಮನೆಗೆ ಮರಳಿದರು. 'ಮರಳಿ ಮಣ್ಣಿಗೆ'.

ಸುರೇಂದ್ರನ ಜೀವನದಲ್ಲಿ ಈಗ ಮನನ-ಚಿಂತನೆಗೆ ವಿರಾಮ. ಹೊಸ ಹಾದಿಯ ಶೋಧಕ್ಕೆ ನಾಂದಿ. ಈಗ ಕರ್ತವ್ಯದ ನಿರ್ಣಯಕ್ಕೆ ನಿಶ್ಚಯವಾಯಿತು. ಆಗಲೇ 1942ರ 'ಭಾರತದಿಂದ ತೊಲಗಿರಿ' ಚಳುವಳಿಯ ಆರಂಭ. ದೇಶಭಕ್ತಿಯ ಅಲೆಗಳು ಆಳೆತ್ತರ ಏಳತೊಡಗಿದವು. ಪೂನೆಯಲ್ಲಿ ಅಂಕುರಿಸಿದ ದೇಶಭಕ್ತಿ ಈ ಚಳುವಳಿಯ ಬೆಂಕಿಯ ಬಿಸುಪು ತಾಗಿ ಕಾದು ಕೆಂಪಾಯಿತು. ಸುರೇಂದ್ರ ಸುಮ್ಮನಾದಾನೇ? ಅದರ ದನಿ ಮನದಲ್ಲಿ ಮರುದನಿಗೊಂಡು ಭುಗಿಲೆದ್ದು ಉರಿಯಲು ಇಣುಕುಹಾಕುತ್ತಿತ್ತು.

ಗೆಳೆಯರೊಂದಿಗೆ ಕೂಡಿ ಸುರೇಂದ್ರನ ಚಳುವಳಿಯ ಯೋಜನೆ ಸಿದ್ಧವಾಯಿತು. ಒಂದು ಬಿದಿರು, ಕಟ್ಟಲು ಹಗ್ಗ, ಹಾರಾಟಕ್ಕಾಗಿ ಒಂದು ತ್ರಿವರ್ಣ ಧ್ವಜ. ಯಾರು, ಎಲ್ಲಿ, ಹೇಗೆ, ಏನು ಕೆಲಸ, ಎಲ್ಲ ಸೂತ್ರಬದ್ಧ ಕಾರ್ಯ ಸುಸೂತ್ರವಾಯಿತು. ಇಷ್ಟೆಲ್ಲಾ ಆದ ಮೇಲೆ ಒಂದು ರಾತ್ರಿ ಊರಿನ ಕೂಡುರಸ್ತೆಯ ಬಳಿ ಎತ್ತರಕ್ಕೆ ಬೆಳೆದ ಒಂದು ಮರದ ಮೇಲೆ, ಆಕಾಶಕ್ಕೆ ಚಾಚಿದ ಗೆಲ್ಲಿನ ತುದಿಗೆ ಉದ್ದನೆಯ ಬಿದಿರ ಗಳ ಕಟ್ಟುವುದು, ಅದರ ಅಗ್ರ ಭಾಗದಲ್ಲಿ ತ್ರಿವರ್ಣ ಧ್ವಜ ಹಾರಿಸುವುದು, ಇದು ಇವರ ಗುರಿ. ನಾಲ್ಕು ಹಾದಿಯಲ್ಲಿ ನಾಲ್ವರು ನಿಂತು ಯಾರಾದರೂ ಬರುವರೇ ಎಂದು ಕಾದರು. ಸುರೇಂದ್ರ ಲಗು-ಬಗೆಯಿಂದ ಮರ ಹತ್ತಿ ಧ್ವಜ ಮುಗಿಲೆತ್ತರಕ್ಕೆ ಹಾರಿಸಿಯೇ ಬಿಟ್ಟ. ಗೆಳೆಯರ ಗುಂಪು ದೇಶವನ್ನೇ ಗೆದ್ದವು ಎಂಬಷ್ಟು ಹಿಗ್ಗಿತು. 'ಭಾರತ ಮಾತಾ ಕೀ ಜೈ' ಘೋಷಣೆ ಕೂಗಿ ಚದುರಿತು, ಮನೆ ಸೇರಿತು.

ಬೆಳಗಾಯ್ತು, ತ್ರಿವರ್ಣ ಧ್ವಜ ಮುಗಿಲೆತ್ತರದಲ್ಲಿ ಹಾರಾಡುತ್ತಿರುವ ಸುದ್ದಿ ಊರೆಲ್ಲ ಹಬ್ಬಿತು. ನಮ್ಮೂರಿಗೂ ಚಳುವಳಿಯ ಗಾಳಿ ಸೋಂಕಿತಲ್ಲ ಸಾಕು, ಎಂಬ ಸಮಾಧಾನ ಕೆಲವರಿಗಾದರೆ, ಇದರಿಂದ ಏನಾದರೂ ರಂಪಾಟ ನಡೆಯದೇ ಇರದು ಎಂಬ ಪುಕ್ಕಲು ಹಲವರಿಗೆ. ದೂರು ಊರ ಪಟೇಲನ ಬಳಿ ಹೋಯಿತು, ಸಿಟ್ಟು ಸಿಡಿದು ಕೆಂಡಾದ ಪಟೇಲ. ಅಲ್ಲಿ-ಇಲ್ಲಿ ವಿಚಾರಣೆಯಾಯಿತು. ಗುಮಾನಿ ಮೊದಲೇ ಇತ್ತು, ಸುರೇಂದ್ರನ ಬಳಗ ಇಂತಹದೇನನ್ನಾದರೂ ಮಾಡುತ್ತದೆ ಎಂದು. ಈಗ ಈ ಕಾರಸ್ಥಾನದ ಮುಂದಾಳು ಸುರೇಂದ್ರನಲ್ಲದೆ ಬೇರೆ ಯಾರೂ ಅಲ್ಲ ಎಂದೂ ದಿಟವಾಯಿತು. ಸುರೇಂದ್ರನಿಗೆ ಪಟೇಲನಿಂದ ಕರೆ ಬಂತು, ಬೈದು ಬೆದರಿಸಿದ, ಜೈಲಿಗೆ ಕಳುಹಿಸುವುದಾಗಿ ಅಟ್ಟಹಾಸದಿಂದ ಅಬ್ಬರಿಸಿದ. ಧ್ವಜವನ್ನು ಮರುದಿನ ಮುಂಜಾನೆ ಒಳಗೆ ಇಳಿಸಿಬಿಡಬೇಕೆಂದು ಕಟ್ಟಪ್ಪಣೆಯಾಯಿತು. ಆದರೆ ಸುರೇಂದ್ರ ಒಪ್ಪಿಯಾನೇ? ಒಪ್ಪಿದ, ಆದರೆ ತಪ್ಪಿಸಿದ.

ಆ ರಾತ್ರಿ ಸುರೇಂದ್ರನಿಗೆ ಕಣ್ಣಿಗೆ ನಿದ್ದೆ ಇಲ್ಲ, ಧ್ವಜವನ್ನು ಇಳಿಸುವ ಮಾತಿರಲಿ, ಮುಂಬರುವ ಪರಿಣಾಮ ಅನುಭವಿಸುವ ಕೆಚ್ಚು ಹುಚ್ಚೆದ್ದಿತು. ಅನುಭವಿಸುವ ಪೂರ್ಣ ಸಿದ್ಧತೆಯೂ ಆಯಿತು. ಆದರೂ ಒಂದು ತರದ ಹುಡುಗು-ಭಯ. ತನ್ನ ಈ ಕೃತ್ಯಕ್ಕಾಗಿ ಸರಕಾರ ಅಸಹಾಯಕ ಮನೆ ಮಂದಿಯನ್ನೆಲ್ಲ ಪೀಡಿಸಬಹುದು. ಕಾಡಿಸಬಹುದು, ಇದು ಆತನಿಗೂ ಗೊತ್ತು. ಇನ್ನೊಬ್ಬರ ಕಷ್ಟ ಪರಿಹರಿಸುವ ತಾನು ತನ್ನ ಮನೆಯವರಿಗೇ ಮುಳುವಾಗುವುದೇ, ಮುಳ್ಳಾಗುವುದೇ? ಇವಕ್ಕೊಂದೇ

ಉಪಾಯ– ಮನೆ ಬಿಟ್ಟು ಹೊರಟು ಬಿಡುವುದು. ತಡವಿಲ್ಲ, ಗಂಟು ಮೂಟೆ ಕಟ್ಟಿ ಸುರೇಂದ್ರ ಸಿದ್ಧ. ತನ್ನವರನ್ನು ಸರಕಾರದ ಕೆಂಗಣ್ಣಿನಿಂದ ಉಳಿಸುವುದಕ್ಕೆ ಮನೆಯವರ ಬಗೆಗೆ ತನ್ನ ಮನದ ಪ್ರೇಮ ತಂತಿಯನ್ನೇ ತರಿದು ಆತ ಮನೆ ಬಿಟ್ಟ, ಪಣತೊಟ್ಟ.

ಈ ಧ್ವಜ ಪ್ರಕರಣದಿಂದ ಸುರೇಂದ್ರ ಭೂಗತನಾಗಿ, ಅಜ್ಞಾತವಾಸ ಕಾಣಬೇಕಾಯಿತು. ವೇಷ ಪಲ್ಲಟವಾಯಿತು, ಗಡ್ಡ ಬೆಳೆಯಿತು, ಕಿತ್ತೂರಿನ ಶುಗರ್ ಫ್ಯಾಕ್ಟರಿಯಲ್ಲಿ ಕೂಡಲೇ ಕೆಲಸವೂ ಸಿಕ್ಕಿತು. ತಾಂತ್ರಿಕ ಕೌಶಲ್ಯದೊಂದಿಗೆ ದುಡಿಮೆ ಮಿಳಿತವಾಗಿ ಕೆಲಸ ಸರಾಗವಾಗಿ ಸಾಗಿತು. ದಿನಗಳುರುಳಿದವು, ತಿಂಗಳು ಕಳೆದುವು. ಮನೆಯ ನೆನಪಾಗಲಿ, ತನ್ನ ವಿಳಾಸ ತನ್ನ ಗೆಳೆಯರಿಗೆ ತಿಳಿಸುವ ವಿಚಾರವಾಗಲಿ, ಇವನ ಮನದಲ್ಲಿ ಸುಳಿಯಲೇ ಇಲ್ಲ. ರಾಗ-ಭೋಗದ, ಮೋಹ-ಮಾಯೆಯ ಬಂಧನವನ್ನು ಕಿತ್ತೆಸೆದಾಗಿತ್ತು. ಕೆಲವೊಮ್ಮೆ ಮನೆಯಲ್ಲಿ ಮದುವೆ ಬಗೆಗೆ ಪ್ರಸ್ತಾಪಿಸಿದ ನೆನಪು ಬರುತ್ತಿತ್ತು. ಸಂಸಾರದ ಸುಳಿಯಲ್ಲಿ ಸುತ್ತುವತ್ತ ಸುಳಿಯದ ಸುರೇಂದ್ರ ಸದಾ ಮೌನ. ಬೇಕೂ ಇಲ್ಲ, ಬೇಡವೂ ಇಲ್ಲ. ಒಪ್ಪಿಗೆ ಇಲ್ಲದ, ಒಲ್ಲದ ಮದುವೆ ಮಾಡುವ ಧೈರ್ಯ ಯಾರಿಗೆ? 'ದೀಕ್ಷಾ ವಧುವಿನ ಕೈ ಹಿಡಿಯುವ ಯೋಗ ಇರುವ ಇವನಿಗೆ ಬೇರೆ ಕನ್ಯೆ ಏಕೆ?'.

ಊರಲ್ಲಿ ಸುರೇಂದ್ರನಿಲ್ಲ, ತಂದೆ-ತಾಯಿ ಕಂಗಾಲು. ಅಲ್ಲಿ-ಇಲ್ಲಿ ಜನ ಕಳುಹಿಸಿ ಹುಡುಕಿಸಿದ್ದಾಯಿತು. ಇವರೂ ಹುಡುಕುವುದು, ಅತ್ತ ಸರಕಾರವೂ ಹುಡುಕುವುದು. ಆದರೆ ಸಿಕ್ಕರ ಛದ್ಮವೇಶಧಾರಿಯಾದ ಸುರೇಂದ್ರ ಎಲ್ಲರಿಗೂ ಚಳ್ಳೆ ಹಣ್ಣು ತಿನ್ನಿಸಿದ. ತ್ರಿವರ್ಣ ಧ್ವಜ ಹಾರಿಸಿದ್ದು ಅದೇನು ದೊಡ್ಡ ದೇಶ ಸೇವೆ ಎಂದು ಸುರೇಂದ್ರನಿಗೆ ಅನಿಸದಿರಲಿಲ್ಲ. ಆದರೆ ಜನ ನನ್ನನ್ನು ಪುಕ್ಕಲ, ಹೇಡಿ ಎಂದು ತಿಳಿದೀತು. ಧ್ವಜ ಹಾರಿಸಿ ಪರಾರಿಯಾದ ಎಂದು ಪರಿಹಾಸ ಮಾಡೀತು. ಇದೇ ಸುರೇಂದ್ರನಿಗೆ ಇದ್ದ ಸಿಡಿತ-ಮಿಡಿತ. ಅವನ ಸುಸಂಸ್ಕೃತ ಆತ್ಮ ಮುನ್ನುಗ್ಗಲು ಸದಾ ಪ್ರೇರೇಪಿಸುತ್ತಿತ್ತು. ಮುಚ್ಚು-ಮರೆ ಇಲ್ಲದ ಸ್ವಚ್ಛ ಕಾರ್ಯ ಮಾಡಬಯಸುತ್ತಿತ್ತು. ಆದರೆ ಅಂತಹ ದಾರಿ ಯಾವುದು? ಕಾಣಿಸುತ್ತಿರಲಿಲ್ಲ. ಧ್ಯೇಯದ ಸ್ಪಷ್ಟ ಚಿತ್ರ ಚಿತ್ತಕ್ಕೆ ಬರುತ್ತಿರಲಿಲ್ಲ. ಇದೇ ಹೊತ್ತಿಗೆ ಐನಾಪುರದ ಪಟೀಲನ ಮನೆಯ ಯುವಕನೊಬ್ಬನೊಡನೆ ಸ್ನೇಹವಾಯಿತು. ರಜಾ ದಿನಗಳು ಅವನ ಮನೆಯಲ್ಲಿ ಕಳೆಯುತ್ತಿದ್ದನು. ಐನಾಪುರ ಮಹಾಮುನಿ ಕುಂಥುಸಾಗರ ಮಹಾರಾಜರ ಹುಟ್ಟೂರು. ಗೆಳೆಯನಲ್ಲಿ ಕುಂಥುಸಾಗರರ ಗ್ರಂಥಗಳು ಓದಲು ಸಿಗುತ್ತಿದ್ದುವು. ಮೆಲ್ಲ-ಮೆಲ್ಲನೆ ಆತನಿಗೆ-ಆತ್ಮನಿಗೆ ಮುಂದಿನ ದಾರಿಯಾವುದೆಂಬುದರ ದಿಕ್ಕು ಸಿಕ್ಕಿತು, ಉತ್ಸಾಹ ಉಕ್ಕಿತು.

ಈ ಸ್ವಾಧ್ಯಾಯ ನಡೆಯದಿರುತ್ತಿದ್ದರೆ ಇದೇ ನೌಕರಿ-ಚಾಕರಿಯ ಉದರಂಭರಣೆ ಬಹುಶಃ ಮುಂದುವರಿಯುತ್ತಿತ್ತೋ ಏನೋ? ಆದರೆ ನಿಯತಿಯ ನಿಯಮ ಬೇರೆಯೇ ಇತ್ತು. ಐನಾಪುರದಲ್ಲಿ ಸುರೇಂದ್ರ ಸನ್ನಿಪಾತ ಜ್ವರದಿಂದ ಕಾಯಿಲೆ ಬಿದ್ದ. ಅವನನ್ನು ಗೆಳೆಯ ಮನೆಗೆ ಕರೆದೊಯ್ದ. ತಾಯಿ-ತಂದೆ ಕಾಯಿಲೆಯಿಂದ ಕುದಿಯುತ್ತಿದ್ದ ಮಗನನ್ನು ಕಂಡು ಕಂಗಾಲು, ಕಣ್ಣೀರಿಟ್ಟರು. ಆದರೂ ಮಗ ಮನೆಗೆ ಮರಳಿ ಬಂದನಲ್ಲ! ಎಂಬ ಸಂತಸದಿಂದ ಕಣ್ಣೀರು ನುಂಗಿದರು. ಎಲ್ಲರಿಗೂ ಚಿಂತೆ, ಮದ್ದು-ಮಾಯ

ನಡೆಯಿತು. ಪಥ್ಯ-ಉಪಚಾರ ದೊರೆಯಿತು. ಆದರೆ ಸುರೇಂದ್ರನ ಮನಸ್ಸು ಕುಂಥು ಸಾಗರ ಮಹಾಮುನಿಗಳ ಅಧ್ಯಾತ್ಮರಸದ ಸುಧಾರಸಪಾನ ಮಾಡುತ್ತಿತ್ತು. ಣಮೋ ಕಾರ ಮಂತ್ರದ ಮನನ ಮನಸ್ಸಿನಲ್ಲಿ ಮಥನಗೊಳ್ಳುತ್ತಿತ್ತು. ಕಾಯಿಲೆ ಮಲಗಿದಲ್ಲೇ ಹಾಸಿಗೆಯಲ್ಲೇ ಕಣ್ಮುಚ್ಚಿ ಬಸದಿಯ ಶ್ರೀ ಶಾಂತಿನಾಥನ ಸಾಕ್ಷಾತ್ಕಾರವಾಗುತ್ತಿತ್ತು. 'ಶಾಂತಿಂ ಶಾಂತಿ ಜಿನೇಂದ್ರ! ಶಾಂತಮನಸಃ........' ಪೂಜ್ಯಪಾದ ಸ್ವಾಮಿಯ ಶಾಂತ್ಯ-ಷ್ಟಕ ತುಟಿಯಲ್ಲಿ ಗುಣುಗುತ್ತಿತ್ತು. ಕೊನೆಗೆ 'ನೊಸಲ್ಗೆ ಕೈಗಳಂ' ಮುಗಿಯುತ್ತಿದ್ದ. ವಿಚಾರ ಮನನದಿಂದ ದೃಢ ಸಂಕಲ್ಪಗೊಂಡ ಸುರೇಂದ್ರ– 'ಪ್ರಭುವೇ! ನೀನೇ ನನ್ನನ್ನು ವಿಷಮಜ್ವರದಿಂದ ಪಾರುಮಾಡು. ನಾನು ಉಳಿದರೆ ಜೀವನ ಪರ್ಯಂತ ಬ್ರಹ್ಮಚಾರಿ ವ್ರತಿಕನಾಗುವೆ. ಮಹಾತ್ಮಾ ಗಾಂಧಿಯಂತೆ ಅಪರಿಗ್ರಹ-ಮಿತಪರಿಗ್ರಹ ಧಾರಿಯಾಗುವ ನಿಯಮ ಧರಿಸುವೆ. ಸಂಯಮ ಪಾಲಿಸುವೆ, ಧರ್ಮಸೇವೆ, ರಾಷ್ಟ್ರ ಸೇವೆ, ನನ್ನ ನಿರಾಡಂಬರ ವ್ರತವಾಗಲಿ ನಿನ್ನ ಕಾರುಣ್ಯದಿಂದ, ನನ್ನ ಭಕ್ತಿಯಿಂದ ಇದು ಕೈಗೂಡಲಿ' ಎಂದು ಪರಿತಪಿಸಿ ಪ್ರಾರ್ಥಿಸಿದ.

ಶಾಂತಿನಾಥ ನದಯೆಯೋ, ಮುನಿಗಳ ಮಹಿಮೆಯೋ, ಭಾರತದ ಜನ-ಮನದ ಪುಣ್ಯವೋ ಸುರೇಂದ್ರ ಪಾರಾದ. ಕಾಯಿಲೆಗಾಗಿ ಪಥ್ಯ-ಪಾನ ಪಾಲಿಸುತ್ತಾ ಪಾಲಿಸುತ್ತಾ ಸುರೇಂದ್ರ ಒಂದು ರೀತಿಯಿಂದ ಸಂಯಮಿಯೇ ಆದ. ಭಗವದ್ಭಕ್ತಿಯಿಂದ ಅಂತರ್ಮುಖಿಯಾದ. ಸಾಂಸಾರಿಕ ಅನುಭವದಿಂದ ವಿಷಯ-ಭೋಗಗಳಲ್ಲಿ ಅನಾಸಕ್ತಿ ಮೈದೋರಿತು. ಮನದ ಅಂತರಾಳದಲ್ಲಿ ಸುಪ್ತವಾಗಿ ಹುದುಗಿದ್ದ, ಮಾನಸಿಕ ಕ್ಷೇತ್ರ ದಲ್ಲಿ ಈ ಮೊದಲು ಬೀಜವಾಗಿ ಬಿತ್ತಿದ್ದ ಸಂಸ್ಕಾರ ಅಂಕುರವು ಈಗ ಚಿಗುರಿತು. ಹೂವಾಗಿ, ಹಣ್ಣಾಗಿ, ಮಾಗಿ ಹೆಮ್ಮರವಾಯಿತು. ಅನುಭವದ ಕೊಂಬೆ-ರೆಂಬೆಗಳು ಅಷ್ಟಕ್ಕೆ ಚಾಚಿದುವು. ಜ್ಞಾನ ಪುಂಜವು ಗೊಂಚಲು-ಗೊಂಚಲಾಗಿ ಸವಿ-ಸವಿಯಾಯಿತು.

ಒಂದು ಸಂವತ್ಸರ ಸರಿಯಿತು, ಮತ್ತೊಂದು ಚಾತುರ್ಮಾಸ ಬಂತು. ಅದು ಸನ್ 1946ರ ಚಾತುರ್ಮಾಸ. ಸಂಯಮಮೂರ್ತಿ, ಜ್ಞಾನ ದಿವಾಕರ, ಶ್ರೀ ಮಹಾವೀರ ಕೀರ್ತಿ ಮುನಿ ಮಹಾರಾಜರು ಶೇಡಬಾಳದತ್ತ ಮಂಗಲ ವಿಹಾರ ಮಾಡುತ್ತಾ ಬಿಜಯಂಗೈದರು. ಕಾಯಿಲೆಯಿಂದ ಬೀಳಚಿಕೊಂಡಿದ್ದ ಸುರೇಂದ್ರನಿಗೆ ಅಮೃತಾನ್ನ ಉಂಡಂತಾಯಿತು. ಆತ್ಮೀಯ ಶಾಂತಿಯ ಸಂಜೀವಿನಿಯಿಂದ ಸುರೇಂದ್ರನಿಗೆ ಮತ್ತೆ ಮರುಹುಟ್ಟು ದೊರೆತಂತಾಯಿತು. ಸುರೇಂದ್ರನಿಗೆ ನಿತ್ಯ ಅವರ ದರ್ಶನ, ಉಪದೇಶ ಕೇಳುವುದು. ಅವರ ಶಬ್ದ-ಶಬ್ದಗಳ ಕಡೆ ಗಮನ, ಚಿಂತನ. ವಿಚಾರಗಳ ಸಂಚಯನ, ಆತ್ಮ ವಿಕಸನ. ಕರ್ಮಗಳ ಕಟ್ಟು ಕಳಚಿತು. ಮೋಹದ ಮುಸುಕು ಹೊದ್ದ ಬಾಲ ರವಿ ಎದ್ದು ಬಂದ. ಆತ್ಮಾನಂದದಲ್ಲಿ ಮಗ್ನನಾದ ಸುರೇಂದ್ರ ಮುನಿಗಳ ಸಾನ್ನಿಧ್ಯದಲ್ಲಿ ತದೇಕಚಿತ್ತ, ತನ್ಮಯ. ನಾಗರಿಕ ವೇಶ(ಸೂಟ್-ಪ್ಯಾಂಟ್)ದಲ್ಲಿ ಮೈಮರೆತಿದ್ದ ಸುರೇಂದ್ರ ಈಗ ಸರಳ, ಶುಚಿ, ಶುಭ್ರವಸ್ತ್ರಧಾರಿ. ಬಾಲ ಬ್ರಹ್ಮಚಾರಿ. ತಂದೆ-ತಾಯಿ, ಇಷ್ಟ-ಮಿತ್ರರಿಗೆಲ್ಲ ಚಿಂತೆ. ಆದರೆ ಸುರೇಂದ್ರ ಯಾರಲ್ಲೂ ತನ್ನ ಮನದ ತುಡಿತ-ಬಡಿತವನ್ನು ಬಾಯಿಬಿಡಲಿಲ್ಲ. ಊರಿನ ಭಕ್ತ ಜನವೆಲ್ಲ

ಸುರೇಂದ್ರನಲ್ಲಾದ ಈ ಪರಿವರ್ತನೆ-ಪ್ರಚ್ಛನ್ನತೆ ಕಂಡರು. 'ಕಾಲಲಬ್ಧಿ' ಎಂದರು. ಸಾಂಸಾರಿಕ ಮೋಹ-ಮಾಯೆಯ ಮಬ್ಬು ಕಳಚಿದ ಸುರೇಂದ್ರ ಬಿಡುಗಡೆಯ ಹಾದಿ ಹಿಡಿದಿದ್ದಾನೆ ಎಂದು ಕಂಡ ತಂದೆ-ತಾಯಿಗೆ ತುತ್ತನ್ನ ಸೇರಲಿಲ್ಲ. ಸುತ್ತೆಲ್ಲ ಕತ್ತಲೇ ಕತ್ತಲು. ಸುಖದ ಪಂಜರದಲ್ಲಿ ಪವಡಿಸಿದ್ದ ಪಕ್ಷಿ ಹೊರಹಾರಲು ಹವಣಿಸಿತು. ರಾಗಿಯಾಗಿದ್ದ ಭೋಗಿ ವಿರಾಗಿಯಾಗಲು, ವೀತರಾಗಿಯಾಗಲು ಸಂಕಲ್ಪ ತಳೆದಿದ್ದ. ಸಂಸಾರದಿಂದ ಸಿಡಿದೆದ್ದ.

ಪ್ರತಿ ದಿನ ನಿಯಮಿತವಾಗಿ ಉಪದೇಶ ಕೇಳಲು ಚಾತಕ ಸುರೇಂದ್ರ ಬರುತ್ತಿದ್ದ, ಬಂದು ಕುಳಿತಿದ್ದ, ಕುಳಿತು ತದೇಕ ವಿವೇಕದಿಂದ ಆಲಿಸುತ್ತಿದ್ದ. ಸುಂದರ ತರುಣ ಸತ್ತ ಮುನಿಶ್ರೀ ಮಹಾವೀರಕೀರ್ತಿಯವರ ಗಮನ ಸಹಜವಾಗಿ ಹರಿಯಿತು. ಇವನ ಆತ್ಮದಾಹ, ಜ್ಞಾನದ ಹಸಿವು, ತೇಜಃಪ್ರಕಾಶ ಕಣ್ಣುಗಳು, ಮುನಿಗಳ ಅಂತಃಪ್ರಭಾ ವಲಯದ ಪರಿಧಿಯನ್ನು ಪ್ರವೇಶಿಸಿದುವು. ಅವರು ಇವನನ್ನು ಕರೆದರು, ಅಕ್ಕರೆಯಿಂದ ಮಾತಾಡಿಸಿದರು. ಮಾತು ಕೇಳಿ ನಕ್ಕರು, ಇವನ ಮನಸ್ಸನ್ನು ಹೊಕ್ಕರು.

ಇಂತಹದೇ ಒಂದು ಮುಂಜಾನೆ, ಸುರೇಂದ್ರನು ಸ್ವಾಮಿಗಳನ್ನು 'ಜಾತರೂಪ' ದಿಗಂಬರ ದೀಕ್ಷೆಗಾಗಿ ಕಳಕಳಿಯ ಕಣ್ಣೀರಿನಿಂದ ಯಾಚಿಸಿದ. ಮುನಿಗಳು ಪ್ರಸನ್ನರಾದರು. ಸುರೇಂದ್ರನದು ಚಿಕ್ಕ ಪ್ರಾಯ, ತಾಯಿ-ತಂದೆಯರ ಅನುಮತಿ ಪಡೆದೆಯಾ ಎಂದರು. ಹೆತ್ತಕರುಳು ಬಿಸುಪಿನಿಂದ ಜೀವಸವಾಯಿತು. ಚಿಕ್ಕ ಹುಡುಗನಿಗೆ ದಿಗಂಬರ ದೀಕ್ಷೆ? ಎಂದು ಹಲುಬಿದರು. ಆದರೆ ಸುರೇಂದ್ರ ನಿಶ್ಚಲ, ಮೌನ ಆದರೆ ದೃಢ. ಮತ್ತೆ ಎರಡು ತಿಂಗಳು ದಾಟಿತು, ಸುರೇಂದ್ರನಿಗೆ ಮುನಿಸಂಘದೊಡನೆ ಅಂಟಿದ ನಂಟು ಬಿಗಿಯಾಯಿತು. ಅವರ ಕಮಂಡಲು ಹಿಡಿಯುವುದು, ಸೇವೆ ವೈಯ್ಯಾವೃತ್ಯಕ್ಕೆ ಸಹಕರಿಸುವುದು. ಯಾರಾದರೊಬ್ಬ ಭಕ್ತರ ಮನೆಯಲ್ಲಿ ಒಪ್ಪೊತ್ತಿನ ಊಟ. ಹೀಗೆ ನಡೆದೇ ಇತ್ತು.

ಅಪರೂಪವಾಗಿ ಊಟಕ್ಕೆ ಮನೆಗೆ ಒಮ್ಮೊಮ್ಮೆ ಹೋಗುತ್ತಿದ್ದ. ಮಗನ ಮೇಲಿನ ಮಮತೆಯಿಂದ ತಂದೆ ಸಿಡಿದೇಳುತ್ತಿದ್ದರು. ಯಾವಾಗಲೂ ಮುನಿಗಳ ಸಹವಾಸ ಕಿರಿಯರಿಗೆ ಸಲ್ಲ. 'ಮುಪ್ಪಿನಲ್ಲಿ ಮುನಿದೀಕ್ಷೆ' ಇದು ಅವರ ಅಂಬೋಣ. ಒಂದು ದಿನ ಮಗನನ್ನು ಕೇಳಿಯೇ ಬಿಟ್ಟರು— 'ಮನೆಗೇಕೆ ಬರುವೆ? ಊಟಕ್ಕೋ? ಆ ಸ್ವಾಮಿಗಳ ಹಿಂದೆ ಅಲೆದರೆ ಅನ್ನ ಹುಟ್ಟುವುದಿಲ್ಲವೇ? ಹೊಟ್ಟೆಗಿಷ್ಟು ಹಿಟ್ಟು ಯಾರೂ ಹಾಕಬಹುದಲ್ಲ. ಇಲ್ಲಿ ನಮ್ಮ ಕರುಳಿಗೇಕೆ ಕಿಚ್ಚು ಹಚ್ಚಲು ಬರುತ್ತಿ'? ಈ ಮಾತು ಕೇಳಿದ್ದೇ ತಡ, ಸುರೇಂದ್ರ ತಟ್ಟನೆ ತಿರುಗಿದ. ತಾಯಿಗೆ ತಡೆಯಲಾಗಲಿಲ್ಲ, ಅವಳ ಒತ್ತಾಯಕ್ಕೆ ಒಂದು ತುತ್ತು ಅನ್ನ ತುತ್ತಿನ ಚೀಲ ಸೇರಿತು. ಅದೇ ಕೊನೆ, ತಾಯಿಯ ಮಮತೆಗಾಗಿ ಅರೆಹೊಟ್ಟೆ, ಅದರಲ್ಲೂ ಒಪ್ಪೊತ್ತು ಉಂಡ ಸುರೇಂದ್ರ ಇಂದಿಗೂ ಒಪ್ಪೊತ್ತು ಉಂಬ ದಿಗಂಬರ ವ್ರತಿ, ಮಹಾವ್ರತಿ. ಅಂದು ಮನೆಯಿಂದ ಹೊರಬಿದ್ದ ಸುರೇಂದ್ರ ಮತ್ತೆ ಮನೆಯ ಮೆಟ್ಟಿಲು ಹತ್ತಲಿಲ್ಲ.

ಮೋಹ-ಮಾಯೆಯ ಪರೆ ಕಳಚಿತು, ತಂದೆ-ತಾಯಿ, ಬಂಧು-ಬಳಗ ತರತರವಾಗಿ ತಡೆದರು. ತಡೆದಷ್ಟು ವೈರಾಗ್ಯದ ಭಾಗ್ಯೋದಯವಾಯಿತು. ಯಾರು

ಮಮತ್ವದ ಬಂಧನನ್ನು ಕಿತ್ತೊಗೆದಿದ್ದರೋ ಅವರಿಗೆ ಲೋಕಾಡಂಬರದ ಅಡೆಯೇನು? ತಡೆಯೇನು? ಅವರಂದರು– 'ನಾನು ಮುನಿಗಳ ಜೊತೆಗಿದ್ದರೆ ಏನು ತಪ್ಪು? ಅದೇನು ಮಾಡಬಾರದ ಕೆಟ್ಟ ಕೆಲಸವೇ? ಅದು ಕೆಡುಕಾದರೆ ಅದೇ ನನ್ನ ಬಯಕೆ. ಅದೇ ನನ್ನ ಬದುಕು.' ಕೇಳಿ ಎಲ್ಲರೂ ದಂಗಾದರು, ಬೆಂಗಾವಲಿಗಾಗಿ ಭಗವಂತನನ್ನು ಬೇಡಿಕೊಂಡರು– 'ಭಗವಂತ! ಕಾಪಾಡು.'

ಮುನಿಗಳೂ ಕೆಲದಿನಗಳಿಂದ ಪರೀಕ್ಷಿಸಿದರು. ಕೊನೆಗೆ ಅಲ್ಲಿಂದ ಹೊರಡುವ ವಿಹರಿಸುವ ಮಂಗಲ ಮುಹೂರ್ತ ಬಂತು. ಊರಿಗೆ ಅಂದು ಮುನಿಗಳ ಅಂತಿಮ ದರ್ಶನ. ಅಂತಿಮ ದೇಶನ. ಚಾರಿತ್ರ ಬಲ ಮತ್ತು ಆತ್ಮ ಬಲ ಅಂದಿನ ಉಪದೇಶ. ಎಲ್ಲರಿಗೂ ಕುತೂಹಲ. ಇನ್ನು ಸುರೇಂದ್ರ ಏನು ಮಾಡುವವ? ಮುನಿಗಳ ಪಾದ ಯಾತ್ರೆಯ ಮಂಗಲ ಶ್ರೀವಿಹಾರ ಆರಂಭವಾಯಿತು. ಕೆಚ್ಚಲು ತುಂಬಿದ ದನದ ಹಿಂದೆ ಮಂತ್ರಮುಗ್ಧ ಕರು ಬಿರಬಿರನೆ ಅನುಸರಿಸಿತು. ಗುರುಗಳೂ ಮೌನ. ಶಿಷ್ಯನೂ ಮೌನ. ಇಬ್ಬರಿಗೂ ತಿಳಿದಿತ್ತು 'ಸಮಯ ಬಂದಿದೆ, ಕಾಲ ಕಾದಿದೆ, ಪಕ್ವವಾಗಿದೆ, ಎಂಬುದು.

ಮುಂದೆ ಒಂದು ಸುದಿನ. ಸನ್-1946. ಸ್ಥಾನ-ತಮದಡ್ಡಿ. ಆಚಾರ್ಯ ಮಹಾವೀರಕೀರ್ತಿ ಮುನಿಗಳಿಂದ ಕ್ಷುಲ್ಲಕ ದೀಕ್ಷಾಗ್ರಹಣ. ಪಾವನ ನಾಮ ಶ್ರೀ 'ಪಾರ್ಶ್ವಕೀರ್ತಿ'. ಇವರು ಕ್ಷುಲ್ಲಕರಾದ ಬಳಿಕ ಪ. ಪೂ. ಚಾರಿತ್ರಚಕ್ರವರ್ತಿ ಆಚಾರ್ಯ ಶಾಂತಿಸಾಗರರೊಂದಿಗೆ ಸುಮಾರು 12 ವರುಷಗಳಿದ್ದರು. ಮುನಿದೀಕ್ಷೆ: ಆಚಾರ್ಯ ದೇಶಭೂಷಣ ಮುನಿಗಳ ದಿವ್ಯಹಸ್ತ, ಸ್ಥಾನ: ರಾಜಧಾನಿ-ಡಿಲ್ಲಿ, ತಿಥಿ 25-7-1963. ಶುಭ ನಾಮಕರಣ: ವಿದ್ಯಾನಂದ ಮುನಿ!!

**'ಇಂತು ಸುರೇಂದ್ರಂ ಮುನೀಂದ್ರನಾದಂ'**

**ಮುನಿದೀಕ್ಷೆಯ ಮೊದಲ ಮೈಲುಗಲ್ಲುಗಳು:**

ಕೊಣ್ಣೂರು (ಕರ್ನಾಟಕ) 1946, ಹೊಂಬುಜ (ಕರ್ನಾಟಕ) 1947, ಕುಂಭೋಜ (ಮಹಾರಾಷ್ಟ್ರ) 1948, ಶೇಡಬಾಳ (ಕರ್ನಾಟಕ) 1949ರಿಂದ 1956, ಹೊಂಬುಜ ಕ್ಷೇತ್ರ (ಕರ್ನಾಟಕ) 1957, ಸುಜಾನಗಢ (ರಾಜಸ್ಥಾನ) 1958-59, ಬೆಳಗಾಂವಿ (ಕರ್ನಾಟಕ) 1960, ಕುಂದಕುಂದಾದ್ರಿ (ಕರ್ನಾಟಕ) 1961, ಶಿವಮೊಗ್ಗ (ಕರ್ನಾಟಕ) 1962.

**ಮುನಿದೀಕ್ಷೆಯ ನಂತರದ ಚಾತುರ್ಮಾಸಗಳು:**

ದಿಲ್ಲಿ (ರಾಜಧಾನಿ) 1963, ಜಯಪುರ (ರಾಜಸ್ಥಾನ) 1964, ಫಿರೋಜಾಬಾದ್ (ಉ. ಪ್ರ.) 1965, ದಿಲ್ಲಿ (ರಾಜಧಾನಿ) 1966, ಮೇರಠ್ (ಉ. ಪ್ರ.) 1967, ಬಡೌತ್ (ಉ. ಪ್ರ.) 1968, ಸಹರನಪುರ (ಉ. ಪ್ರ.) 1969, ಶ್ರೀನಗರ-ಗಢವಾಲ (ಹಿಮಾಲಯ) 1970, ಇಂದೂರು (ಮ. ಪ್ರ.) 1971, ಶ್ರೀಮಹಾವೀರಜೀ (ರಾಜಸ್ಥಾನ) 1972, ಮೇರಠ್ (ಉ. ಪ್ರ.) 1973, ದಿಲ್ಲಿ (ರಾಜಧಾನಿ) 1974, ಜಗಾಧರೀ (ಉ. ಪ್ರ.) 1975, ದಿಲ್ಲಿ (ರಾಜಧಾನಿ) 1976, ಬಡೌತ್ (ಉ. ಪ್ರ.) 1977, ದಿಲ್ಲಿ (ರಾಜಧಾನಿ) 1978, ಇಂದೂರು (ಮ. ಪ್ರ.) 1979-80, ಶ್ರ.ಬೆಳಗೊಳ (ಕರ್ನಾಟಕ) 1981, ಕೋಥಳಿ (ಕರ್ನಾಟಕ) 1982, ಕುಂಭೋಜ (ಬಾಹುಬಲಿ) 1983, ಬೊಂಬಾಯಿ (ಮಹಾರಾಷ್ಟ್ರ) 1984. ○

# ಸಿದ್ಧಾಂತ ಚಕ್ರವರ್ತಿ ಪ. ಪೂ. ಮುನಿಶ್ರೀ ವಿದ್ಯಾನಂದರು

ಲೇಖಕರು:
ಶ್ರೀ ಎಸ್. ಜಿನರಾಜ ಶಾಸ್ತ್ರಿ, ನ್ಯಾಯತೀರ್ಥ, ಸಿದ್ಧವನ ಗುರುಕುಲ, ಉಜಿರೆ.

ಬೆಳಗಾಂ ಜಿಲ್ಲೆಯ ಶೇಡಬಾಳದಲ್ಲಿ ಕಲ್ಲಪ್ಪ ಉಪಾಧ್ಯೆ ಮತ್ತು ಸರಸ್ವತಿಬಾಯಿ ದಂಪತಿಗಳಿಗೆ ದಿನಾಂಕ 22-4-1925ರಂದು ಸುರೇಂದ್ರಕುಮಾರ ಸುಪುತ್ರನ ಜನನ. ಕುಶಾಗ್ರ ಬುದ್ಧಿಯ ಸುರೇಂದ್ರನ ಮನೆ ಮಾತು ಕನ್ನಡವಾದರೂ ಶಿಕ್ಷಣವು ಜೈನ ಗುರುಕುಲ ಶೇಡಬಾಳದಲ್ಲಿ ಮರಾಠಿ ಮಾಧ್ಯಮದಿಂದ ಲಭಿಸಿತು. ಪ್ರತಿಭಾಶಾಲಿ ವಿದ್ಯಾರ್ಥಿಯೆಂದು ಕೀರ್ತಿ ಪಡೆದ ಸುರೇಂದ್ರ ಅಧ್ಯಯನ ಕಾಲದಲ್ಲಿ ಅನೇಕ ಪುಸ್ತಕಗಳನ್ನು ಓದಿ ಸರ್ವ ಜನ ಪ್ರಿಯನಾಗುವಂತೆ ಧರ್ಮಪ್ರಿಯನಾಗಿಯೂ ಆದನು. ಮುಂದಿನ ಪ್ರತಿಭಾ ವಿಕಾಸಕ್ಕೆ ಕಲ್ಕತ್ತೆಯ ನೇಶನಲ್ ಲೈಬ್ರೆರಿಯನ್ನು ಸೇರಿ ಮಹತ್ತ್ವಪೂರ್ಣ ಧರ್ಮ ಗ್ರಂಥಗಳನ್ನು ಅಭ್ಯಾಸ ಮಾಡಿದನು. ಇದರಿಂದ ವಿಶಾಲ ಜ್ಞಾನ ಭಂಡಾರ ತುಂಬಿಸಿಕೊಂಡನು. ತತ್ತ್ವ ಚಿಂತನೆಯಲ್ಲಿ ಲೀನನಾಗಿರುವ ಸುರೇಂದ್ರನು ಆಜನ್ಮ ಬ್ರಹ್ಮಚಾರಿಯಾಗುವ ದೃಢ ನಿಶ್ಚಯ ತಾಳಿದನು. ಅನಂತರ ಆತ್ಮಚಿಂತನೆಯ ಶ್ರೇಣಿಯಲ್ಲಿ ಮುಂದುವರಿದು ಕ್ಷುಲ್ಲಕ ದೀಕ್ಷೆಯನ್ನು ಪರಮಪೂಜ್ಯ ಮುನಿವರ್ಯ ಮಹಾವೀರಕೀರ್ತಿಯವರಿಂದ ಸ್ವೀಕರಿಸಿ ಗ್ರಾಮಾಂತರ ಹಾಗೂ ನಗರಗಳಲ್ಲಿ ಧರ್ಮ ಪ್ರಚಾರ ಮಾಡಿದರು. ದಿ. 25-6-1963ರಲ್ಲಿ ದಿಲ್ಲಿ ಮಹಾನಗರದಲ್ಲ ವಿರಾಜಮಾನರಾಗಿದ್ದ ರಾಷ್ಟ್ರಸಂತ ಪರಮ ಪೂಜ್ಯ 108 ದೇಶಭೂಷಣ ಮಹಾರಾಜರಿಂದ ಮುನಿ ದೀಕ್ಷೆ ಪಡೆದು ವಿದ್ಯಾನಂದ ಮುನಿಯಾದರು.

ದಿಗಂಬರ ಜೈನ ಮುನಿಗಳು ಆತ್ಮ ಕಲ್ಯಾಣ ಮತ್ತು ಲೋಕ ಕಲ್ಯಾಣಗಳೆರಡರ ಸಾಧಕರು. ಪಾದಚಾರಿಗಳಾಗಿ ವಿಹರಿಸುತ್ತಾ ಸ್ವಾವಲಂಬನೆ ಮತ್ತು ಆಧ್ಯಾತ್ಮಿಕ ಸ್ವಪರ ಹಿತಚಿಂತನೆಯನ್ನು ಜನರ ಮನಮುಟ್ಟಿಸಿ ಧರ್ಮ ವಿಧಿಯನ್ನು ಬೋಧಿಸುವರು.

ಏಲಾಚಾರ್ಯ ಸಿದ್ಧಾಂತ ಚಕ್ರವರ್ತಿ ವಿದ್ಯಾನಂದ ಮುನಿಶ್ರೀಯವರು 20ನೇ ಶತಮಾನದ ಮಹಾನ್ ರಾಷ್ಟ್ರಸಂತರು. ಧರ್ಮ ಪ್ರಚಾರ ಕಾಶ್ಮೀರ, ಪಂಜಾಬ್, ಉತ್ತರಪ್ರದೇಶ, ರಾಜಸ್ಥಾನ, ಮಧ್ಯಪ್ರದೇಶ. ಭಾರತದ ಉತ್ತರ ಭಾಗಗಳಲ್ಲಿ ಧರ್ಮದ ದಿಗ್ವಿಜಯವನ್ನೇ ಸಾಧಿಸಿದರು. ಸಂಸ್ಕೃತ, ಪ್ರಾಕೃತ, ಕನ್ನಡ, ಹಿಂದಿ, ಮರಾಠಿ, ಇಂಗ್ಲೀಷ್ ಭಾಷೆಗಳಲ್ಲಿ ತಲಸ್ಪರ್ಶಿ ಪಾಂಡಿತ್ಯ ಪಡೆದ ಮುನಿಶ್ರೀಯವರು ಉಪದೇಶ, ಅಧ್ಯಯನ, ಚಿಂತನಗಳಲ್ಲಿ ಸದಾ ನಿರತರಾಗುವ ನಿತ್ಯ ಜೀವನ ಸಾಧಿಸಿ ಧರ್ಮಾತ್ಮರಿಗೆ ಆಕರ್ಷಣೆ ಪ್ರೇರಣೆಯ ಕೇಂದ್ರ ಅಲ್ಲದೆ ಜನತೆಯ ಆತ್ಮಕಲ್ಯಾಣದ ತೀರ್ಥ ಕ್ಷೇತ್ರವೆನಿಸಿಕೊಂಡರು. ಇಲ್ಲಿ ರತ್ನಾಕರವರ್ಣಿಯ ಮಾತು ಸ್ಮರಣೀಯವಾಗಿದೆ.

ರವಿ ನಡೆದತ್ತಲೆಲ್ಲ ಬೆಳಗಲ್ಲದೆ ಕತ್ತಲೆಯುಂಟೆಯಾತ್ಮತ- ।
ತ್ತ್ವವ ಮನದಲ್ಲಿ ನೆಟ್ಟು ನುಡಿವಾತನ ಮಾತುಗಳೆಲ್ಲ ಮೋಕ್ಷಮಾ- ।

ಗಣನೆಯನೆಲ್ಲಿ ನಿಂದನದು ತೀರ್ಥವನುಂ ನಡೆದತ್ತ ಸರ್ವದು-
ತ್ಸವವಿದು ನಿನ್ನ ಮಾರ್ಗದ ರಹಸ್ಯವಲಾ ಅಪರಾಜಿತೇಶ್ವರಾ ॥ ೧೨ ॥

ಮುನಿಶ್ರೀಯವರ ವಿಕಸಿತ ದಿವ್ಯ ಜೀವನದ ಪ್ರಭಾವ ಸರ್ವರನ್ನು ಆಕರ್ಷಿಸಿತು. 1974ರಲ್ಲಿ ಭಗವಾನ್ ಮಹಾವೀರರ 2500ನೆಯ ನಿರ್ವಾಣ ಮಹೋತ್ಸವದ ಅಧ್ವರ್ಯು ವಿದ್ಯಾನಂದ ಮುನಿಶ್ರೀಯವರಾದರು. ಭಾರತ ಸರಕಾರದ ಮಹಾ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಅವರ ಮಂತ್ರಿ ಮಂಡಳದ ಸಕ್ರಿಯ ಸಹಕಾರ ಭಾರತದ ಸರ್ವ ಪ್ರಾಂತೀಯ ಸರಕಾರಗಳ ಅಭಿನಂದನೀಯ ಸಹಯೋಗ ಲಭಿಸು ವಂತಾಯಿತು. ಇದು ಭಗವಾನ್ ಮಹಾವೀರರ 2500ನೆಯ ನಿರ್ವಾಣ ಮಹೋ ತ್ಸವವು ಭಾರತದ ಸರ್ವ ಜಾತಿ-ಮತದ ಪ್ರಜಾಜನರ ಹಾಗೂ ಅಧಿಕಾರಿಗಳ ಸಹಕಾರ ಬಾಂಧವ್ಯಕ್ಕೆ ವರದಾನವೆನಿಸಿ ಧರ್ಮಚಕ್ರದ ವಿಹಾರಕ್ಕೆ ರಾಷ್ಟ್ರ ಗೌರವ ಲಭಿಸು ವಂತಾಯಿತು. ಈ ಧರ್ಮಚಕ್ರದ ವಿಹಾರ ದಿಗ್ವಿಜಯದಿಂದ ಜೈನ ಸಮಾಜಕ್ಕೆ ಮುನಿಶ್ರೀಯವರ ಕಾರ್ಯದಕ್ಷತೆಯ ಅರಿವಾಯಿತು.

ಇದನ್ನರಿತ ಶ್ರವಣಬೆಳಗೊಳದ ಪೂಜ್ಯ ಭಟ್ಟಾರಕರಾದ ಚಾರುಕೀರ್ತಿ ಸ್ವಾಮಿ- ಜೀಯವರು 1981ರಲ್ಲಿ ಜರಗಬೇಕಾದ ಭಗವಾನ್ ಗೋಮಟೇಶ್ವರ ಸ್ವಾಮಿಯ ಮೂರ್ತಿ ಪ್ರತಿಷ್ಠೆಯ ಸಹಸ್ರಮಾನೋತ್ಸವ ಮತ್ತು ಮಹಾಮಸ್ತಕಾಭಿಷೇಕ, ಇದರ ಪ್ರತೀಕವೆನಿಸಿದ ಜನಮಂಗಲ ಮಹಾಕಲಶಕ್ಕೆ ಭಾರತ ವ್ಯಾಪಿ ಆದರ, ಸತ್ಕಾರ, ಸ್ವಾಗತ, ಮಹಾ ಪ್ರಧಾನಿ ಇಂದಿರಾ ಗಾಂಧಿಯವರ ಹಸ್ತದಿಂದ ದಿಲ್ಲಿ ರಾಜಧಾನಿ ಯಿಂದ ಮಂಗಲ ಪ್ರಸ್ಥಾನ ಆದಿ ಕಾರ್ಯಕ್ಕೆ ಪ. ಪೂ. ವಿದ್ಯಾನಂದ ಮುನಿಶ್ರೀಯವ ರನ್ನು ಆಶ್ರಯಿಸಿ ಆ ಮಹಾ ಕಾರ್ಯದ ಯಶಸ್ವಿತೆಯಿಂದ ಕರ್ಮಯೋಗಿ ಭಟ್ಟಾರಕ ರಾದರು. ಮಹಾ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು ತನ್ನ ಸಹಭಾಗಿತ್ವದ ನವಿನೆನಪಿನ ಗುರುತಾಗಿ ನೀಡಿರುವ ರಜತ ಕಲಶವು ಶ್ರವಣಬೆಳಗೊಳದ ಕರ್ಮಯೋಗಿ ಭಟ್ಟಾರಕರ ಅಧೀನವಿದ್ದು ಭ. ಗೋಮಟೇಶ್ವರ ಸ್ವಾಮಿ ಮುಂದಿನ ದ್ವಿಸಾಹಸ್ರಾ- ಬ್ದಿಯ ಯೋಜನೆಗೆ ಆಧಾರವಾಗಿ ಸುರಕ್ಷಿತವಾಗಿದೆ. ಇದು ಮುನಿಶ್ರೀಯವರ ಪ್ರಭಾವ ನಾಂಗದ ದ್ವಿತೀಯ ಮಹಾ ದಿಗ್ವಿಜಯವಾಗಿದೆ. ಶ್ರವಣಬೆಳಗೊಳ ಮಹಾ ಕ್ಷೇತ್ರ ವಲ್ಲಿ ಜರಗಿದ ಮಹೋತ್ಸವಗಳ ನಂತರ ಅನೇಕ ಜನಹಿತ ಕಾರ್ಯಗಳು ಮುನಿಶ್ರೀ ಯವರ ನಿರ್ದೇಶನದಂತೆ ನಡೆಯುತ್ತಿವೆ.

ಧಾರ್ಮಿಕ. ಸಾಮಾಜಿಕ, ಹಿತಚಿಂತನಾ ಕಾರ್ಯಗಳು ಮುಂದುವರಿಯುತ್ತಿರು ವಂತೆ ಶ್ರೀಕ್ಷೇತ್ರ ಧರ್ಮಸ್ಥಳದ ರತ್ನಗಿರಿಯಲ್ಲಿ ಸ್ಥಾಪಿತವಾದ 39 ಅಡಿ ಉನ್ನತ ಮಹಾ ಮೂರ್ತಿಯ ಮಹಾ ಪ್ರತಿಷ್ಠೆ ಮತ್ತು ಪಂಚಕಲ್ಯಾಣ ಯುಕ್ತ ಮಹಾಮಸ್ತಕಾಭಿ ಷೇಕದ ಯೋಜನೆ ಶ್ರೀಮಾನ್ ವೀರೇಂದ್ರ ಹೆಗ್ಗಡೆಯವರು ಮತ್ತು ಮಾತೃಶ್ರೀ ರತ್ನಮ್ಮ ಅವರಿಗೆ ಮುನಿಶ್ರೀಯವರ ಸಮ್ಮುಖದಲ್ಲಿ ಜರುಗಿಸಬೇಕೆಂದು ಉದಿಸಿದಂತೆ ಅಖಿಲ ಭಾರತದ ವೈಭವದೊಡನೆ ಮಂಗಲ ಕಾರ್ಯಗಳು 1982ನೇ ಫೆಬ್ರವರಿಯಲ್ಲಿ ಜರಗಿದವು. ತದನಂತರ ಮೂಡುಬಿದ್ರಿ, ಕಾರ್ಕಳ, ಹೊಂಬುಜ ಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲಲ್ಲಿಯ ಜನತೆಗೆ ಅನುಗುಣವಾದ ಧಾರ್ಮಿಕ ಸಾಮಾಜಿಕ ವಿಧಿ ವಿಧಾನಗಳನ್ನು

ಬೋಧಿಸುತ್ತಾ ಕರ್ನಾಟಕ ರಾಜ್ಯದಿಂದ ವಿಹರಿಸಿ ಮಹಾರಾಷ್ಟ್ರದ ಬಾಹುಬಲಿ ಕ್ಷೇತ್ರದಲ್ಲಿ 1983ರ ಚಾತುರ್ಮಾಸ ಕಾಲದಲ್ಲಿ ದಿಗಂಬರ ಮತ್ತು ಶ್ವೇತಾಂಬರ ಸಮಾಜಕ್ಕಿದ್ದ ವಿವಾದವನ್ನು ಸತ್ಯ ಸ್ಥಿತಿಯ ನೆಲೆಯಂತೆ ಮಹಾರಾಷ್ಟ್ರ ಸರ್ಕಾರ ಮೇಲೆಯೂ ತನ್ನ ಪ್ರಭಾವ ಬೀರಿ ದಿಗಂಬರ ಜೈನ ಸಮಾಜದ ಕ್ಷೇತ್ರಾಧಿಕಾರವನ್ನು ಬಲಗೊಳಿಸಿದ ಕೀರ್ತಿ ಪಾತ್ರರಾದರು.

ಮುನಿಶ್ರೀಯವರ ದಿಟ್ಟ ಧೀರ ಹೆಜ್ಜೆ ಮಹಾ ಬಲಶಾಲಿಯಾಗಿದೆಯೆಂಬುದಕ್ಕೆ ಇದೊಂದು ಸಾಕ್ಷಿ. ಚಾತುರ್ಮಾಸದ ಬಳಿಕ ಮಹಾರಾಷ್ಟ್ರದ ಜೈನ ಜೈನೇತರ ಸರ್ವ ಸಮುದಾಯಕ್ಕೆ ಸುಖ ಶಾಂತಿಗೆ ಅರ್ಹವಾದ ಉಪದೇಶಾಮೃತದಿಂದ ತೃಪ್ತಿ ಪಡಿಸಿ ಭಾರತದ ವಾಣಿಜ್ಯ ಮಹಾ ನಗರವಾಗಿರುವ ಮುಂಬಯಿಯಲ್ಲಿ 1984ರ ಚಾತು-ರ್ಮಾಸದ ಮಂಗಲ ಯೋಗವನ್ನು ವಿವಿಧ ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಿಸಿ ಮಹಾ ನಗರದ ಮಾನ್ಯ ಸಾಮಾನ್ಯ ಜನತೆಗೆ ಧರ್ಮ ಸತ್ತ್ವವನ್ನು ಉಣಿಸಿ ಅಲ್ಲಿಂದ ಮಧ್ಯಪ್ರದೇಶದ ಪ್ರಸಿದ್ಧ ನಗರ ಇಂದ್ರಮತಿ ಇಂದೋರಿನತ್ತ ವಿಹರಿಸುತ್ತಿದ್ದಾರೆ. ಅಲ್ಲಿಯ ಜಿನ ಭಕ್ತರು ನವ ನಿರ್ಮಾಣ ಮಾಡಿರುವ ಗೊಮ್ಮಟ ಗಿರಿಯ ಜಿನ ಮೂರ್ತಿಗಳ ಪಂಚಕಲ್ಯಾಣ ಮಹೋತ್ಸವದಲ್ಲಿ ಭಾಗಿಯಾಗುವರು. ಮಾನವನಲ್ಲಿರುವ ಉತ್ತಮ ಗುಣಗಳು ಒಂದಲ್ಲ ಒಂದು ರೀತಿಯಲ್ಲಿ ಅರಳಿ ಸುಗಂಧವನ್ನು ಬೀರುತ್ತವೆ. ಯದಿಸಂತಿ ಗುಣಾಃ ಪುಂಸಾಂ ವಿಕಸಂತ್ಯೇವ ತೇ ಸ್ವಯಂ॥ ಹೀಗೆ ಮುನಿಶ್ರೀ ವಿದ್ಯಾನಂದ ಮಹಾರಾಜರ ಬಹುಮುಖ ಪ್ರತಿಭೆಯಲ್ಲಿ ವಿಕಸಿತವಾದ ಕಾರ್ಯ ಸಿದ್ಧಿಗಳನ್ನು ಚಿಕ್ಕ ಪ್ರಬಂಧದಲ್ಲಿ ಬರೆದು ಮುಗಿಸುವಂತಿಲ್ಲ. ಅವರ ದರ್ಶನ ಜ್ಞಾನ ಚಾರಿತ್ರಗಳ ಶುದ್ಧ ಯೋಗದಲ್ಲಿ ಅಸಂಖ್ಯ ಆತ್ಮರ ಶುದ್ಧೀಕರಣಕ್ಕೆ ಆಶ್ರಯ ಲಭಿಸುವುದು ಆ ಮಹಾಮಹಿಮನ ಪುಣ್ಯಾನುಬಂಧದ ಮಹಾಶಕ್ತಿಯೇ ಕಾರಣ.

ಸುರೇಂದ್ರಕುಮಾರನ ತ್ಯಾಗ ಜೀವನ ಮುನಿಶ್ರೀ ವಿದ್ಯಾನಂದರ ಪದ ಪಡೆದು ಅರ್ವತ್ತನೇ ತುಂಬು ಜೀವನಕ್ಕೆ ಧಾರ್ಮಿಕ ಜನ ಜಗತ್ತು ಮಹಾ ಮಾನ್ಯತೆಯಿಂದ ಭಾರತ ವ್ಯಾಪಿ ಮಹೋತ್ಸವವನ್ನು ಆಚರಿಸುವುದು ರಾಷ್ಟ್ರ ಸಂತ ಪದಕ್ಕೆ ಲಭಿಸಿದ ಕಾಣಿಕೆಯಾಗಿದೆ. ಅವರು ಬಹುಶ್ರುತರಾಗಿ 30ಕ್ಕೂ ಹೆಚ್ಚು ಬರೆದ ಗ್ರಂಥಗಳು ವಿದ್ವನ್ಮಾನ್ಯವಾಗಿವೆ. ಪರಮ ಪೂಜ್ಯ ಯೋಗೀಶ್ವರ ವಿದ್ಯಾನಂದ ಮುನಿಶ್ರೀಯವರ ರಸಮಯ ಸಫಲ ಅರ್ವತ್ತು ವಸಂತಗಳು ಭಾವೀ ಶತ ವಸಂತಗಳ ಪೂರ್ಣತೆ ಬಲವನ್ನೀಯಲಿ.

**ಶ್ರೀ ವಿದ್ಯಾನಂದ ಮಹಾಮುನಯೇ ನಮೋ ನಮಃ**



# ಪ. ಪೂ. ಶ್ರೀ ಏಲಾಚಾರ್ಯರು ಮತ್ತು ದಕ್ಷಿಣ ಭಾರತ

ಲೇಖಕರು: **ಜಿ. ಬ್ರಹ್ಮಪ್ಪ, ಎಂ.ಎ., ಮೈಸೂರು.**

ಪ. ಪೂ. ಶ್ರೀ ಏಲಾಚಾರ್ಯ ವಿದ್ಯಾನಂದರು ಅಚ್ಚ ಕನ್ನಡಿಗರು. ಬೆಳಗಾಂ ಜಿಲ್ಲೆಯ ಶೇಡಬಾಳದಲ್ಲಿ 22-4-1925ರಲ್ಲಿ ಅವತರಿಸಿದರು. ಆಗ ಇವರನ್ನು ಸುರೇಂದ್ರ ಎಂದು ಕರೆದರು. 1945ರಲ್ಲಿ ಬ್ರಹ್ಮಚರ್ಯ ದೀಕ್ಷೆ ಪಡೆದರು. 1948ರಲ್ಲಿ ಇವರು ಕ್ಷುಲ್ಲಕರಾದ ಪಾರ್ಶ್ವಕೀರ್ತಿಗಳೆನಿಸಿಕೊಂಡರು. ಈ ದೀಕ್ಷೆಗಳು ಕರ್ನಾಟಕ ದಲ್ಲೇ ಆದುದು. ಶೇಡಬಾಳದ ಶ್ರೀ ಶಾಂತಿಸಾಗರರ ಆಶ್ರಮದ ಸಂಚಾಲಕರಾಗಿ ಇವರು ಆಶ್ರಮವನ್ನು ಬೆಳೆಸಿದರು. ಇಲ್ಲಿ ವಿದ್ಯಾರ್ಥಿಗಳನ್ನು ಹೆಚ್ಚಿಸಿದರು, ಆಶ್ರಮದ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿದರು. ಲೌಕಿಕ ಹಾಗೂ ಪಾರಮಾರ್ಥಿಕ ವಿದ್ಯಾಭ್ಯಾಸದಲ್ಲಿ ಸಮತೋಲನ ತಂದರು. ದಕ್ಷಿಣ ಭಾರತಕ್ಕೆ ಇವರು ಮಾಡಿದ ಉಪಕಾರಗಳಲ್ಲಿ ಇದು ಮೊದಲನೆಯದು.

ಕೆಲಕಾಲ ಹುಂಚದ ದಿ। ಅರ್ಹದ್ದಾಸರ ಬಲಗೈಯಾಗಿ ಇವರು ಕ್ಷೇತ್ರದ ಸರ್ವ ತೋಮುಖವಾದ ಏಳಿಗೆಗೆ ಶ್ರಮಿಸಿರುವರು. ಯಾತ್ರಿಕರಿಗೆ ಸೌಕರ್ಯಗಳನ್ನು ಹೆಚ್ಚಿಸಿ ದರು. ಶಿವಮೊಗ್ಗದ ವಿದ್ಯಾರ್ಥಿ ನಿಲಯಕ್ಕೆ ಹೆಸರು ಬರುವಂತೆ ಮಾಡಿದರು. ಇದು ಎರಡನೆಯ ಉಪಕಾರ.

1963ರಲ್ಲಿ ಶ್ರೀ ಪಾರ್ಶ್ವಕೀರ್ತಿಗಳು ದೆಹಲಿ ಮಹಾ ನಗರದಲ್ಲಿ ಪರಮಪೂಜ್ಯ ದೇಶಭೂಷಣ ಮಹಾರಾಜರ ಸನ್ನಿಧಿಯಲ್ಲಿ ದಿಗಂಬರ ದೀಕ್ಷೆ ಪಡೆದರು. ಕರ್ನಾಟಕದ ಕಂಪು ರಾಷ್ಟ್ರಾದ್ಯಂತ ಹರಡುವಂತಾಯಿತು. ದೀಕ್ಷಾನಂತರ ಇವರು ವಿದ್ಯಾನಂದ ರಾದರು. ಕ್ಷುಲ್ಲಕರಾಗಿರುವಾಗಲೇ ಸಂಸ್ಕೃತ, ಪ್ರಾಕೃತ, ಹಿಂದಿ, ಮರಾಠಿ, ಕನ್ನಡ ಮಹಾ ಗ್ರಂಥಗಳನ್ನು ಇವರು ಆಳವಾಗಿ ಅಭ್ಯಾಸ ಮಾಡುತ್ತಾ ವಿದ್ಯಾಲೋಲರಾಗಿ ದ್ದರು. ಇಂಥವರು ವಿದ್ಯಾನಂದರಾಗದೆ ಇನ್ಯಾರು ಆಗುವರು?

ಕರ್ನಾಟಕದ ಪುಣ್ಯ ಕ್ಷೇತ್ರಗಳಲ್ಲಿ ಯಾತ್ರಿಕರಿಗೆ ಬೇಕಾದ ವಸತಿ ಸೌಕರ್ಯದ ಅಭಾವ ಹೇಳ ತೀರದಾಗಿತ್ತು. ಶ್ರವಣಬೆಳಗುಳದಂಥ ಮಹಾ ಕ್ಷೇತ್ರದಲ್ಲೂ ಸಾಕಷ್ಟು ಧರ್ಮಶಾಲೆಗಳಿರಲಿಲ್ಲ. ಆಧುನಿಕ ಸೌಕರ್ಯದಿಂದ ಸಜ್ಜಾದ ಭವನಗಳಿರಲಿಲ್ಲ. ಎಲ್ಲಕ್ಕೂ ಬಯಲು ರಂಗಮಂಟಪವೇ ಗತಿಯಾಗಿದ್ದಿತು. ಕನ್ನಡಿಗರೂ ಇತ್ತ ಗಮನ ಹರಿಸ ಲಿಲ್ಲ. ಉತ್ತರಭಾರತದ ಕುಬೇರರು ಬಂದು ಗೋಮಟೇಶ್ವರನ ದರ್ಶನ ಮಾಡಿ ತಮ್ಮ ಪಾಡಿಗೆ ತಾವು ಹೊರಟು ಹೋಗುತ್ತಿದ್ದರು. ಅವರನ್ನು ಇಲ್ಲೇನಾದರೂ ಧರ್ಮ ಕಾರ್ಯ ಮಾಡಿ ಎಂದರೆ 'ನಾವು ಇಲ್ಲಿ ಮಾಡುವುದಿಲ್ಲ. ಏನಿದ್ದರೂ ಉತ್ತರಭಾರತ ದಲ್ಲಿ ಮಾಡುವೆವು' ಎಂದು ಕೈಬೀಸಿ ಹೊರಟು ಹೋಗುತ್ತಿದ್ದರು. ಶ್ರೀ ಕ್ಷೇತ್ರಕ್ಕೆ ಪ್ರತಿವರ್ಷವೂ ದಿಗಂಬರ ಯತಿಗಳು ಬರುತ್ತಿದ್ದರು. ಅವರನ್ನು ಸ್ವಾಗತಿಸಲು ಶ್ರೀ ಮಠದವರು ಮಂಗಳವಾದ್ಯದ ಸೇವೆಯನ್ನು ಎಂದೂ ತಪ್ಪಿಸಲಿಲ್ಲ. ಬಂದ ಮುನಿಗಳಿಗೆ

ಜೈಕಾರವನ್ನೂ ಹಾಕುತ್ತಿದ್ದರು. ಅವರ ಸೇವೆಯನ್ನು ಊರವರು ಮಾಡುತ್ತಿದ್ದರು. ಆ ಮುನಿಗಳ ಮನಸ್ಸಿನಲ್ಲೂ ಕ್ಷೇತ್ರಾಭಿವೃದ್ಧಿಯ ಕಡೆ ಗಮನ ಬರಲಿಲ್ಲ. 'ಇದು ಲೌಕಿಕ. ನಮಗೆ ಬೇಕಾದುದು ಪಾರಲೌಕಿಕ' ಎಂದು ಬಂದ ಮುನಿಗಳು ಮುಂದಿನ ದಾರಿ ಹಿಡಿಯುತ್ತಿದ್ದರು.

ವೇಣೂರು, ಕಾರ್ಕಳ, ಮೂಡುಬಿದ್ರಿ, ನರಸಿಂಹರಾಜಪುರ ಈ ಕ್ಷೇತ್ರಗಳ ಸ್ಥಿತಿಯೂ ಸ್ವಲ್ಪ ಹೆಚ್ಚು ಕಡಿಮೆ ಶ್ರವಣಬೆಳಗುಳದಂತೆಯೇ ಇತ್ತು. ಕ್ಷೇತ್ರಗಳೇನೋ ದೊಡ್ಡವು. ಎಲ್ಲವೂ ಹೆಸರುವಾಸಿ ಪಡೆದಿದ್ದವು. ಆದರೆ ಸೌಕರ್ಯ ಮಾತ್ರ ಕೇಳಬೇಡಿ. ಶ್ರೀ ವಿದ್ಯಾನಂದರು ದಕ್ಷಿಣ ಭಾರತದ ಕ್ಷೇತ್ರಗಳ ಸ್ಥಿತಿಗಾಗಿ ಉತ್ತರಭಾರತದಲ್ಲಿ ಮಮ್ಮಲ ಮರುಗಿದರು ಉತ್ತರಭಾತದಲ್ಲಿ ಪ್ರತಿಯೊಂದು ಕ್ಷೇತ್ರದಲ್ಲೂ ಸುವ್ಯವಸ್ಥೆಯಿದೆ. ವ್ಯವಸ್ಥೆ ಇರುವುದರಿಂದ ಯಾತ್ರಿಕರ ಸಂಖ್ಯೆಯೂ ಹೆಚ್ಚಾಗಿದೆ. ಬಂದವರೆಲ್ಲ ಕ್ಷೇತ್ರಾಭಿವೃದ್ಧಿಗೆ ಸಹಾಯ ಮಾಡಿ ಹೋಗುವರು. ಆದರೆ ದಕ್ಷಿಣಕ್ಕೆ ಬರುತ್ತಿದ್ದಂತೆ ಇಲ್ಲಿನ ಕ್ಷೇತ್ರಗಳು ಅಸಡ್ಡೆಯ ಆಗರಗಳಾಗಿ ಕಾಣುವುವು. ಇಲ್ಲಿಯ ಶ್ರಾವಕರಲ್ಲೂ ಸಂಘಟನೆಯಿಲ್ಲ. ಕ್ಷೇತ್ರ-ಸಮಾಜ-ಸಾಹಿತ್ಯದ ಬಗ್ಗೆ ಕಳಕಳಿಯಿಲ್ಲ.

ಶ್ರೀ ವಿದ್ಯಾನಂದರನ್ನು 1981ರಲ್ಲಿ ಗೋಮಟೇಶ್ವರನ ಸಹಸ್ರಮಾನೋತ್ಸವಕ್ಕೆ ಪೂರ್ವಭಾವಿಯಾಗಿ ದಕ್ಷಿಣಾಪಥಕ್ಕೆ ಆಹ್ವಾನಿಸಲು ವಿಶ್ವ ಪ್ರಯತ್ನಗಳಾದವು. 1970 ರಲ್ಲೇ ಶ್ರೀ ಎಂ. ಸಿ. ಅನಂತರಾಜಯ್ಯನವರು ಇವರನ್ನು ದಕ್ಷಿಣಕ್ಕೆ ಬರುವಂತೆ ವಿನಂತಿಸಿಕೊಂಡರು. ಮತ್ತೆ ಮತ್ತೆ ಪ್ರತಿವರ್ಷ ಹೋಗಿ ಹೋಗಿ ವಿನಂತಿಸಿಕೊಂಡರು. ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರೂ, ಅವರ ಪರಿವಾರದವರೂ ಆಗಾಗ ಶ್ರೀ ಏಲಾಚಾರ್ಯರನ್ನು ದರ್ಶನ ಮಾಡಿ ದಕ್ಷಿಣಾಪಥಕ್ಕೆ ಬರುವಂತೆ ಪ್ರಾರ್ಥಿಸಿದರು. ಮೂಡಬಿದ್ರಿಯ ಪೂಜ್ಯ ಸ್ವಸ್ತಿ ಶ್ರೀ ಚಾರುಕೀರ್ತಿ ಭಟ್ಟಾರಕರೂ ಪ್ರತಿವರ್ಷ ಮುನಿಗಳ ಸನ್ನಿಧಿಯಲ್ಲಿ ತಿಂಗಳಾನುಗಟ್ಟಲೆ ಕುಳಿತು ಶ್ರವಣಬೆಳಗೊಳಕ್ಕೆ ಬರಬೇಕೆಂದು ಮತ್ತೆ ಮತ್ತೆ ಕರೆದರು ಕರ್ನಾಟಕದಿಂದ ನೂರಾರು ಜನ ಪದೇ ಪದೇ ಉತ್ತರ ಭಾರತಕ್ಕೆ ಹೋಗಿ ಮುನಿಶ್ರೀಗಳನ್ನು ಆಹ್ವಾನಿಸಿದರು. ಪದ್ಯದಲ್ಲಿ ಕರೆದರು, ಗದ್ಯದಲ್ಲಿ ಕರೆದರು, ಚಂಪುವಿನಲ್ಲಿ ಕರೆದರು, ಮಹಾಮುನಿಗಳ ಮನಸ್ಸು ಕರಗಿತು. ಕನ್ನಡಿಗರ ಹನ್ನೆರಡು ವರ್ಷದ ಮೊರೆ ನೆರವೇರುವ ಕಾಲ ಸನ್ನಿಹಿತವಾಯಿತು.

ಶ್ರೀ ವಿದ್ಯಾನಂದರು ವ್ಯವಹಾರ ನಿಶ್ಚಯಗಳಲ್ಲಿ ಸಮತೋಲನ ತಂದಂಥ ಮಹಾಮಹಿಮರು. ಉತ್ತರ ಭಾರತ-ದಕ್ಷಿಣ ಭಾರತ ಎಂಬ ಭೇದವನ್ನು ಅಳಿಸಿಹಾಕಿದಂತ ಅವತಾರಪುರುಷರು. ಭಾವೈಕ್ಯತೆಯನ್ನು ಪಂಚ ನಮಸ್ಕಾರದ ಅಂಗವಾಗಿ ಇವರು ಬೋಧಿಸಿದರು. ಜೈನ ಧರ್ಮದ ಹೃದಯವೇ ಶ್ರವಣಬೆಳಗೊಳವೆಂದು ಉತ್ತರದ ಕುಬೇರರಿಗೆ ಇವರು ಮನವರಿಕೆ ಮಾಡಿಕೊಡುವುದರಲ್ಲಿ ಯಶಸ್ವಿಯಾದರು. ದಕ್ಷಿಣದಿಂದ ಮುನಿಪರಂಪರೆ ಉತ್ತರಕ್ಕೆ ಹರಿಯುತ್ತಿಲ್ಲವೇ? ದಕ್ಷಿಣದ ಆಚಾರ್ಯರು ಜಿನವಾಣಿಯನ್ನು ಸಂರಕ್ಷಿಸಿಲ್ಲವೇ? ದಕ್ಷಿಣದವರು ಉತ್ತುಂಗ ಜಿನಮೂರ್ತಿಗಳನ್ನು ಸ್ಥಾಪಿಸಿ ಉತ್ತರ ಭಾರತದವರನ್ನು ದರ್ಶನಕ್ಕೆ ಬಿಡುತ್ತಿರಲಿಲ್ಲವೇ? ಎಂಬ ಪ್ರಶ್ನೆಯನ್ನು ಇವರು ಉತ್ತರ ಭಾರತದಲ್ಲಿ ಕಂಡ ಕಂಡ ಕಡೆ ಕೇಳಲು ಪ್ರಾರಂಭಿಸಿದರು. ಆಗ ಉತ್ತರದ

ಶ್ರೀಮಂತರ ಹೃದಯ ಕಲ್ಮಶ ನಿವಾರಣೆಯಾಯಿತು. ಶ್ರವಣಬೆಳಗೊಳವನ್ನು ನಾವು ಎಷ್ಟರಮಟ್ಟಿಗೆ ಬೆಳಗುವೆವೋ ಅಷ್ಟೂ ಜೈನ ಧರ್ಮದ ಪ್ರಭಾವನೆಯಾಗುವುದು ಎಂದು ಉತ್ತರದ ಶ್ರಾವಕರು ಅರಿತುಕೊಂಡರು. ಅವರ ಔದಾರ್ಯ ದಕ್ಷಿಣಾಪಥಕ್ಕೆ ಹರಿಯಲು ಸಿದ್ಧವಾಯಿತು.

ಪ. ಪೂ. ಏಲಾಚಾರ್ಯರ ಆದೇಶದಂತೆ ಉತ್ತರದ ಶ್ರೀಮಂತರು ಶ್ರವಣಬೆಳಗೊಳದಲ್ಲಿ ವಸತಿ ಸೌಕರ್ಯವನ್ನು ಹೆಚ್ಚಿಸಲು ಮುಂದಾದರು. ಶ್ರೀ ವಿದ್ಯಾನಂದರ ಅಪೇಕ್ಷೆಯಂತೆ ಧರ್ಮಚಕ್ರ ದಕ್ಷಿಣ ಭಾರತದಲ್ಲೂ ವಿಹರಿಸಿ ಸಮಾಜದಲ್ಲಿ ಧಾರ್ಮಿಕ ಪುಳಕವೇರಿಸಿತು. ಧರ್ಮ ಪ್ರಭಾವನೆಯು ಹಿಂದೆಂದೂ ಆಗದಷ್ಟು ಉನ್ನತ ಮಟ್ಟದಲ್ಲಿ ನೆರವೇರಿತು. ಸಮವಸರಣವೇ ದಕ್ಷಿಣ ಭಾರತದಲ್ಲಿ ಸಂಚರಿಸಿದಂತಾಯಿತು. ನಿದ್ರೆಯಲ್ಲಿದ್ದ ದಕ್ಷಿಣ ಭಾರತದಲ್ಲಿ ಧಾರ್ಮಿಕ ಎಚ್ಚರವನ್ನುಂಟುಮಾಡಿತು.

ಶ್ರವಣಬೆಳಗುಳದಲ್ಲಿ ಶ್ರೀ ವಿದ್ಯಾನಂದರು ಬರುವುದಕ್ಕೆ ಮೊದಲೇ ಮುನಿಶ್ರೀಗಳ ಪ್ರೇರಣೆಯಿಂದ ಸುಸಜ್ಜಿತವಾದ ವಿದ್ಯಾನಂದ ನಿಲಯವು ಉತ್ತರ ಭಾರತದ ಶ್ರೀಮಂತರ ಹಣದಿಂದ ರೂಪಗೊಂಡಿತು. ಅತ್ತ ಮೂಡುಬಿದ್ರಿಯಲ್ಲಿ ರಮಾರಾಣಿ ಸಂಶೋಧನಾ ಕೇಂದ್ರಕ್ಕಾಗಿ ಭವ್ಯವಾದ ಭವನವನ್ನು ಶ್ರೀ ಸಾಹುಶಾಂತಿಪ್ರಸಾದರು ಕಟ್ಟಿಸಿಕೊಟ್ಟರು. ಶ್ರವಣಬೆಳಗುಳದಲ್ಲಿ ಇಂದೂರಿನ ಹುಕುಂ ಚಂದ್ ಸೇಟ್‌ರವರ ಸುಪುತ್ರರಾದ ಶ್ರೀ ರಾಜಕುಮಾರ ಸಿಂಗರು ತ್ಯಾಗಿ ಭವನವನ್ನು ಕಟ್ಟಿಸಿದರು. ಶ್ರವಣಬೆಳಗೊಳದಲ್ಲಿ ಧರ್ಮಶಾಲೆಗಳನ್ನು ಕಟ್ಟಿಸಲು ಉತ್ತರದ ಶ್ರೀಮಂತರಲ್ಲಿ ಪೈಪೋಟಿಯಾಯಿತು. ಇವರಿಗೆ ಸೂಕ್ತವಾದ ಸ್ಥಳವೊದಗಿಸುವುದೇ ಕಷ್ಟವಾಯಿತು! ಹಣದ ಪ್ರವಾಹವನ್ನು ಕನ್ನಡಿಗರು ಸಕಾಲದಲ್ಲಿ ಬಳಸಿಕೊಳ್ಳುವುದಕ್ಕೇ ಕಷ್ಟವಾಗುವಂತೆ ಉತ್ತರ ಭಾರತದ ಹಣ ಶ್ರವಣಬೆಳಗೊಳಕ್ಕೆ ಹರಿದು ಬಂದಿತು.

1981ನೆಯ ವರ್ಷವು ವಿಶ್ವಾದ್ಯಂತ ಗೊಮ್ಮಟ ವರ್ಷವಾಯಿತು. ಭಾರತದ ಎಲ್ಲ ಪ್ರಾಂತದ ಮಕ್ಕಳೂ ಪ್ರಾಕೃತದ ಗೊಮ್ಮಟ ಸ್ತುತಿಯನ್ನು ಹಾಡುವಂತಾಯಿತು. ಶ್ರವಣಬೆಳಗೊಳವು ಮುನಿಶ್ರೀಗಳ ಸನ್ನಿಧಿಯಲ್ಲಿ ಸರ್ವಾರ್ಥ ಸಿದ್ಧಿಯಾಯಿತು. ಅನ್ನ ಕೇಳಿದವರಿಗೆ ಅನ್ನ, ಬಟ್ಟೆ ಕೇಳಿದವರಿಗೆ ಬಟ್ಟೆ, ಹಣ ಕೇಳಿದವರಿಗೆ ಹಣ ಇವನ್ನೆಲ್ಲ ಶ್ರವಣಬೆಳಗೊಳದಲ್ಲಿ ಕಾಣುವಂತಾಯಿತು. ಶ್ರವಣಬೆಳಗೊಳವು ಇನ್ನೊಂದು ಧರ್ಮ-ಸ್ಥಳವಾಗಿ ಮುನಿಶ್ರೀಗಳು ಇರುವ ತನಕ ಕಾರುಬಾರು ನಡೆಸಿತು. ಮುನಿಶ್ರೀಗಳ ತಪೋ ಮಹಿಮೆಗೆ ತಲೆಬಾಗಿ ಕೇಂದ್ರ ಸರ್ಕಾರ ಹಾಗು ಪ್ರಾಂತ ಸರ್ಕಾರಗಳು ಸಹಸ್ರಮಾನೋತ್ಸವವನ್ನು ಯಶಸ್ವಿಗೊಳಿಸಲು ಬದ್ಧಕಂಕಣವಾದವು. ಮುನಿಶ್ರೀಗಳು ಶ್ರವಣಬೆಳಗೊಳ ಕ್ಷೇತ್ರದ ಸ್ಥಿರಾಸ್ತಿಯನ್ನು ವೃದ್ಧಿ ಪಡಿಸಿದರು. ಬೆಟ್ಟದ ಸುತ್ತಾ ಜಾಗವನ್ನು ಆಕ್ರಮಿಸಿದ್ದವರು ಮುನಿಗಳ ಮಾತು ಕೇಳಿ ಜಾಗವನ್ನು ಕ್ಷೇತ್ರಕ್ಕೆ ತೆರವು ಮಾಡಿದರು.

ಪ. ಪೂ. ಏಲಾಚಾರ್ಯರ ಕೃಪೆಯಿಂದ 1981ರ ಮಹಾಮಸ್ತಕಾಭಿಷೇಕವು ಹಿಂದೆ ನಡೆದಿರಲಿಲ್ಲ, ಮುಂದೆ ನಡೆಯುವುದಿಲ್ಲ ಎನ್ನುವಷ್ಟು ವೈಭವಯುತವಾಯಿತು.

ಯಾವುದಕ್ಕೂ ಕೊರತೆಯಿರಲಿಲ್ಲ, ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿಗಳೇ ಶ್ರವಣಬೆಳಗೊಳದಲ್ಲಿ ತಂಗಿದಂತಾಗಿತ್ತು. ವಿಶ್ವದ ಎಲ್ಲ ಪತ್ರಿಕೆಗಳೂ ಶ್ರ.ಬೆಳಗೊಳದ ಪ್ರಚಾರಕ್ಕೆ ನಿಂತವು. ವಿಶ್ವದ ಎಲ್ಲ ದೂರದರ್ಶಕಗಳೂ ಶ್ರವಣಬೆಳಗೊಳದ ಧರ್ಮ ಪ್ರಭಾವನೆಗಾಗಿ ಸೊಂಟ ಕಟ್ಟಿದವು. ಜನಮಂಗಲ ಕಲಶವೂ ಮುನಿಶ್ರೀಗಳ ವಿಶ್ವಾನುಕಂಪದ ಸಂಕೇತವಾಗಿದೆ. ದೆಹಲಿಯಿಂದ ಹೊರಟ ಈ ಕಲಶವು ಶ್ರವಣಬೆಳಗೊಳದ ಸುತುಮುತ್ತಣ ಹಳ್ಳಿಗರ ಕಷ್ಟ-ಕಾರ್ಪಣ್ಯ ನಿವಾರಿಸಲು ಲಕ್ಷಾಂತರ ರೂಪಾಯಿ ಸಂಗ್ರಹಿಸಿಕೊಂಡು ಬಂದಿತು. ಇಷ್ಟೂ ಆದುದು ಪರಮ ಪೂಜ್ಯ ವಿದ್ಯಾನಂದರ ತಪಃ ಪ್ರಭಾವದಿಂದ ಎಂಬುದನ್ನು ನಾವು ಮರೆಯುವಂತಿಲ್ಲ.

ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕವನ್ನು ಯಶಸ್ವಿಗೊಳಿಸಿ ಮುನಿ ವಿದ್ಯಾನಂದರು 1982ರಲ್ಲಿ ನಡೆದ ಧರ್ಮಸ್ಥಳದ ನವನೂತನ ಬಾಹುಬಲಿಯ ಮಸ್ತಕಾಭಿಷೇಕದ ನೇತೃತ್ವವನ್ನೂ ವಹಿಸಿದರು. ಇವರು ಮಂತ್ರಪ್ರವೀಣರಾದ ವಿಮಲ ಸಾಗರರೊಡನೆ ತೊಟ್ಟಿಲಲ್ಲಿ ಕುಳಿತು ಮೇಲೆ ಹೋಗಿ ಮಹಾಮೂರ್ತಿಯ ವಿವಿಧ ಭಾಗಗಳಲ್ಲಿ ರತ್ನರಂಜಿತ ಗಂಧದಿಂದ ಬೀಜಾಕ್ಷರಗಳನ್ನು ಬರೆದು ಮೂರ್ತಿಯ ಮಹಿಮೆಯನ್ನು ಹೆಚ್ಚಿಸಿದರು.

ಧರ್ಮಸ್ಥಳದಲ್ಲಿ ಯಾವುದಕ್ಕೆ ತಾನೆ ಕೊರತೆಯುಂಟು? ಶ್ರೀ ವೀರೇಂದ್ರ ಹೆಗ್ಗಡೆಯವರು ಜಂಗಮ ಕಲ್ಪವೃಕ್ಷನಾದರೆ, ಮಾತೃಶ್ರೀ ರತ್ನಮ್ಮ ಹೆಗ್ಗಡಿತಿಯವರು ಮಾತಾಡುವ ಚಿಂತಾಮಣಿಯಿದ್ದಂತೆ. ನೂರಾರು ಜನ ಮುನಿವೃಂದ, ಲಕ್ಷಾಂತರ ಜನ ಶ್ರಾವಕವೃಂದ ಇಷ್ಟನ್ನೂ ಈ ಮಹನೀಯರು ಸಂತೃಪ್ತಿಗೊಳಿಸಿ ಮುನಿಶ್ರೀಗಳ ಮುಂದಾಳುತ್ವದಲ್ಲಿ ಗೊಮ್ಮಟ ಪ್ರತಿಷ್ಠೆಯನ್ನು ಮಾಡಿ ಅಜರಾಮರರಾದರು.

ಮುನಿಶ್ರೀಗಳು ವೇಣೂರಿಗೆ ಬಂದಾಗ ಮುನಿಗಳಿಗೆ ತಂಗಲು ಸ್ಥಳವಿಲ್ಲ ಎಂಬುದನ್ನು ಕೇಳಿ ಮರುಗಿದರು. ಕೂಡಲೇ ಶ್ರೀಮತಿ ಸರಯೂ ಧಪ್ತರಿಯವರು ಒಂದು ಮನೆಯನ್ನು ಕೊಂಡು-ಕೊಂಡು ಶ್ರೀ ಕ್ಷೇತ್ರಕ್ಕೆ ದಾನವಾಗಿ ಬಿಟ್ಟರು. ಮುನಿಗಳು ಇದ್ದ ಕಡೆ ಬಡತನವಿರುವುದಿಲ್ಲ, ಕಷ್ಟ-ಕಾರ್ಪಣ್ಯಗಳಿರುವುದಿಲ್ಲ. ಮುನಿಶ್ರೀಗಳು ಅಚ್ಚ ಕನ್ನಡಿಗರಾಗಿ ಕರ್ನಾಟಕದ ಕೀರ್ತಿಯನ್ನು ಹೆಚ್ಚಿಸಿರುವರು, ಕರ್ನಾಟಕದ ಕಾರ್ಪಣ್ಯತೆಯನ್ನು ಕಳೆದಿರುವರು.

ಬಾಹುಬಲಿ ಆಶ್ರಮ ಕೊಲ್ಹಾಪುರ ಜಿಲ್ಲೆಯಲ್ಲಿದೆ. ಇಲ್ಲಿರುವ ಬಾಹುಬಲಿ ಬೆಟ್ಟದಲ್ಲಿ ಈ ಶತಮಾನದ ಪ್ರಾರಂಭದಲ್ಲಿ ಶ್ವೇತಾಂಬರರು ಜಿನಪೂಜೆಗಾಗಿ ಸ್ಥಳ ಕೇಳಿದರು. ಕನ್ನಡಿಗರು ಇವರಿಗೆ ಒಂದು ಜಿನಾಲಯವನ್ನು ಬಿಟ್ಟು ಕೊಟ್ಟರು. ನೀರು ಹಾವಾಗಿ ಬಂದ ಶ್ವೇತಾಂಬರರು ಕೊನೆಗೆ ಹೆಬ್ಬಾವಾದರು. ಇಡೀ ಬೆಟ್ಟವನ್ನೇ ಕಬಳಿಸುವ ಯೋಜನೆ ಹಾಕಿದರು. ದಿಗಂಬರ ಮುಖಂಡರಿಗೆ ಆರ್ಥಿಕವಾಗಿ ಲಾಭವಾಗುವಂತೆ ಕೆಲವು ಏಜನ್ಸಿ ಕೊಟ್ಟರು. ಮುಖಂಡರನ್ನೂ ಒಟ್ಟಿಗೆ ಹಾಕಿಕೊಂಡು ಬಾಹುಬಲಿ ಬೆಟ್ಟವನ್ನು ಕಬಳಿಸಲು ಹೊರಟರು. 'ಬೆಟ್ಟವನ್ನು ಅವರಿಗೆ ಬಿಡೋಣ ಅಭಿವೃದ್ಧಿಪಡಿಸುವರು' ಎಂದು ದಿಗಂಬರ ಮುಖಂಡರು ವಾದಿಸಲು ಪ್ರಾರಂಭಿಸಿದರು.

ಶ್ವೇತಾಂಬರರು ತಮ್ಮ ದುರಾಕ್ರಮಣವನ್ನು ಯಶಸ್ವಿಗೊಳಿಸಲು ಮಹಾರಾಷ್ಟ್ರ ಸರ್ಕಾರದ ಮೇಲೆ ಪ್ರಭಾವ ಬೀರಿದರು. ಮರಾಠ ಜನರನ್ನು ಬೆಟ್ಟದ ಮೇಲೆ ಶಿವಾಜಿ ಮೂರ್ತಿ ಇಡಲು ಪ್ರೋತ್ಸಾಹಿಸಿದರು. ಇಷ್ಟಾದರೂ ಅಲ್ಲಿಯ ದಿಗಂಬರರು ಸಂಘಟನೆಯಾಗದೆ, ಶ್ವೇತಾಂಬರರನ್ನು ಎದುರಿಸದೆ ಮಲಗಿಯೇ ಇದ್ದರು. ಶಿವಾಜಿ ಮೂರ್ತಿಯನ್ನು ಸ್ಥಾಪಿಸಲು ಎಲ್ಲ ಸಿದ್ಧತೆಗಳೂ ನಡೆದವು. ಮಹಾರಾಷ್ಟ್ರದ ಮುಖ್ಯಮಂತ್ರಿ ಶ್ರೀ ವಸಂತ ದಾದಾ ಪಾಟೀಲ್ ಹಾಗೂ ಇವರ ಪತ್ನಿ ಶ್ರೀಮತಿ ಶಾಲಿನಿ ತಾಯಿ ಇವರು ಶಿವಾಜಿಯನ್ನು ಸ್ಥಾಪಿಸಲು ಪಣತೊಟ್ಟರು. ದಿಗಂಬರರು ನಿರ್ವೀರ್ಯರಾಗಿ ಕುಳಿತರು.

ಇಂಥ ಸಂದರ್ಭದಲ್ಲಿ 1983ರ ಅಕ್ಟೋಬರ್ ತಿಂಗಳಲ್ಲಿ ಮರಾಠಿ ಪುಂಡರು ಬಾಹುಬಲಿ ಆಶ್ರಮದ ಮೇಲೆ ದಾಳಿ ಮಾಡುವಂತೆ ನುಗ್ಗಿ ಕ್ಷೇತ್ರದ ಪವಿತ್ರತೆಗೆ ಭಂಗ ತಂದರು. ಆಗ ಮುನಿಶ್ರೀ ವಿದ್ಯಾನಂದರು ಈ ಸಮಸ್ಯೆ, ಈ ಉಪಸರ್ಗ ಬಗೆ ಹರಿಯುವ ತನಕ ಉಪವಾಸ ಮಾಡುವ ಪಣತೊಟ್ಟರು.

ಶ್ರೀಮತಿ ಸರಯೂ ಧಪ್ತರಿಯವರು ವೀರಾಂಗನೆಯಾಗಿ ಕೊಲ್ಹಾಪುರದ ಸುತ್ತ ಮುತ್ತ ಹಳ್ಳಿ ಹಳ್ಳಿ ತಿರುಗಿ ಜೈನ ಶ್ರಾವಕರಲ್ಲಿ ಸಂಘಟನೆ ತರಲು ಹೆಣಗಾಡಿದರು. ದಿಗಂಬರ ಯುವಕ ವರ್ಗದಲ್ಲಿ ಪೌರುಷವನ್ನು ಇವರು ಕೆರಳಿಸಿದರು. ಶ್ರೀ ವಿದ್ಯಾ-ನಂದರ ಉಪವಾಸದ ಸುದ್ದಿ ಭಾರತದ ಎಲ್ಲ ಪತ್ರಿಕೆಗಳು ಪ್ರಕಟಿಸಿ ಮಹಾರಾಷ್ಟ್ರ ಸರ್ಕಾರವನ್ನು ಛೀಮಾರಿ ಮಾಡಿದವು. ಏನೂ ಗೊತ್ತಿಲ್ಲದಂತೆ ಶ್ವೇತಾಂಬರರು ಹಿಂದಕ್ಕೆ ಸರಿದರು. ಕೊನೆಗೆ ಶ್ರೀಮತಿ ಇಂದಿರಾಗಾಂಧಿಯವರೇ ಈ ಪ್ರಕರಣದಲ್ಲಿ ಪ್ರವೇಶಿಸಬೇಕಾಯಿತು. ಮುನಿಶ್ರೀಗಳು ಈ ಧರ್ಮ ದಿಗ್ವಿಜಯದಲ್ಲಿ ಸಂಪೂರ್ಣವಾಗಿ ಸಫಲರಾದರು. ಬಾಹುಬಲಿ ಕ್ಷೇತ್ರವು ಮತ್ತೆ ದಿಗಂಬರ ಕ್ಷೇತ್ರವಾಗಿ ಉಳಿದುಕೊಂಡಿತು. ಮುನಿಶ್ರೀ ವಿದ್ಯಾನಂದರು ಪ್ರವೇಶಿಸದೇ ಹೋಗಿದ್ದರೆ ಬಂದಿದ್ದ ಆಪತ್ತನ್ನು ದಿಗಂಬರ ಪಂಥ ನಿವಾರಿಸಿಕೊಳ್ಳಲು ಕಷ್ಟವಾಗುತ್ತಿತ್ತು.

ಒಟ್ಟಿನಲ್ಲಿ ಶ್ರೀ ವಿದ್ಯಾನಂದರು ದಕ್ಷಿಣ ಭಾರತಕ್ಕೆ ಮಾಡಿರುವ ಉಪಕಾರವನ್ನು ಸುವರ್ಣಾಕ್ಷರದಲ್ಲಿ ಬರೆದಿಡಬೇಕು. ಶ್ರವಣಬೆಳಗೊಳ ತೀರ್ಥದ ಒಂದೊಂದು ಕಲ್ಲು ಕೂಡಾ ಅವರ 'ವಿಶ್ವತೀರ್ಥ'ವನ್ನಾಗಿ ಪರಿಣಮಿಸಿದ ಚಿರ-ಯಶೋ-ಗಾನವನ್ನು ಹೇಳುತ್ತಿದೆ. ಅಜರಾಮರವಾಗಿ ಇಡೀ ಭಾರತವನ್ನೇ ಇವರು ದಕ್ಷಿಣ ಭಾರತವಾಗಿ ಮಾರ್ಪಡಿಸಿರುವರು ಎಂದು ಹೇಳಿದರೂ ತಪ್ಪಾಗದು. ಶ್ರೀ ವಿದ್ಯಾನಂದರು ಕಾರಣ ಪುರುಷರು, ಮಹಾಮಹಿಮರು.



# ಶ್ರೀ ಕ್ಷೇತ್ರ ಧರ್ಮಸ್ಥಳದ ಭಗವಾನ್ ಬಾಹುಬಲಿ

ಲೇಖಕರು:
ಶ್ರೀ ಎಸ್. ಜಿನರಾಜ ಶಾಸ್ತ್ರಿ, ನ್ಯಾಯತೀರ್ಥ, ಸಿದ್ಧವನ ಗುರುಕುಲ, ಉಜಿರೆ.

ಅನೇಕ ಶತಮಾನಗಳಿಂದ ಪ್ರಖ್ಯಾತವಾದ ಶ್ರೀ ಕ್ಷೇತ್ರ ಧರ್ಮಸ್ಥಳವು ಲಕ್ಷ ಕೋಟಿ ಜನರ ಇಷ್ಟಾರ್ಥ ಸಿದ್ಧಿಗೆಂದೇ ಸೃಷ್ಟಿಯಾದ ನೆಲೆಯಾಗಿದೆ. ಸರ್ವ ಮತೀಯರೂ ತಮ್ಮ ಶ್ರದ್ಧಾ ಭಕ್ತಿಗಳನ್ನು ಅರ್ಪಿಸುತ್ತಾ ಬಂದಿದ್ದಾರೆ. ಕ್ಷೇತ್ರದಲ್ಲಿ ನಿತ್ಯ ನಡೆಯುವ ಚತುರ್ವಿಧ ದಾನಗಳಲ್ಲದೆ ಧರ್ಮಾಧಿಕಾರಿಗಳಾದ ಪೂಜ್ಯ ಹೆಗ್ಗಡೆಯವರು ಜನರ ಕಷ್ಟ-ಕಾರ್ಪಣ್ಯಗಳನ್ನು ಆಲಿಸಿ ಯೋಗ್ಯ ಪರಿಹಾರದ ಸಹಕಾರ ನೀಡುತ್ತಿರುವ ಕಾರಣ ಶ್ರೀ ಕ್ಷೇತ್ರದ ಕೀರ್ತಿ ವಿಸ್ತಾರವಾಗಿದೆ. ಹಿಂದಿನ ಹೆಗ್ಗಡೆಯವರ ತಲೆಮಾರುಗಳಿಂದ ಲಭಿಸಿದ ದೈವ-ದೇವರ ಅನುಗ್ರಹ ಆಶ್ವಾಸನೆಗಳಿಗೆ ನವೀನ ಕಾಯಕಲ್ಪವೋ ಎಂಬಂತೆ ದಿ| ಪೂಜ್ಯ ಮಂಜಯ್ಯ ಹೆಗ್ಗಡೆಯವರು 1951ನೇ ಇಸವಿಯಲ್ಲಿ ಶ್ರೀ ಕ್ಷೇತ್ರದ ಧರ್ಮದೇವತೆಗಳಿಗೆ, ದೇವರಿಗೆ ಮಹಾನದಾವರಿ, ವೈಭವದ ಪೂಜಾ ವಿಶೇಷ ಕೈಂಕರ್ಯವನ್ನು ಜರಗಿಸಿದರು. ಕ್ಷೇತ್ರ ಪದ್ಧತಿಯಂತೆ ಆಗ ಭಗವಾನ್ ಚಂದ್ರನಾಥ ಸ್ವಾಮಿಯ ಜನ್ಮಕಲ್ಯಾಣದ ಅಂಗವಾಗಿ ಶ್ರೀ ರತ್ನವರ್ಮರಾಜರು ಮತ್ತು ಶ್ರೀಮತಿ ರತ್ನಮ್ಮನವರು ಜಿನಬಾಲಕನನ್ನು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಹಿಡಿದುಕೊಂಡು ಪಾಂಡುಕಶಿಲೆ ಅಭಿಷೇಕ ಮಂಟಪಕ್ಕೆ ಬರುವ ಶುಭಯೋಗದಲ್ಲಿ ಶ್ರೀಮತಿ ರತ್ನಮ್ಮನವರ ಮನಸ್ಸಿನಲ್ಲಿ ಅನಿರೀಕ್ಷಿತವಾಗಿ ಒಂದು ಯೋಚನೆ ಉದಿಸಿ ಬಂತು. ಈ ಪ್ರಖ್ಯಾತ ಮಹಾ ಕ್ಷೇತ್ರದಲ್ಲಿ ಖ್ಯಾತಿಗೆ ತಕ್ಕಂಥ ಒಂದು ಮಹಾಮೂರ್ತಿ ಬೇಕು. ಭಗವಾನ್ ಚಂದ್ರನಾಥ ಸ್ವಾಮಿಯ ಮೂರ್ತಿ ಪ್ರಾಚೀನವಾದರೂ ಚಿಕ್ಕದು ಎಂಬ ಯೋಚನೆಯೇ ಧರ್ಮಸ್ಥಳದ ಭಗವಾನ್ ಬಾಹುಬಲಿಯ ಮಹಾಮೂರ್ತಿ ನಿರ್ಮಾಣಕ್ಕೆ ಕಾರಣವಾಯಿತು.

ಶ್ರೀಮಾನ್ ರತ್ನವರ್ಮ ಹೆಗ್ಗಡೆಯವರು ಶ್ರೀ ಕ್ಷೇತ್ರದ ಧರ್ಮಾಧಿಕಾರದ ಪಟ್ಟವೇರಿದ ಬಳಿಕ ತಮ್ಮ ಧರ್ಮಪತ್ನಿಯ ಅಪೇಕ್ಷೆಯನ್ನು ನೆರವೇರಿಸುವ ಸಾಧನೆಯಲ್ಲಿ ದಿ| ಕೆ. ಬಿ.ಜಿನರಾಜ ಹೆಗ್ಡೆಯವರ ಸಲಹೆಯಂತೆ ಕಾರ್ಕಳದ ಮಹಾಶಿಲ್ಪಿ ಗೋಪಾಲ ಕೃಷ್ಣ ಶೆಣೈಯವರಲ್ಲಿ ಮಹಾಮೂರ್ತಿಯ ನಿರ್ಮಾಣ ಬಗೆಗೆ ವಿಚಾರ ವಿಮರ್ಶೆ ನಡೆಸಿದರು. ಪ್ಲವಂಗ ಸಂವತ್ಸರದ ಆಶ್ವೀಜ ಶುದ್ಧ ವಿಜಯದಶಮಿ ದಿನಾಂಕ 12 ಅಕ್ಟೋಬರ 1967 ಗುರುವಾರ ಶ್ರವಣ ನಕ್ಷತ್ರದ ಶುಭಯೋಗದಲ್ಲಿ ಮಹಾಮೂರ್ತಿಯ ನಿರ್ಮಾಣ ಪ್ರಾರಂಭಿಸುವುದೆಂದು ಶ್ರೀ ರತ್ನವರ್ಮ ಹೆಗ್ಗಡೆಯವರು ನಿಶ್ಚಯಿಸಿದರು. ಈ ಶುಭ ಸಂಕಲ್ಪಕ್ಕೆ ಶ್ರೀ ಹೆಗ್ಗಡೆಯವರಿಗೆ ಬರಲು ಅಸಾಧ್ಯವಾದಾಗ ಸುಪುತ್ರ ಶ್ರೀ ವೀರೇಂದ್ರಕುಮಾರ್ ಅವರ ಸಮ್ಮುಖದಲ್ಲಿ ಶಾಸ್ತ್ರೋಕ್ತ ಪೂಜಾ ವಿಧಿ-ವಿಧಾನಗಳು ಜರಗಿದ ನಂತರ ಮಹಾಮೂರ್ತಿಯ ನಿರ್ಮಾಣವು ಶಿಲ್ಪಿವರ್ಯ ಶ್ರೀ ಗೋಪಾಲಕೃಷ್ಣ ಶೆಣೈ ಅವರು ನೂರು ಜನ ಸಹಶಿಲ್ಪಿಗಳ ಸಹಕಾರದೊಂದಿಗೆ ಆರಂಭಿಸಿದರು. ಶ್ರೀಮಾನ್ ರತ್ನವರ್ಮ ಹೆಗ್ಗಡೆಯವರು ಮಹಾಮೂರ್ತಿಯ ಕಲಾ ಸೇವೆ ಮುಕ್ತಾಯದ

ಮೊದಲೇ ದಿವಂಗತರಾದರು. ನಂತರದ ಪೂರ್ಣ ಜವಾಬ್ದಾರಿ ಸುಪುತ್ರ ಶ್ರೀ ವೀರೇಂದ್ರ ಹೆಗ್ಗಡೆಯವರು ಮತ್ತು ಮಾತೃಶ್ರೀ ರತ್ನಮ್ಮನವರ ಶಿರೋಧಾರ್ಯವಾಯಿತು.

ಪ್ರತಿಯೊಂದು ಕಾರ್ಯಸಿದ್ಧಿಗೆ ನಿಯಮ, ನಿಷ್ಠೆ, ಮನಸ್ಸಿನ ಏಕಾಗ್ರತೆ ಅವಶ್ಯವಾಗಿ ಬೇಕು. ಇದನ್ನರಿತ ಶಿಲ್ಪಿವರ್ಯರು ಮೂರ್ತಿ ನಿರ್ಮಾಣ ಕಾಲದಲ್ಲಿ ರಾಮ ನಾಮ ಜಪ ಮತ್ತು ಉಪ್ಪಿನ ತ್ಯಾಗ ವ್ರತವನ್ನು ಸ್ವೀಕರಿಸಿದ್ದರು. ಮಹಾಮೂರ್ತಿಯ ನಿರ್ಮಾಣ ಕೇಂದ್ರ ಕಾರ್ಕಳದ ಮಂಗಳ ಪಾದೆ ಒಂದು ಪುಣ್ಯ ಕ್ಷೇತ್ರದಂತಾಯ್ತು. ಜಕಣಾಚಾರಿ ಅರಿಷ್ಟನೇಮಿಯಯವರಂಥ ಮಹಾಶಿಲ್ಪಿಗಳು ಈ 20ನೇ ಶತಮಾನದಲ್ಲಿ ಕೂಡಾ ಇದ್ದಾರಲ್ಲವೆಂದು ಜನರು ಸಂತೋಷ ಪಟ್ಟರು. ಮತ್ತೆ ಕೆಲವರು ಚಾವುಂಡ ರಾಯ ಕಾಳಲಾ ದೇವಿಯವರಂಥ ಜಿನ ಭಕ್ತರು ಇಂದಿಗೂ ಇದ್ದಾರಲ್ಲಾ ಎಂದು ವಿಚಾರ ವಿನಿಮಯ ಮಾಡಿಕೊಂಡರು. ಮೂರ್ತಿ ನಿರ್ಮಾಣ ಪರ್ಯಂತ ಸುಮಾರು ಮೂರು ಲಕ್ಷ ಜನ ಕಲಾ ಸಂದರ್ಶನಕ್ಕೆ ಬಂದಿದ್ದರೆಂದು ತಿಳಿದು ಬಂದಿದೆ. ತ್ಯಾಗ ಜೀವನದ ಪರಮಾವಧಿಯನ್ನು ದಿಗಂಬರ ಜೈನ ಮೂರ್ತಿಗಳು ಸೂಚಿಸುತ್ತವೆ. ಈ ಬಗ್ಗೆ ಶಿಲ್ಪಿ ಕಲಾವಿದರು ತಮ್ಮ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಮೂರ್ತಿ ಮತ್ತು ಮೂರ್ತಿ ಪೂಜೆಗೆ ಜೈನರೇ ಆದ್ಯರೆಂದು ಅನೇಕ ಸಂಶೋಧಕರ ನಂಬಿಕೆ ಇದೆ. ದಿಗಂಬರ ಮೂರ್ತಿಗಳು ಭಾರತೀಯರ ಮೋಕ್ಷ ಮಾರ್ಗದ ಚಿರಂತನ ದಿವ್ಯ ಸಂಕೇತಗಳು. ಆತ್ಮ ಸಾಕ್ಷಾತ್ಕಾರದ ಸಿದ್ಧಿಗೆ ಮೌನ ಮಾರ್ಗದರ್ಶನ ನೀಡುತ್ತಾ ಬಂದಿವೆ. ಕ್ರಿ. ಪೂರ್ವದ ಅನೇಕ ದಿಗಂಬರ ಜೈನ ಮೂರ್ತಿಗಳು ಈಗಲೂ ಉಪಲಬ್ಧವಾಗಿವೆ. ಶ್ರೀ ವೀರೇಂದ್ರ ಹೆಗ್ಗಡೆಯವರು ಮಾತಾ ಪಿತೃಗಳ ಸಂಕಲ್ಪವನ್ನು ನಿಷ್ಠಾವಂತರಾಗಿ ನಡೆಸುತ್ತಾ ಬಂದರು. ಮಾತಾಪಿತೃಗಳ ಸಂಕಲ್ಪದ ಪ್ರಗತಿಗೆ ನಿಷ್ಠಾವಂತ ಸುಪುತ್ರರು ಬೇಕೆಂಬುದನ್ನು ಜನರಿಗೆ ಮನಗಾಣಿಸಿದರು. ಮಾತೃಶ್ರೀ ರತ್ನಮ್ಮನವರು ಕೂಡಾ ಶಿಲ್ಪಿವರ್ಯರಿಗೆ ರಚನೆಯ ಕಾರ್ಯ ಪ್ರಗತಿಪರವಾಗುವಂತೆ ಪ್ರೋತ್ಸಾಹಿಸುತ್ತಾ ಬಂದರು. ಮಹಾಮೂರ್ತಿಯ ನಿರ್ಮಾಣದ ಆರಂಭ ಕಾಲದಲ್ಲಿಯೇ ಪಂಚನಮಸ್ಕಾರ ಲೇಖನ ರಾತ್ರಿ ಭೋಜನ ತ್ಯಾಗ, ಇನ್ನಿತರ ವ್ರತಗಳನ್ನು ಆಚರಿಸುವ ವ್ರತಸ್ಥೆಯಾಗಿದ್ದರು.

ಮಹಾಮೂರ್ತಿಯ ನಿರ್ಮಾಣದ ಜೊತೆಗೆ ಸ್ವಾಮಿಯ ಉಭಯ ಪಾರ್ಶ್ವಗಳಲ್ಲಿ ಅಹಿಂಸೆಯ ಮಹಿಮೆಯನ್ನು ಸೂಚಿಸುವಂತೆ ಜನ್ಮ ವೈರಿ ಪ್ರಾಣಿಗಳು ನಿರ್ವೈರದಿಂದ ಪ್ರೀತಿಸಿ ಜೀವನ ನಡೆಸುವ ಕ್ರಮವನ್ನು ಆಚಾರ್ಯ ಜಿನಸೇನ ಸ್ವಾಮಿಯವರ ಆದಿ ಪುರಾಣದ ಆಧಾರದಂತೆ ತಯಾರಿಸಿದರು. ಆದಿ ಪುರಾಣದ ಶ್ಲೋಕ–

> ಸಿಂಹಸ್ತನಂಧಯಾನತ್ರ । ಕರಿಣ್ಯಃ ಪಾಯಂತ್ಯಮೂಃ ।
> ಸಿಂಹಾಧೇನು ಸ್ತನಂ ಸ್ವೈರಂ । ಸ್ಪೃಶಂತಿ ಕಲಭಾ ಇಮೇ ॥

ಸಿಂಹದ ಮರಿಗಳಿಗೆ ಆನೆಗಳು ಹಾಲುಣ್ಣಿಸುವುದು, ಸಿಂಹ ಹಸುಗಳ ಸ್ತನಗಳನ್ನು ಆನೆ ಮರಿಗಳು ಚೀಪುವುದು ಜಿನಯೋಗಿಗಳ ಅಹಿಂಸಾಮಯ ತಪೋಜೀವನದ ಪ್ರಭಾವಕ್ಕೆ ಉದಾಹರಣೆಗಳಾಗಿವೆ. ಈ ಕಲಾವೈಭವವನ್ನು ಶಿಲ್ಪಿವರ್ಯರು ಶಿಲೆಯಲ್ಲಿ ಸುಂದರವಾಗಿ ಅಂಕುರಿಸಿದ್ದಾರೆ. ರತ್ನಗಿರಿಯ ಬುಡದಲ್ಲಿ ಹುಲಿ ಮತ್ತು ದನ ಒಂದೆಡೆ ಜಲಪಾನ ಮಾಡುವ ದೃಶ್ಯ ಶ್ರೀ ಕ್ಷೇತ್ರ ಧರ್ಮಸ್ಥಳದ ಲಕ್ಷೋಪಲಕ್ಷ

ಯಾತ್ರಿಕರಿಗೆ ಅಹಿಂಸಾ ಚಿಂತನೆಗೆ ಆಧಾರವಾಗಿವೆ. ಜ್ಞಾನಿಗಳ ಮನ-ವಚನ-ಕಾಯ ಗಳ ಸ್ಪಂದನಗಳು ಸರ್ವದಾ ಜನ ಹಿತಚಿಂತನೆಗೆ ಆಸ್ಪದವೆಂದು ತಿಳಿಯಬೇಕು.

ಮಹಾಮೂರ್ತಿಯು ಸಿದ್ಧವಾದ ಬಳಿಕ ಅದನ್ನು ಕಾರ್ಕಳದಿಂದ 40 ಮೈಲು ದೂರದ ಧರ್ಮಸ್ಥಳಕ್ಕೆ ಸಾಗಿಸುವುದು ಒಂದು ಸಾಹಸದ ಕೆಲಸ. 13 ಅಡಿ ಉದ್ದ ಆಧಾರ ಶಿಲಾಖಂಡ, 39 ಅಡಿ ಉನ್ನತವಾದ ಮಹಾಮೂರ್ತಿ ಕೂಡಿ 52 ಅಡಿ ಉದ್ದ, ಅದರ ಒಟ್ಟು ಭಾರ 170 ಟನ್ನಿಗೂ ಅಧಿಕವೆಂದು ನಿರ್ಣಯ. ಮಾರ್ಗದ ಚಿಕ್ಕ ಪುಟ್ಟ ಮೋರಿಗಳು ಈ ಭಾರವನ್ನು ಸಹಿಸವು ಎಂಬ ಶಂಕೆ. ಆದುದರಿಂದ ವೈಜ್ಞಾನಿಕ ಯಂತ್ರ ಸಹಾಯದಿಂದ ಸಾಗಿಸಲು ಸಾಧ್ಯವೆಂದು ಮನಗಂಡ ಶ್ರೀ ವೀರೇಂದ್ರ ಹೆಗ್ಗಡೆಯವರು ಮುಂಬಯಿಯ ಮೆ. ಮಂಗತ್‌ರಾಂ ಕಂಪನಿಯ ಮಾಲಿಕ ರೊಡನೆ ಒಪ್ಪಂದ ಮಾಡಿಕೊಂಡರು. ಅದು 64 ಗಾಲಿಗಳ ಒಂದು ಟ್ರ್ಯಾಲಿ. ಅದರಲ್ಲಿ ಮೊದಲು ಬ್ರಹ್ಮಸ್ತಂಭದ ಶಿಲಾಖಂಡವನ್ನು ಸಾಗಿಸಿ ಒಂದು ಅನುಭವ ಪಡೆದು ನಂತರ ಮಹಾಮೂರ್ತಿ ಸಾಗಿಸುವ ಧೈರ್ಯ ತಾಳಿದರು. ದಿ. 27-2-1973 ಮಂಗಳವಾರ ಮಂಗಲವಿಹಾರದ ಪೂಜಾವಿಧಿಯ ಬಳಿಕ ಮಂತ್ರಘೋಷ, ವಾದ್ಯ, ಜಯಕಾರ. ಆನೆ ಕುದುರೆಗಳ ಸಹಕಾರದೊಂದಿಗೆ ಯಂತ್ರ ಚಲನೆ ಆರಂಭಗೊಂಡಿತು. ಅನೇಕ ಸಹಸ್ರ ಜನರು ಮೂರ್ತಿ ವಿಹಾರದ ಆಶ್ಚರ್ಯಕರ ಮೇಳವನ್ನು ನೋಡಿ ದಣಿಯದಾದರು. ಮೂರ್ತಿ ಪ್ರಸ್ಥಾನ ಪ್ರಧಾನ ಕೇಂದ್ರಗಳಲ್ಲಿ ಚಪ್ಪರ ತಳಿರು ತೋರಣ ನಿರ್ಮಿಸಿ ಕುಂಕುಮ ಹಣ್ಣುಕಾಯಿ ಊದುಬತ್ತಿಗಳಿಂದ ಅರ್ಚಿಸಿ ಸರ್ವಮತೀ ಯರೂ ಸಹಕಾರ ಗೌರವ ನೀಡಿದ ದಿನಗಳು ಸದಾ ಸ್ಮರಣೀಯ. ಕಾರ್ಕಳ, ಸಾಣೂರು, ಮೂಡಬಿದ್ರಿ, ಪೆರಿಂಜೆ, ವೇಣೂರು, ಬೆಳ್ತಂಗಡಿ, ಉಜಿರೆ ಮಾರ್ಗವಾಗಿ ಶ್ರೀ ಕ್ಷೇತ್ರ ಧರ್ಮಸ್ಥಳದ ಮಹಾದ್ವಾರವನ್ನು ದಿ. 19-3-1973ರಂದು ಪ್ರವೇಶಿಸಿತು. ಸಾಗಣೆಯ ವೇಳೆ ಆನಂದಗೊಂಡ ಜನ ಹಾಡಿದ ತುಳು ಪದ್ಯ ಸದಾ ನೆನಸುವಂಥದ್ದು.

ಬತ್ತೇರ್ ಬತ್ತೇರ್ ಬತ್ತೇರ್ । ಗುಮ್ಮಟದೇವೆರ್ ಬತ್ತೇರ್ ।
ಓಡೆ ಮುಟ್ಟ ಮುಟ್ಟ ಬತ್ತೆರ್ । ವೇಣೂರು ಮುಟ್ಟ ಬತ್ತೇರ್ ॥

ಹೀಗೆ ವೀತರಾಗ ದಿಗಂಬರ ಮಹಾಮೂರ್ತಿಯು ಪ್ರಸ್ಥಾನ ಕಾಲದಲ್ಲಿ ಜನ ಸಾಮಾನ್ಯರ ಹೃದಯಕ್ಕೆ ಅತ್ಯಂತ ಪ್ರಭಾವ ನೀಡಿತು. ಇದು 20ನೇ ಶತಮಾನದ ಮಹಾ ಚೋದ್ಯ ಕಾರ್ಯವೆನ್ನಬೇಕು.

ರಾಷ್ಟ್ರಪತಿ ವಿ. ವಿ. ಗಿರಿಯವರ ಕರಕಮಲಗಳಿಂದ ಧರ್ಮಸ್ಥಳದ ರತ್ನಗಿರಿಯಲ್ಲಿ ಪ್ರಾರಂಭಿಕ ಕಾರ್ಯಗಳು ನಡೆದು ಭೂಶೋಧನಾದಿ ಶುದ್ಧೀಕರಣ ವಿಧಿಗಳಿಂದ ಸಿದ್ಧ ವಾದ ಗಿರಿಶಿಖರಕ್ಕೆ ದಿನಾಂಕ 20 ಮಾರ್ಚ್ 1973 ಸಾಯಂಕಾಲ ಆರು ಘಂಟೆಗೆ ಭ. ಬಾಹುಬಲಿಯ ಮಹಾಮೂರ್ತಿಯ ಟ್ರ್ಯಾಲಿ ನಿಶ್ಚಿತ ಸ್ಥಳಕ್ಕೆ ಮುಟ್ಟಿತು. ಅಲ್ಲಿ ಸೇರಿದ ಜನ ಸಮುದಾಯ ಕೃತಕೃತ್ಯ ಭಾವನೆಯಿಂದ ಜಯಘೋಷದೊಡನೆ ನಲಿ ದಾಡಿದರು. ಮಾತೃಶ್ರೀ ರತ್ನಮ್ಮನವರ ಮೋಕ್ಷ ಗೇಣುದ್ದವಾಯ್ತು. ಶ್ರೀ ವೀರೇಂದ್ರ ಹೆಗ್ಗಡೆಯವರು ತನ್ನ ಸಾಹಸದ ಕಾರ್ಯದಿಂದ ಸಂತೋಷ ಪರವಶರಾಗಿ ಮಾತೃಶ್ರೀ ಯವರ ಪಾದ ಸ್ಪರ್ಶಿಸಿ ವಂದಿಸಿದರು. ಪಿತೃ ಸಂಕಲ್ಪವನ್ನು ನೆರವೇರಿಸಿ ಧನ್ಯರಾದರು.

ಶಿಲ್ಪಿಯ ಮಾಲಿಕರು ತಮ್ಮ ಕಾರ್ಯ ತೃಪ್ತಿಯಿಂದ ನಿಟ್ಟುಸಿರು ಬಿಡುತ್ತಾ ಮಹಾ ಮೂರ್ತಿಗೆ ಸಾಷ್ಟಾಂಗ ಎರಗಿದರು. ಇಂತಹ ಅಲೌಕಿಕ ಕಾರ್ಯದ ದರ್ಶನ ಭಾಗ್ಯಕ್ಕೆ ಬಹು ಜನ್ಮಗಳ ಸಂಚಿತ ಪುಣ್ಯಬೇಕೆಂದು ಎಲ್ಲರೂ ಮನಗಂಡರು.

ಮಹಾಮೂರ್ತಿಯು ರತ್ನಗಿರಿಯನ್ನೇರಿದ ಬಳಿಕ ಶಿಲಾವೇದಿಕೆ, ಪ್ರಾಕಾರ, ಬ್ರಹ್ಮಸ್ತಂಭದ ನಿರ್ಮಾಣ ಭರದಿಂದ ಸಾಗಿತು. ಯಂತ್ರ ಬಲದಿಂದಲೇ ಮಹಾ ಮೂರ್ತಿಯನ್ನು ನಿಲ್ಲಿಸಲಾಯ್ತು. ಮುಂದೆ ಮಹಾಮೂರ್ತಿಯಲ್ಲಿ ಶಾಸ್ತ್ರೋಕ್ತ ರೀತಿ ಯಲ್ಲಿ ಪ್ರಾಣ ಪ್ರತಿಷ್ಠೆಯ ಯೋಜನೆಗಳು ರೂಪಿತವಾದವು. ಶ್ರವಣಬೆಳಗೊಳ ಕ್ಷೇತ್ರದ ಭಗವಾನ್ ಬಾಹುಬಲಿ ಮಹಾಮೂರ್ತಿ ಪ್ರತಿಷ್ಠೆಯ ಸಹಸ್ರಮಾನೋತ್ಸವ ಮತ್ತು ಮಹಾಮಸ್ತಕಾಭಿಷೇಕದ ಮಹಾಮಹೋತ್ಸವಕ್ಕೆ ಆಗಮಿಸಿದ ಪರಮಪೂಜ್ಯ ಸಿದ್ಧಾಂತ ಚಕ್ರವರ್ತಿ ಏಲಾಚಾರ್ಯ ಮುನಿಶ್ರೀ ವಿದ್ಯಾನಂದರ ಸಾನಿಧ್ಯದಲ್ಲಿ ಭಗ- ವಾನ್ ರತ್ನೇಶ್ವರ ಬಾಹುಬಲಿ ಮಹಾಮೂರ್ತಿಯ ಪಂಚಕಲ್ಯಾಣ ಪೂರ್ವಕ ವಿಧಿ ವಿಧಾನಗಳು ಜರಗಬೇಕೆಂದು ಶ್ರೀ ವೀರೇಂದ್ರ ಹೆಗ್ಗಡೆಯವರ ಮತ್ತು ಮಾತೃಶ್ರೀ ರತ್ನಮ್ಮನವರ ಆಶಯ ಅದರಂತೆ ಮುನಿಶ್ರೀಯವರ ಸನ್ನಿಧಿಯಲ್ಲಿ 1982 ಫೆಬ್ರವರಿ ಯಲ್ಲಿ ಅತ್ಯಂತ ವೈಭವದ ಧರ್ಮಾನುಷ್ಠಾನವನ್ನು ಜರಗಿಸಿ ಶ್ರೀ ಕ್ಷೇತ್ರ ಧರ್ಮಸ್ಥಳದ ಧರ್ಮಧ್ವಜವನ್ನು ನ ಭೂತೋ ನ ಭವಿಷ್ಯತಿ ಎಂಬಂತೆ ವಿಜೃಂಭಿಸಿದರು. ಎಂಟು ಶತಮಾನಗಳಿಗೂ ಅಧಿಕ ಪ್ರಖ್ಯಾತವಾದ ಶ್ರೀ ಕ್ಷೇತ್ರದಲ್ಲಿ ಭಗವಾನ್ ಬಾಹುಬಲಿಯ ದಿವ್ಯದರ್ಶನದಿಂದ ಲಕ್ಷ ಕೋಟಿ ಜನರು ಕೈಗೆ ಬಂದ ಷಡ್‌ಖಂಡ ರಾಜ್ಯ ಪದವಿ ಯನ್ನು ಅಣ್ಣ ಭರತೇಶನಿಗೆ ನೀಡಿ ತಾನು ಮಹಾ ತ್ಯಾಗದ ಸುಖಮಯ ಜೀವನವನ್ನು ಹಮ್ಮಿಕೊಂಡ ಭ. ಬಾಹುಬಲಿಯ ದಿವ್ಯ ಕತೆಯನ್ನು ತಿಳಿಯುವಂತಾಗಿದೆ.

ದಯೆಯ ಕಂಪನ್ನು ತ್ಯಾಗದಲ್ಲಿ ಬಳಸಿ ಯೋಗದ ಶ್ರೀಮಂತಿಕೆ ಯನ್ನು ಸ್ಮಿತ ಗಂಭೀರ ವದನಾರವಿಂದದಿಂದ ಜಗತ್ತಿಗೆ ಶಾಂತಿ ಸಾಮ ರಸ್ಯದ ದಿವ್ಯ ಸಂದೇಶವನ್ನು ನೀಡುತ್ತಿರುವ ಭಗವಾನ್ ಬಾಹುಬಲಿ ರತ್ನೇಶ್ವರನಿಗೆ ಜಯ ಜಯವೆನ್ನಿರಿ.



# ಪ. ಪೂ. ಏಲಾಚಾರ್ಯ ಮುನಿಶ್ರೀ ವಿದ್ಯಾನಂದ ಮಹಾರಾಜರ ಕನ್ನಡನಾಡಿನ ಪ್ರಮುಖ ವಿಹಾರ

ಲೇಖಕರು:
ಆಸ್ಥಾನ ವಿದ್ವಾನ್, ಪಂ. ಶಿಶುಪಾಲ ಶಾಸ್ತ್ರಿ, ಮೂಡುಬಿದ್ರಿ.

ಕ್ರಿಸ್ತಾಬ್ದ 1985ರ ಎಪ್ರಿಲ್ ತಿಂಗಳು ಭಾರತೀಯ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಮೂಡಿ ಬರುವ ಮಾಸವೆಂದರೆ ಅತಿಶಯೋಕ್ತಿಯಲ್ಲ. ಈ ಕರ್ಮ ಯುಗದಲ್ಲಿ ಕರ್ಮ-ಧರ್ಮ ಸಂಗಮ ಸ್ವರೂಪಿಗಳಾದ ಏಲಾಚಾರ್ಯ ಮುನಿಶ್ರೀ ವಿದ್ಯಾನಂದರ ದಿವ್ಯ ಜೀವನದಲ್ಲಿ ಅರುವತ್ತು ವರ್ಷಗಳು ಇದೇ ಮಾಸದಲ್ಲಿ ತುಂಬುತ್ತವೆ, ರಾಷ್ಟ್ರೀಯ ಮಟ್ಟದ ಪ್ರಕಾಂಡ ವಾಗ್ಮಿಗಳೂ, ದಿಗಂಬರ ಜೈನರ ಪವಿತ್ರ ತೀರ್ಥಕ್ಷೇತ್ರಗಳ ಅಭಿವರ್ಧಕರೂ, ರಕ್ಷಕರೂ, ಅನುಭವೀ ಧರ್ಮಜ್ಞರೂ ಆಗಿರುವ ಈ ಮಹಾನ್ ಸಂತರ ಷಷ್ಠ್ಯಬ್ದಿ ಶಾಂತಿ ಮಹೋತ್ಸವವು ಭಾರತೀಯ ಧರ್ಮಾಭಿಮಾನಿಗಳಿಗೆ ಸಂತಸದ ಸಂಗತಿಯಾಗಿದೆ. 'ಧರ್ಮಚಕ್ರ ಶ್ರೀ ವಿಹಾರ'ದ ಪ್ರವರ್ತಕರೂ, 'ಜನಮಂಗಲ ಕಲಶದ ಪ್ರೇರಕರೂ ಆಗಿರುವ ಈ ಚತುರ ಸಾಧುವರ್ಯರ ಧರ್ಮ ಸಾಧನೆಗಳು ಸಮಗ್ರ ಜೈನ ಸಮಾಜಕ್ಕೆ ಅವಿಸ್ಮರಣೀಯವಾಗಿವೆ. ಕನ್ನಡನಾಡಿನಾದ್ಯಂತ ಇವರ ವಿಹಾರ ಕಾಲದಲ್ಲಿ ನಡೆದ ಹಲವಾರು ಸದ್ಧರ್ಮ ಪ್ರಭಾವನಾ ಕಾರ್ಯಗಳ ಪೈಕಿ ಕೆಲವನ್ನು ಮಾತ್ರ ಈ ವಿನಯಾಂಜಲಿಯಲ್ಲಿ ಸಂಕ್ಷಿಪ್ತವಾಗಿ ಸೂಚಿಸಬಯಸುತ್ತೇನೆ.

## ಶ್ರೀ ಕ್ಷೇತ್ರ ಶ್ರವಣಬೆಳಗೊಳ:

ಶ್ರವಣಬೆಳಗೊಳದ ವಿಶ್ವವಿಖ್ಯಾತ, ವಿಶಾಲಕಾಯ ಭಗವಾನ್ ಬಾಹುಬಲಿಯ ಭುವನ-ಮೋಹಿನೀ ಭವ್ಯ ಮೂರ್ತಿಯನ್ನು ಅರಿಯದವರಾರು? ಆ ದಿವ್ಯ ಮಹಾಮೂರ್ತಿಯು ಪ್ರತಿಷ್ಠಾಪನೆಯಾಗಿ ಸಾವಿರ ವರ್ಷಗಳು ಸಂದ ಸವಿನೆನಪಿಗಾಗಿ ನಡೆದ ಉತ್ತುಂಗ ಮೂರ್ತಿಯ ಮಹಾಮಸ್ತಕಾಭಿಷೇಕ ಮಹೋತ್ಸವವು ನನ್ನ ಜೀವಿತಕಾಲದ ಚಿರಸ್ಮರಣೀಯ ಹಾಗೂ ಅಭೂತಪೂರ್ವ ಘಟನೆ ಎಂದರೆ ಅತಿಶಯೋಕ್ತಿಯಲ್ಲ.

ಪರಮಪೂಜ್ಯ ಏಲಾಚಾರ್ಯರ ರೂಪರೇಖೆಯಲ್ಲಿ ರೂಪುಗೊಂಡು 'ಮೂರ್ತಿ ಪ್ರತಿಷ್ಠಾಪನಾ-ಸಹಸ್ರಾಬ್ದಿ ಮಹೋತ್ಸವದ' ಆ ಮನಮೋಹಕ ಸಮಾರಂಭದಲ್ಲಿ ಪಾಲ್ಗೊಳ್ಳಲು ದೇಶ-ವಿದೇಶಗಳಿಂದ ಧರ್ಮಾಭಿಮಾನಿಗಳು ಲಕ್ಷ-ಲಕ್ಷ ಸಂಖ್ಯೆಯಲ್ಲಿ ಕಿಕ್ಕಿರಿದು ನೆರೆದಿದ್ದ ಜನರು ಭಕ್ತಿಯಿಂದ ಬೆರಗಾದರು. ನತ ಮಸ್ತಕರಾದರು. ಇದರ ಸೂತ್ರಧಾರಿಗಳು ಪೂಜ್ಯ ಏಲಾಚಾರ್ಯ ಸ್ವ। ಪ್ರಧಾನಮಂತ್ರಿ ಇಂದಿರಾಗಾಂಧಿಯವರ ಮತ್ತು ಕರ್ನಾಟಕ ಸರಕಾರದ ಮಹಾಮಸ್ತಕಾಭಿಷೇಕಕ್ಕೆ ಸಂಪೂರ್ಣ ಸಹಯೋಗ ಪ. ಪೂ. ಏಲಾಚಾರ್ಯರ ವಿಶ್ವವ್ಯಾಪಿ ವ್ಯಕ್ತಿತ್ವದ ಪ್ರಭಾವದಿಂದಲೇ ದೊರಕಿ ಮಹಾಮಸ್ತಕಾಭಿಷೇಕವು 'ನ ಭೂತೋ ನ ಭವಿಷ್ಯತಿ' ರೂಪದಲ್ಲಿ ಜರಗಿತೆಂಬುದು ಸರ್ವ ವಿದಿತ, ನಿರ್ವಿವಾದ.

**ಸರ್ವಧರ್ಮ ಸಮನ್ವಯ ಕ್ಷೇತ್ರ ಧರ್ಮಸ್ಥಳ:** ನೂತನವಾಗಿ ಪ್ರತಿಷ್ಠಾಪಿಸಲ್ಪಡಬೇಕಾದ ಸಮಯದಲ್ಲಿ ನಿರ್ಮಾಣಗೊಂಡ ಆ ಮಹೋನ್ನತವಾದ ಭಗವಾನ್ ಶ್ರೀ ಬಾಹುಬಲಿ ಸ್ವಾಮಿಯ ಮೂರ್ತಿ ಪ್ರತಿಷ್ಠಾಪನಾ ಕಾರ್ಯವು ಜಟಿಲವಾದುದರಿಂದ ಇಲ್ಲಿ ಏಲಾಚಾರ್ಯರು ಸುದೀರ್ಘ ಸಮಯ ನಿಲ್ಲಲೇಬೇಕಾದ ಸಂದರ್ಭ ಒದಗಿ ಬಂತು. ತಂದೆಯವರಾದ ಸ್ವರ್ಗೀಯ ಧರ್ಮರತ್ನ ರತ್ನವರ್ಮ ಹೆಗ್ಗಡೆಯವರ ಮೂರ್ತಿ ನಿರ್ಮಾಣದ ಅಪೂರ್ಣಗೊಂಡ ಅಂತಿಮ ಚಿಂತೆಯನ್ನು ಪೂರೈಸುವ ಸಲುವಾಗಿ ತಾಯಿಯವರಾದ ಧರ್ಮಭಕ್ತೆ 'ಮಹಿಲಾ ರತ್ನ' ಶ್ರೀ ರತ್ನಮ್ಮನವರ ಸಮಯದ ಉತ್ತೇಜನೆಗಳಿಂದ 'ಅಭಿನವ ಚಾವುಂಡರಾಯ'ರೆನಿಸಿರುವ ಮಾತಾಪಿತೃ ಭಕ್ತ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆಯವರು ದೀರ್ಘಕಾಲ ಏಲಾಚಾರ್ಯರೊಂದಿಗೆ ಸಲಹೆ-ಸಮಾಲೋಚನೆ ನಡೆಸಿ ನೂತನ ಮೂರ್ತಿಯ ಪ್ರತಿಷ್ಠಾಪನಾ ಕಾರ್ಯವನ್ನು ಕೊನೆಗೂ ಸರ್ವಧರ್ಮಿಗಳ, ತ್ಯಾಗಿ ಹಾಗೂ ವಿದ್ವನ್ಮಣಿಗಳ ಸಹಕಾರದಿಂದ ಯಶಸ್ವಿಯಾಗಿ ನಡೆಸಿದರು ಈ ಧಾರ್ಮಿಕ ಕಾರ್ಯಗಳಲ್ಲಿ ಕೊಡುಗೈ ಧೀರ ವೀರೇಂದ್ರರ ಔದಾರ್ಯವು ಪ್ರಶಂಸನೀಯವಾಗಿತ್ತು. ಉನ್ನತವಾದ ಅಖಂಡ ಶಿಲೆಯಲ್ಲಿ ಕೆತ್ತಿಸಿ ಮೇಲಕ್ಕೆ ನಿಲ್ಲಿಸಿ ರಾಷ್ಟ್ರೀಯ ಮಟ್ಟದ ಪ್ರತಿಷ್ಠೆಯನ್ನು ವಿಧಿ-ವಿಧಾನ ಪೂರ್ವಕ ನಡೆಸುವುದೆಂದರೆ ನಿಜವಾಗಿಯೂ ಮಹಾ ಸಾಹಸದ ಕಾರ್ಯವೇ ಅಹುದು. ಇಂತಹ ಸಾಹಸ, ವೀರೇಂದ್ರರಂತಹ ಶ್ರೀಮಂತ ಧೀಮಂತ ವ್ಯಕ್ತಿಗಳಿಗೇ ಮೀಸಲೆಂದು ಹೇಳಿದರೆ ಆಶ್ಚರ್ಯವಿಲ್ಲ. ಭಾರತದ ಅದರಲ್ಲೂ ವಿಶೇಷವಾಗಿ ದಕ್ಷಿಣಭಾರತದ ಮೂಲೆ ಮೂಲೆಗಳಿಂದ ಈ ಮಹಾ ಮಹೋತ್ಸವದ ದರ್ಶನಕ್ಕಾಗಿ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ದೂರದಿಂದ ಆಗಮಿಸಿದ್ದ ಜೈನ-ಜೈನೇತರ ಭಕ್ತ ಬಾಂಧವರು ಮಹಾಮಸ್ತಕಾಭಿಷೇಕದ ಆ ಅದ್ಭುತ ರಮ್ಯ ದೃಶ್ಯವನ್ನು ಕಂಡು ಭಕ್ತಿಯ ಆನಂದಬಾಷ್ಪ (ಕಣ್ಣೀರು) ಸುರಿಸಿದ್ದರು. ಈ ಅಗಾಧ ಕಾರ್ಯಗಳ ಪ್ರಧಾನ ಕರ್ಣಧಾರ ಪೂಜ್ಯ ಏಲಾಚಾರ್ಯರೇ ಆಗಿದ್ದರು.

**ಮೂಡುಬಿದಿರೆ (ದಕ್ಷಿಣ ಕಾಶೀ) ಕ್ಷೇತ್ರ:**

ಮೂಡುಬಿದಿರೆಯ ಪ್ರವಚನ ವಿಚಕ್ಷಣ 'ಜ್ಞಾನಯೋಗಿ' ಭಟ್ಟಾರಕ ಶ್ರೀ ಚಾರುಕೀರ್ತಿ ಸ್ವಾಮೀಜಿಯವರ ಸದಾಗ್ರಹ ಆಮಂತ್ರಣವನ್ನು ಸ್ವೀಕರಿಸಿ ಅವರ ಸುವ್ಯವಸ್ಥಿತ ಆತಿಥ್ಯದಲ್ಲಿ ಮೂಡುಬಿದಿರೆ ಗುರುಭಕ್ತ ಶ್ರಾವಕನ ಜ್ಞಾನ ಪಿಪಾಸೆಯನ್ನು ನೀಗಿಸುವ ಸಲುವಾಗಿ ಪೂಜ್ಯ ಏಲಾಚಾರ್ಯರು ಇಲ್ಲಿ ದೀರ್ಘಕಾಲ ನಿಲ್ಲಲೇಬೇಕಾಯಿತು. ತಮ್ಮ ಅಮೋಘ ಪ್ರವಚನಗಳಿಂದ ಶ್ರೋತೃಕಳನ್ನು ಮಂತ್ರಮುಗ್ಧರನ್ನಾಗಿಸಿ ಅವರ ದರ್ಶನಕ್ಕಾಗಿ ಬರುವ ಭಕ್ತಾದಿಗಳಿಗೆ ಶ್ರೀ ಮಠದಲ್ಲಿ ಭೋಜನದ ವ್ಯವಸ್ಥೆ ಇತ್ತು. ಇಲ್ಲಿ ಕ್ಷೇತ್ರದ ದರ್ಶನಾರ್ಥಿಗಳು ಪಾರ್ಶ್ವನಾಥ ಮಂದಿರ(ಗುರುಬಸದಿ) ಬಳಿ ಭವ್ಯವಾದ ಭವನದಲ್ಲಿ ಪ್ರಾಚೀನ ಕಾಲದಿಂದಲೂ ರಕ್ಷಿಸಿಕೊಂಡು ಬಂದಿದ್ದ, ಜೈನ ಕರ್ಮ ಸಿದ್ಧಾಂತ ಪ್ರಧಾನವಾದ 'ಧವಲಾ' 'ಜಯಧವಲಾ' 'ಮಹಾಧವಲಾ' ನಾಮದಿಂದ ಪ್ರಸಿದ್ಧಿ ಪಡೆದ ಪುರಾತನ ತಾಡಪತ್ರದಲ್ಲಿ ಅಂಕಿತಗೊಂಡಿರುವ ಆಧ್ಯಾತ್ಮಿಕ ಗ್ರಂಥ ರತ್ನಗಳಿಂದಲೂ, ಬಹುಮೂಲ್ಯ ರತ್ನಪ್ರತಿಮಾದಿಗಳಿಂದಲೂ ಶೋಭಿಸಿ ಸುಪ್ರಸಿದ್ಧ 'ತ್ರಿಭುವನ ತಿಲಕ ಚೂಡಾಮಣಿ'(ಸಾವಿರಕಂಬದ ಬಸದಿ)ಬಸದಿ, ಸ್ವರ್ಗೀಯ

ಭಟ್ಟಾರಕರ ಸ್ಮಾರಕಸ್ತಂಭ, ಚೌಟರಾಜರ ಅರಮನೆಯಲ್ಲಿ ರಚಿತಗೊಂಡ ಮರದ ಶಿಲ್ಪ ಕಲಾ ಚಾತುರ್ಯಗಳನ್ನು ಕಂಡು ಧನ್ಯರಾದರು. ಮುನಿ ಮಹಾರಾಜರಿಗೆ ದಾನ ನೀಡಿ ಪುಣ್ಯಭಾಗಿಗಳಾದರು. ಮುನಿಶ್ರೀಗಳವರ ಆಶ್ರಯದಲ್ಲಿ ಪ್ರಸಿದ್ಧ ವಾಣಿಜ್ಯೋದ್ಯಮಿ ಶ್ರೀ ಸಾಹೂಶಾಂತಿ ಪ್ರಸಾದರ ಧರ್ಮಪತ್ನಿ ಶ್ರೀಮತಿ ರಮಾರಾಣಿಯವರ ನಾಮಾಂಕಿತದಲ್ಲಿ ಸ್ಥಾಪಿತವಾದ 'ಶೋಧ ಸಂಸ್ಥಾನ'ದ ವಿಧಿವತ್ತಾದ ಉದ್ಘಾಟನೆ ಮತ್ತು 'ಮಹಾವೀರ ಕಲ್ಯಾಣ ಭವನ'ದ ಶಿಲಾನ್ಯಾಸ ಮೊದಲಾದ ಸ್ತುತ್ಯ ಕಾರ್ಯಗಳು ಇಲ್ಲಿ ನಡೆಯುತ್ತಿದ್ದು ದೂಡುಬಿದಿರೆಯಲ್ಲಿ ದೊಡ್ಡ ಜಾತ್ರೆಯೇ ನೆರೆದಿದೆಯೋ ಎಂಬಂತೆ ಭಾಸವಾಗುತ್ತಿತ್ತು. ಪ. ಪೂಜ್ಯ ಏಲಾಚಾರ್ಯರ ಪಾದಾರ್ಪಣೆಯಿಂದ ಮೂದುಬಿದಿರೆಯು ಪಾವನಗೊಂಡು ದೊಡ್ಡ ಧರ್ಮ ಪ್ರಭಾವನೆಯಾಯಿತು.

**ಕಾರ್ಕಳ ಕ್ಷೇತ್ರ:**

ಇಲ್ಲಿಯೂ ಭಕ್ತ ಶ್ರಾವಕರ ಆಗ್ರಹದಿಂದಲೂ, ಭಟ್ಟಾರಕರ ಗುರುಭಕ್ತಿಯಿಂದಲೂ ಏಲಾಚಾರ್ಯರು ತಂಗಿದ್ದರು. ಗೊಮ್ಮಟ ಜಿನನ ದರ್ಶನದಿಂದ ಪುನೀತರಾಗಿ, ಚತುರ್ಮುಖ ಬಸದಿ ಶ್ರೀಮಠ ಕನ್ಯಾಶಾಲೆ ಹಿರಿಯಂಗಡಿಯಲ್ಲಿರುವ ಹಿರಿಯ ಮಾನಸ್ತಂಭ, ಭುಜಬಲಿ ಬ್ರಹ್ಮಚರ್ಯಾಶ್ರಮ ಮುಂತಾದ ಪ್ರೇಕ್ಷಣಾ ಸ್ಥಾನಗಳ ಸಂದರ್ಶನ ಮಾಡಿ ಅಲ್ಲಿಯ ಜೈನ ಶ್ರಾವಕರ ಉತ್ಸಾಹದಿಂದ ಪ್ರೇರಿತರಾಗಿ ಭುಜಬಲಿ ಬ್ರಹ್ಮಚರ್ಯಾಶ್ರಮದ ಉನ್ನತ ಶಾಖೆಯಾದ ಸ್ವ। ನೇಮಿಸಾಗರವರ್ಣೀಜೀಯವರ ಸ್ಮಾರಕ ಸ್ವರೂಪದಲ್ಲಿ ಪ್ರೌಢಶಾಲೆಯೊಂದರ ಸ್ಥಾಪನೆಗೆ ಕಾರಣೀಭೂತರಾದರು.

**ಹೊಂಬುಜ ಕ್ಷೇತ್ರದ ಶ್ರೀ ಪದ್ಮಾವತೀ ಕ್ಷೇತ್ರ:**

ಏಲಾಚಾರ್ಯರನ್ನು ಆಮಂತ್ರಿಸಿ ಸಡಗರದಿಂದ ಸ್ವಾಗತಿಸಿದ ಹೊಂಬುಜ ಮಠಾಧೀಶರಾದ ಭಟ್ಟಾರಕ ಶ್ರೀ ದೇವೇಂದ್ರಕೀರ್ತಿ ಸ್ವಾಮಿಜೀಯವರು ನೀಡಿದ ಆತ್ಮೀಯತೆಯಿಂದ ಆದರಪೂರ್ಣ ಆತಿಥ್ಯವನ್ನು ಸ್ವೀಕರಿಸಿದರು. ಮುಂದೆ ಕೋಥಳಿ ಮೂಲಕ ಕುಂಭೋಜ(ಬಾಹುಬಲಿ)ಕ್ಕೆ ತೆರಳಿ ಅಲ್ಲಿ ಮಿಥ್ಯಾಮಾರ್ಗಿಗಳಿಂದ ಪ್ರಾಚೀನ ದಿಗಂಬರ ಜೈನ ಕ್ಷೇತ್ರಕ್ಕೆ ಉಂಟಾದ ಅಪಾಯವನ್ನು ಉಪವಾಸವ್ರತದ ದೃಢತೆಯಿಂದ ದೂರ ಮಾಡಿ ಮುಂದೆ-ಮುಂದೆ ಮುಂಬಯಿ ಕಡೆಗೆ ವಿಹಾರ ಬೆಳೆಸುತ್ತ ಧರ್ಮ ಪ್ರಭಾವನೆ ಗೈಯುತ್ತ ಮುಂಬಯಿಯ ಅತಿಶಯ ಕ್ಷೇತ್ರವಾದ ತೀನ್‌ಮೂರ್ತಿ ಭವನ(ಪೌದನಪುರ)ದಲ್ಲಿ ಈ ಮಹಾನ್ ಸಂತ ಏಲಾಚಾರ್ಯ ಮುನಿಶ್ರೀ ವಿದ್ಯಾನಂದರು ವರ್ಷಾಯೋಗ ಚಾತುರ್ಮಾಸ ಆಚರಿಸಿದರು. ಮಾಯಾ-ಮೋಹಗಳಿಂದ ಭೋಗೋಪಭೋಗಗಳಲ್ಲಿ ಮುಳುಗಿದ್ದ ಮುಂಬಾಪುರಿಯ ಭವ್ಯ ಜನತೆಗೆ ತಮ್ಮ ಆಕರ್ಷಕ ಹಾಗೂ ಪ್ರಭಾವಶಾಲಿಯಾದ ಸುಂದರ ಶೈಲಿಯಲ್ಲಿ ತ್ಯಾಗದ ದಿವ್ಯ ಸಂದೇಶವನ್ನು ಬೀರಿ ಅವರನ್ನು ಮೋಹದ ಮಾಯಾನಿದ್ರೆಯಿಂದ ಎಚ್ಚರಗೊಳಿಸಿದರು. ಈ ವಿನೀತ ಲೇಖಕನಿಗೆ ಇಲ್ಲಿಯೇ ಈ ಸಾಧುಪುಂಗವರ ಪುನರ್ದರ್ಶನವಾಯಿತು. ನನ್ನ ಜೀವನವು ಪಾವನವಾಯಿತು. ಬರೆಯಲು ಅಪಾರ ವಿಷಯಗಳಿದ್ದರೂ ಸ್ಥಳಾವಕಾಶ ಅಲ್ಪವಾದುದರಿಂದ ಇಷ್ಟಕ್ಕೇ ವಿರಮಿಸುತ್ತೇನೆ. ○

# ಪ. ಪೂ. ಮುನಿಶ್ರೀ ಏಲಾಚಾರ್ಯ ವಿದ್ಯಾನಂದರ ಅಸಾಧಾರಣ ವ್ಯಕ್ತಿತ್ವ ಹಾಗೂ ಕ್ರಾಂತಿಯುತ ಧರ್ಮ ಪ್ರಭಾವನೆ

ಲೇಖಕರು:
ಎಸ್. ಡಿ. ನಾಗೇಂದ್ರ ಶಾಸ್ತ್ರಿ, ಸಂಸ್ಕೃತ ಹಿಂದಿ ಸಾಹಿತ್ಯರತ್ನ, ಶ್ರವಣಬೆಳಗೊಳ.

ನಾನು ಕಂಡ ಹಾಗೆ ಮುನಿಶ್ರೀಯವರು ಈ ಹಿಂದೆ ಹೊಂಬುಜ ಮಠದಭೂತ ಪೂರ್ವ ಶ್ರೀ ದೇವೇಂದ್ರಕೀರ್ತಿ(ಅರ್ಹದ್ದಾಸ)ಗಳ ಸಹಚರ್ಯದಲ್ಲಿ ಕ್ಷುಲ್ಲಕ ಶ್ರೀ ಪಾರ್ಶ್ವ ಕೀರ್ತಿಗಳೆಂಬ ಅಭಿದಾನದಿಂದ ಕೂಡಿ ಆ ಕ್ಷೇತ್ರದಲ್ಲಿ ಪ್ರತಿವರ್ಷ ನಡೆಯುತ್ತಲಿದ್ದ 'ಸರ್ವೋದಯ ತೀರ್ಥ' ಧರ್ಮಸಭೆಯಲ್ಲಿ ಸಂದರ್ಭೋಚಿತ ವಿಷಯಲ್ಲಿ ಉಪದೇಶ ಮಾಡುತ್ತ ಧರ್ಮಬಂಧುಗಳಿಗೆ ಧರ್ಮ ಸ್ವರೂಪವನ್ನು ಬೋಧಿಸುತ್ತಲಿದ್ದರು.

ಕೆಲ ವರ್ಷಗಳ ನಂತರ ಆಚಾರ್ಯ ಶ್ರೀ ದೇಶಭೂಷಣ ಮುನಿವರರಿಂದ ಜಿನ ಮುದ್ರೆಯನ್ನು (ದಿಗಂಬರ ದೀಕ್ಷೆ) ಸ್ವೀಕರಿಸಿ ಉತ್ತರಭಾರತ ಕಡೆ ವಿಹರಿಸುತ್ತಾ ಅಲ್ಲಿರುವ ಪ್ರಕಾಂಡ ವಿದ್ವನ್ಮಣಿಗಳೊಡನೆ ಕಲೆತು ಅಧ್ಯಾತ್ಮ ವಿದ್ಯೆಯನ್ನು ಸಮೂಲವಾಗಿ ಅಧ್ಯಯನ ಮಾಡಿದ್ದಲ್ಲದೆ ವೈದಿಕ ಗ್ರಂಥಗಳಾದ ವೇದೋಪನಿಷತ್‌ಗಳನ್ನು ಲೌಕಿಕ ವಿದ್ಯೆ ಹಾಗೂ ಆ ಸಂಬಂಧವಾದ ರಾಮಾಯಣ ಮಹಾಭಾರತವೇ ಮುಂತಾದ ಪರ ಧರ್ಮೀಯರ ಗ್ರಂಥಗಳ ರಹಸ್ಯವನ್ನು ಮೂಲತಃ ಅರಿತುಕೊಂಡು ತಮ್ಮ ವಿವೇಚನಾ ಶಕ್ತಿಯಿಂದ ವಿಮರ್ಶಿಸಿ ತಿಳಿದನಂತರ ಸರ್ವ ಮತೀಯರಿಗೂ ವಿರೋಧವಾಗದಂತೆ ಬೃಹತ್ ಸಭೆಯಲ್ಲಿ ಸಿಂಹ ಘರ್ಜನೆಯಂತೆ ತನ್ನದೇ ಆದ ವಚನ ವೈಖರಿಯಿಂದ ಪ್ರತಿಪಾದಿಸುವಂತಾದರು.

ಮುನಿಶ್ರೀಯವರು ಮಾತೃ ಭಾಷೆಯಾದ ಕನ್ನಡ, ಹಾಗು ಸಂಸ್ಕೃತ, ಹಿಂದಿ, ಮರಾಠಿ ಭಾಷೆಗಳಲ್ಲಿ ನಿಷ್ಣಾತರಾಗಿದ್ದು ಆಯಾ ಭಾಷೆಯ ಜನರಿಗೆ ಆ ಭಾಷೆಯಲ್ಲೇ ಪ್ರವಚನ ಮಾಡುತ್ತಿದ್ದರಲ್ಲದೆ ಮೇಲ್ಕಂಡ ಭಾಷೆಗಳಲ್ಲಿ ಅನೇಕ ಗ್ರಂಥಗಳನ್ನು ಸಹ ರಚಿಸಿರುವುದು ಕಂಡುಬರುತ್ತದೆ.

ಇವರಿಂದ ವಿರಚಿತವಾದ ಹಿಂದಿ ಭಾಷೆಯ ಪುಸ್ತಕ 'ವಿಶ್ವಧರ್ಮಕೀರೂಪರೇಖಾ' ಮತ್ತು 'ಪಿಂಛಿ-ಕಮಂಡಲು' ಮುಂತಾದ ಸ್ವತಂತ್ರ ಗ್ರಂಥಗಳು ಪ್ರಕಾಶಿತವಾಗಿ ಭಾರತೀಯರಾದ ನಮಗೆ ಮಾರ್ಗದರ್ಶನಗಳಾಗಿವೆ. ಅಲ್ಲದೆ ವಿಶೇಶವಾಗಿ ಮುಮುಕ್ಷು ವರ್ಗದವರಿಗೂ ಸಹ ಅತ್ಯಾವಶ್ಯಕವಾದ 'ಸಮಯಸಾರಾದಿ' ಉದ್‌ಗ್ರಂಥಗಳೂ ವಿದ್ವಾಂಸರ ಕೂಡ ಪರಿಷ್ಕರಿಸಲ್ಪಟ್ಟ ಸುಂದರವಾಗಿ ಮುದಿತ್ರವಾದವು. ಈ ಅಸಾಧಾರಣ ಕಾರ್ಯದಿಂದ ಅಧ್ಯಾತ್ಮಗಳ ತತ್ತ್ವಗಳ ಕ್ಲಿಷ್ಟ ಸಮಸ್ಯೆ ದೂರವಾಗಿ ಸಾಮಾನ್ಯ ಜನರಿಗೂ ಆತ್ಮ ತತ್ತ್ವಗಳು ಅರ್ಥವಾಗಿ ಅವರು ಆ ಗ್ರಂಥಗಳನ್ನು ನಿತ್ಯ ಸ್ವಾಧ್ಯಾಯಕ್ಕೆ ಉಪಯೋಗಿಸುವಂತಾಯಿತು.

ಇವರ ಲೇಖನಗಳು ಅಗಣಿತವಾಗಿವೆ, ಅವುಗಳು ಅನೇಕ ಪಾಕ್ಷಿಕ, ಮಾಸಿಕ

ಪತ್ರಿಕೆಗಳಲ್ಲಿ ಪ್ರಕಟವಾಗುತ್ತಲೇ ಇವೆಯೆಂಬುದು ಸರ್ವವಿದಿತವೇ ಸರಿ. ಆ ಲೇಖನಗಳು ನಾನಾ ಭಾಷೆಗಳಲ್ಲಿ ಸರಳ-ಸುಂದರವಾಗಿದ್ದು ಧರ್ಮದ ಸ್ವರೂಪವನ್ನು ಪ್ರತಿಪಾದಿಸುವುದರ ಜೊತೆಗೆ ರಾಜಕೀಯದ ಹಾಗೆಯೇ ವ್ಯಾಪಹಾರಿಕ ರೀತಿ ನೀತಿಗಳಲ್ಲಿ ನಮಗೆ ಎಚ್ಚರಿಕೆ ಕೊಡುತ್ತಲಿವೆ.

ಇವರು ಇಂದಿನ ದಿನಗಳ ಮಹಾನ್ ಚಿಂತನಶೀಲರೂ, ಕಾರ್ಯದಲ್ಲಿ ಕರ್ಮಠರೂ ವಿಚಾರಗಳಲ್ಲಿ ನಿರ್ಭೀಕರೂ, ಜೀವನದಲ್ಲಿ ಅನುಶಾಸನ ಇಟ್ಟಿರುವವರೂ, ಅಲ್ಲದೆ ಸ್ಪಷ್ಟ ವಕ್ತಾರರೂ ಸಹ ಆಗಿರುತ್ತಾರೆ. ಆಧುನಿಕ ಜಗತ್ತಿನ ಭೌತಿಕ ಹಾಗೂ ವೈಜ್ಞಾನಿಕ ಯುಗದಲ್ಲಿ ಈ ಮಾನವನು ನಾಲ್ಕು ಕಡೆಯಿಂದಲೂ ಆಕುಲತೆಗೆ ಈಡಾಗಿರುವಾಗ ಇದಕ್ಕಾಗಿ ಶಾಂತಿಯನ್ನು ಅರಸುತ್ತ ಆಧ್ಯಾತ್ಮಿಕ ಶರಣವೇ ಪರಿಹಾರವೆಂಬುದನ್ನು ತೋರಿಸುತ್ತಲಿದ್ದಾರೆ. ಅಂದರೆ ಸ್ವಾತ್ಮ ಸಾಧನೆಯ ಜೊತೆಯಲ್ಲಿ ಪರಾತ್ಮ ಕಲ್ಯಾಣಕ್ಕೂ ಭಾಜನರಾಗಿದ್ದಾರೆ. ಈ ಜ್ಞಾನನಿಧಿಗಳು ಸಮವಸರಣದ ಪ್ರತಿಬಿಂಬದಂತಿರುತ್ತಾರೆ ಹೆಚ್ಚೇನು? ಪಂಚವರ್ಣ ಧ್ವಜ, ರಾಷ್ಟ್ರ ಪಕ್ಷಿ (ಗಂಡಬೇರುಂಡ) ಧರ್ಮಚಕ್ರ, ಜನ ಮಂಗಲ ಕಲಶ ಇವುಗಳ ಸಹಜವಾದ ಪರಿಜ್ಞಾನವನ್ನು ಜನ ಸಾಮಾನ್ಯರಿಗೆ ಈ ಮಹಾ ಮುನಿವರರೇ ತಿಳಿಸಿಕೊಟ್ಟಿರುತ್ತಾರೆ. ಇನ್ನು ವಿಶೇಷ ಧರ್ಮ ಮಾರ್ಗದ ಆಶ್ಚರ್ಯಕಾರಕವಾದ ಕೃತಿ ಕಾರ್ಯಗಳನ್ನು ಜನತೆಗೆ ಪ್ರತ್ಯಕ್ಷ ತೋರಿಸಲು ಚಿಂತಿಸುತ್ತಲಿದ್ದಾರೆ.

ಇವರ ಉದ್ಬೋಧನೆಯಿಂದಲೇ ಜೈನ ಸಂಪ್ರದಾಯದ ಎಲ್ಲಾ ಪಂಗಡದವರೂ ಡೆಲ್ಲಿಯಲ್ಲಿ ಸೇರಿ ಸಹರ್ಷವಾಗಿ ಭಾರತಾದ್ಯಂತ 2500ನೇ ಭಗವಾನ್ ಮಹಾವೀರರ ನಿರ್ವಾಣ ಕಲ್ಯಾಣವನ್ನು ಆಚರಿಸಲು ಒಪ್ಪಿ ಆ ಕಾರ್ಯವನ್ನು ಅಭೂತಪೂರ್ವವಾಗಿ ಯಶಸ್ವಿಗೊಳಿಸಿದರು. ಧರ್ಮಚಕ್ರ ಶ್ರೀವಿಹಾರದ ಉದ್ಘಾಟನೆ ಡೆಲ್ಲಿಯಲ್ಲಿ ಪ್ರಧಾನಿ ಇಂದಿರಾಗಾಂಧಿಯವರಿಂದ ನಡೆದು ಭಾರತದ ಸರ್ವತ್ರ ವಿಹರಿಸಿತು. ಇದರಂತೆ ಜನ ಮಂಗಲ ಕಲಶ ಅನೇಕ ಕಡೆ ಸಂಚರಿಸಿ ಮಂಗಲ ವಾತಾವರಣವನ್ನು ಸೃಷ್ಟಿಸಿ ಲಕ್ಷಾಂತರ ನಿಧಿಯನ್ನು ತುಂಬಿಕೊಂಡು ಶ್ರವಣಬೆಳಗೊಳದ ಶ್ರೀ ಬಾಹುಬಲಿಯ ಸಹಸ್ರಾಬ್ದಿಯ ಸಮಯಕ್ಕೆ ಒಂದು ಸೇರಿತು.

ಇವಕ್ಕೂ ಮಿಗಿಲಾಗಿ ಅವಿಸ್ಮರಣೀಯ, ಅಭೂತಪೂರ್ವ ಮತ್ತು ವಿಶ್ವಕಲ್ಯಾಣ ವಿಶ್ವಶಾಂತಿ ನಿಮಿತ್ತವಾಗಿ ಆಚರಿಸಲ್ಪಟ್ಟ ಭಗವಾನ್ ಬಾಹುಬಲಿ ಗೊಮ್ಮಟೇಶ್ವರನ ಸಹಸ್ರಾಬ್ದಿ ಮಹೋತ್ಸವ. ಈ ಸಂದರ್ಭದಲ್ಲಿ ಈ ವಿಭೂತಿ ಪುರುಷನ ಪ್ರಭಾವ ಪ್ರಚೋದನೆಯಿಂದ ಶತಾಬ್ದಿ ಕಲಶಗಳು ಹತ್ತು ಒಂದೊಂದಕ್ಕು ಒಂದೊಂದು ಲಕ್ಷ ರೂಪಾಯಿಗಳಂತೆ ಹತ್ತು ಜನ ಭಕ್ತರು ಸಂತೋಷದಿಂದ ಸ್ವೀಕರಿಸಿ ಭಗವಂತನಿಗೆ ಅಭಿಷೇಕ ಮಾಡಿದರು. ಅಲ್ಲದೆ ಕಲ್ಕತ್ತದ ಶ್ರೀಮಂತರೊಬ್ಬರು ಬಾಹುಬಲಿಯ ಅಭಿಷೇಕಕ್ಕಾಗಿ ಒಂದು ಬಂಗಾರದ ಕಲಶವನ್ನು ದಾನ ಮಾಡಿದರು.

ಈ ಮಹೋತ್ಸವದ ಸಂದರ್ಭದಲ್ಲಿ ಭಾ. ಪ್ರ. ಇಂದಿರಾಗಾಂಧಿಯವರು ಆಗಮಿಸಿ ಮುಕ್ತ ಕಂಠದಿಂದ ಬಾಹುಬಲಿಯನ್ನು ಕೊಂಡಾಡಿ, ನಮಸ್ಕರಿಸಿ ಹೆಲಿಕ್ಯಾಪ್ಟರಿನಿಂದ

ಪುಷ್ಪವೃಷ್ಟಿಯನ್ನು ಮಾಡಿ ನೆರೆದಿದ್ದ ಬೃಹತ್ ಸಭೆಯನ್ನು ಉದ್ದೇಶಿಸಿ ಬಾಹುಬಲಿಯ ತ್ಯಾಗದ ಹಾಗೂ ಜನಸಾಮಾನ್ಯರೂ ಅನುಸರಿಸಬೇಕಾದ ನೀತಿ ಧರ್ಮಗಳ ಬಗ್ಗೆ ಹೃದಯಂಗಮ ರೀತಿಯಲ್ಲಿ ಭಾಷಣ ಮಾಡಿದರು. ಅನಂತರ ಕ್ಷೇತ್ರದ ಪೀಠಾಧಿಕಾರಿಗಳಾದ ಸ್ವಸ್ತಿ ಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳವರಿಗೆ ಇವರ ಸಲಹೆಯಂತೆ 'ಕರ್ಮಯೋಗಿ'ಯೆಂಬ ಪ್ರಶಸ್ತಿಯನ್ನು ನೀಡಿ ಒಂದು ಬೆಳ್ಳಿಯ ಶ್ರೀ ಫಲ(ತೆಂಗಿನ ಕಾಯಿ)ಯನ್ನೂ ಪ್ರದಾನ ಮಾಡಿ ಇದನ್ನು ಬಾಹುಬಲಿಯ ಅಭಿಷೇಕದ ಕಲಶಕ್ಕೆ ಉಪಯೋಗಿಸಿರೆಂದು ಹೇಳಿ ಸಂತೋಷದಿಂದ ಪ್ರಸ್ಥಾನ ಮಾಡಿದರು. ಈ ಎಲ್ಲಾ ವೈಭವಗಳಿಗೆ ಪೂರ್ವಭಾವಿಯಾಗಿಯೇ ಮುನಿಶ್ರೀಯವರು ತಾವು ಡೆಲ್ಲಿ ಇಂದೂರುಗಳಲ್ಲಿರುವಾಗಲೇ ನಾನಾ ಮುಖದಿಂದ ಜನರಿಗೆ ಪ್ರಚೋದನೆ ಮಾಡಿ ಹುರಿದುಂಬಿಸಿ ಅವರಲ್ಲಿ ಉತ್ಸಾಹ, ತ್ಯಾಗಗಳು ಮೂಡುವಂತೆ ಮಾಡಿ ಶ್ರವಣಬೆಳಗೊಳ ಕ್ಷೇತ್ರಕ್ಕೆ ಸಹಸ್ರಾಬ್ದಿಯ ಮುಂಚಿತವಾಗಿಯೇ ಬಂದು ಶ್ರೀ ಬಾಹುಬಲಿ ಗೊಮ್ಮಟೇಶ್ವರನ ಸಹಸ್ರಾಬ್ದಿ ಮಹೋತ್ಸವದಲ್ಲಿ ಭಾಗಿಯಾದರು.

ಆ ಕಾಲದಲ್ಲಿ ಭಗವಂತನ ಆಶಯದಂತೆ ಜಾತಿ-ಮತ ಪಂಕ್ತಿಗಳಿಗೆ ಅವಕಾಶವಿರದ ಕಾರಣ ಸರ್ವಧರ್ಮದ ತ್ಯಾಗಿ ವೃಂದದವರೂ, ಮಹಾಪಂಡಿತರೂ, ಶ್ರೀಮಂತರೂ ಸಮಾನತೆಯಿಂದ ಇವರ ಸಾನ್ನಿಧ್ಯದಲ್ಲಿ ಒಂದೇ ವೇದಿಕೆಯ ಮೇಲೆ ಬಹು ಸಂಖ್ಯೆಯಲ್ಲಿ ಉಪಸ್ಥಿತರಾಗಿ ಏಕಮುಖದಿಂದ ಭಗವಂತನ ಗುಣಗಾನ ಮಾಡಿದರೆಂದರೆ ಇದರ ಹಿನ್ನಲೆ ಮುನಿಶ್ರೀಯವರದೆಂದೇ ಹೇಳಬೇಕಾಗಿದೆ. ವಿದೇಶೀಯರೂ ಬಹು ಸಂಖ್ಯೆಯಲ್ಲಿ ಬಂದು ಈ ಮಹೋತ್ಸವವನ್ನು ವೀಕ್ಷಿಸಿ ಆಶ್ಚರ್ಯಪರವಶರಾಗಿರುತ್ತಾರೆ. ಅಲ್ಲದೆ ಈ ಮಹೋತ್ಸವ ಕಾಲದಲ್ಲಿ ಕ್ಷೇತ್ರದ ಸೌಂದರ್ಯ ನೂರ್ಮಡಿಯಾಗಿ ಕೋಟ್ಯಂತರ ಧನರಾಶಿ ಧರ್ಮದ ಸಲುವಾಗಿ ವ್ಯಯವಾಗಿರುತ್ತದೆ. ಈ ಲಾಭ ನಿಜವಾಗಿಯೂ ಧರ್ಮ ಪ್ರಚಾರ ಪ್ರಸಾರಕ್ಕಾದ ಲಾಭವೆಂದೇ ತಿಳಿಯಬೇಕಾಗಿದೆ.

ಪೂಜಾ ಸಮಯದಲ್ಲಿ ಎಲ್ಲಾ ಧರ್ಮೀಯರೂ ಭಕ್ತಿ ಭಾವಗಳಿಂದ ಕೂಡಿ ಭಗವಂತನಿಗೆ ನಿರಾತಂಕವಾಗಿ ಅಭೀಷೇಕ ಮಾಡಿದರು. ಇದನ್ನು ಕಂಡು ಮುನಿಶ್ರೀಯವರು ಅತ್ಯಂತ ಆನಂದ ಪರವಶರಾಗಿ ವಿಶ್ವಧರ್ಮ ಪ್ರವರ್ತಕ ಶ್ರೀ ಬಾಹುಬಲಿ ಸ್ವಾಮಿ ಕೀ ಜೈ'ಯೆಂದು ಉದ್ಘೋಷಣೆ ಮಾಡಿದರು.

ವಿಚಾರ ಮಾಡುವುದಾದರೆ ಸಾಧು ಸಂತರಿಂದ ಧರ್ಮದ ಸಲುವಾಗಿ ಆಗದಿದ್ದ ಕಾರ್ಯಗಳೇ ಇರುವುದಿಲ್ಲ. ಅವರು ಒಂದು ವಿಧದಲ್ಲಿ ಕ್ರಾಂತಿಕಾರರೆಂದೇ ತಿಳಿಯಬೇಕು.

ಮುನಿವರ್ಯರು ಇಷ್ಟಕ್ಕೆ ತೃಪ್ತರಾಗದೆ ಬಹುಕಾಲದ ವರೆಗೂ ಜನತೆಗೆ ಅರಿವಾಗುವ ಸಲುವಾಗಿ ಈ ಮಹೋತ್ಸವದ ಛಾಯಾಚಿತ್ರ (ಫಿಲಂ)ವನ್ನು ನಿರ್ಮಾಣ ಮಾಡಿಸಿರಬೇಕೆಂದು ಪೂರ್ವಭಾವಿಯಾಗಿಯೇ ಸಮಿತಿಗೆ ಸೂಚಿಸಿದ್ದರ ಪರಿಣಾಮವಾಗಿ ಭ. ಬಾಹುಬಲಿಯ ಮಹಾಮಸ್ತಕಾಭಿಷೇಕ ಹಿಂದಿ ಭಾಷೆಯಲ್ಲಿ ಚಲನಚಿತ್ರ ನಯನ ಮನೋಹರವಾಗಿ ತಯಾರಾಗಿ ಈ ಮೊದಲೆ ಭಾರತದ ಅನೇಕ ಕಡೆ ಪ್ರದರ್ಶನಗೊಂಡಿದೆ. ಲಕ್ಷಾಂತರ ಜನರು ಇದರ ಲಾಭ ಪಡೆದರು. ಭ. ಬಾಹುಬಲಿಯ ಮಸ್ತ-

ಕಾಭಿಷೇಕ ನಿಜವಾಗಿಯೂ ಅವರ್ಣನೀಯವೆಂದೇ ಭಾವಿಸಬೇಕಾಗಿದೆ. ಧರ್ಮಸ್ಥಳದ ಬಾಹುಬಲಿಯ ಪ್ರತಿಷ್ಠಾಪನೆಗೆ ಮಾನ್ಯ ವೀರೇಂದ್ರ ಹೆಗ್ಗಡೆಯವರ ಪ್ರಾರ್ಥನೆಯಂತೆ ವಿಹಾರ ಮಾಡಿ ಆ ಕಾರ್ಯವನ್ನು ಯಶಸ್ವಿಗೊಳಿಸಿ ಕೀರ್ತಿಗಳಿಸಿದ ಮಹಾಮಹಿಮರು ಸಹ ಆಗಿರುತ್ತಾರೆ. ವಿಶೇಷ ಸಂಗತಿ ಈ ಮಹಾನ್ ಯೋಗಿಗೆ ಏಲಾಚಾರ್ಯ, ಉಪಾಧ್ಯಾಯ ಸಂತ ತ್ಯಾಗಿ ಶ್ರೇಷ್ಠ ಇತ್ಯಾದಿ ಉಪಮೆಗಳನ್ನು ಕೊಟ್ಟು ಜನತೆ ಭಕ್ತಿ ಭಾವಗಳಿಂದ ಗೌರವಿಸುತ್ತಿದೆ. ಇದು ಜನತೆಯು ಅವರಲ್ಲಿಟ್ಟ ಅಸಾಧಾರಣ ಭಕ್ತಿಯೇ ಸರಿ. ಈ ಸಂತ ತ್ಯಾಗಿಗಳು ನಮ್ಮೀ ಭಾರತಭೂಮಿಯಲ್ಲಿ ಜನಿಸಿ ಧರ್ಮ ರಕ್ಷಣೆಗಾಗಿಯೇ ತನ್ನ ಜೀವನವನ್ನು ಮುಡುಪಾಗಿಟ್ಟು ಶ್ರಮಿಸುತ್ತಲಿದ್ದಾರೆ. ಇವರ ಉಪದೇಶವು ಸರ್ವ ಧರ್ಮೀಯರಿಗೂ ಹಿತೋಪದೇಶವಾಗಿದೆ.

ಇವರ ಅಸ್ತಿತ್ವ ಭಾರತಕ್ಕೆ ಸೀಮಿತವಾಗದೆ, ವಿಶ್ವಕ್ಕೂ ಸಹ ಉಪಕಾರವಾಗಿದೆ. ಶ್ರೇಷ್ಠತಮ ಇಂತಹ ತ್ಯಾಗಿ ಶಿರೋಮಣಿಯ 60ನೇ ವರ್ಷದ ಜಯಂತಿಯು ಭಾರತದ ಎಲ್ಲೆಡೆ ನಡೆಯಲು ಸಿದ್ಧವಾಗುತ್ತಲಿದೆ. ಈ ಸುಸಂದರ್ಭದಲ್ಲಿ ಅವರಿಂದ ಉಪಕೃತರಾದ ಭಾಗ್ಯವಂತರಾದ ನಾವೆಲ್ಲರೂ ಅವರಿಗೆ ಮಂಗಲ ಕಾಮನೆ (ಶುಭವನ್ನು) ಕೋರುವುದು ಅತ್ಯಗತ್ಯ. ಭಗವಂತನು ಅವರಿಗೆ ಶತಾಯುವನ್ನು ಕರುಣಿಸಲಿ ಕಾರಣ ಅವರಿಂದ ಇನ್ನು ಹೆಚ್ಚಾಗಿ ಧರ್ಮ ಕ್ರಾಂತಿ ಕಾರ್ಯಗಳಾಗಬೇಕಾಗಿವೆ. ಅವರನ್ನು ನೋಡುವ ಭಾಗ್ಯ ಉಭಯರಿಗೂ ಲಭಿಸಲೆಂದು ಭಾವಿಸಿ ವಿಶ್ರಾಂತಿ ಪಡೆಯುತ್ತೇನೆ.

ವರ್ಧತಾಂ ಜಿನಶಾಸನಂ



**ವಿದ್ಯಾನಂದ ವಾಣಿ**

## ಧೂಪಂ ದಹತಿ ಪಾಪಾನಿ

**ಧೂಪವನ್ನು ಬೆಂಕಿ ಮೇಲೆ ಹಾಕಿದರೆ ಅದೂ ಸುಗಂಧವಾಗುವುದು. ಪರಿಮಳ ಹರಡುವುದು. ಧೂಪವನ್ನು ಸುಟ್ಟು ನಾವು ಹಾಳು ಮಾಡಿರುವೆವು. ಆದರೆ ಕರ್ಮಗಳನ್ನು ನಾವು ಸುಡಲಿಲ್ಲ. ದುಡ್ಡು ಕೊಟ್ಟು ಪೇಟೆಯಿಂದ ತರುವುದು, ಅದನ್ನು ಸುಡುವುದು. ಧೂಪ ಹೇಗೆ ಸುಡುತ್ತದೋ ಅದೇ ಪ್ರಕಾರ ಕರ್ಮಗಳೆಲ್ಲ ಸುಟ್ಟು ಹೋಗಲಿ ಎಂಬ ಪ್ರತೀಕವಾಗಿ ಧೂಪಾರಾಧನೆ.**



# ನಾನು ಗಣಧರನಾದಾಗ...

ಲೇಖಕರು: ಜಿ. ಬ್ರಹ್ಮಪ್ಪ, ಎಂ.ಎ., ಮೈಸೂರು.

ಪರಮಪೂಜ್ಯ ಏಲಾಚಾರ್ಯ ವಿದ್ಯಾನಂದರನ್ನು ಕರ್ನಾಟಕಕ್ಕೆ ಆಹ್ವಾನಿಸಲು ಇಲ್ಲಿಂದ ಹೋದ ಭವ್ಯ ಸಂಕುಲದಲ್ಲಿ ನಾನೂ ಸೇರಿದ್ದೆ. 1978 ಡಿಸೆಂಬರಿನಲ್ಲಿ ದೆಹಲಿ ಮಹಾನಗರದಲ್ಲಿ ಮಹಾಮುನಿಗಳನ್ನು ಭಕ್ತಿಯಿಂದ ನಾವುಗಳು ಕರ್ನಾಟಕಕ್ಕೆ ಕರೆದೆವು. 'ಪಂಪನ ಆದಿಪುರಾಣವನ್ನು ಕೇಳುವ ಆಸೆಯಾಗುತ್ತಿದೆ' ಎಂದು ಏಲಾಚಾರ್ಯರು ತಮ್ಮ ಅಪೇಕ್ಷೆಯನ್ನು ತಿಳಿದರು. 'ತಾವು ಕರ್ನಾಟಕಕ್ಕೆ ಬಂದಾಗ ನಾನು ತಮ್ಮ ಬಳಿಯೇ ನಿಂತು ಆದಿಪುರಾಣವನ್ನು ತಮ್ಮ ಸನ್ನಿಧಿಯಲ್ಲಿ ಓದುವೆನು ಎಂದು ನಾನು ತಿಳಿಸಿದೆನು. ಅಂದು ಸ್ವಾಮಿಗಳಿಗೆ ಆದ ಸಂತೋಷ ಅಷ್ಟಿಷ್ಟಲ್ಲ.

1979ರಲ್ಲಿ ಏಲಾಚಾರ್ಯರು ಇಂದೂರಿನಲ್ಲಿ ಚಾತುರ್ಮಾಸ ಮಾಡುತ್ತಿದ್ದರು. ಮತ್ತೊಮ್ಮೆ ಕರ್ನಾಟಕದಿಂದ ಒಂದು ತಂಡ ಮಹಾಸ್ವಾಮಿಗಳನ್ನು ಕಂಡು ಮತ್ತೊಮ್ಮೆ ಕರ್ನಾಟಕದ ಕಡೆ ಅವರ ಗಮನ ಸೆಳೆಯಲು ಇಂದೂರಿಗೆ ಹೊರಟಿತು. ಈ ಗುಂಪಿ ನಲ್ಲಿ ನಾನೂ ಇದ್ದೆನು, ಶ್ರೀ ಏಲಾಚಾರ್ಯರು ಮತ್ತೊಮ್ಮೆ ಪಂಪನ ಆದಿಪುರಾಣ ವನ್ನು ಜ್ಞಾಪಿಸಿಕೊಂಡರು. ಶ್ರವಣಬೆಳಗೊಳಕ್ಕೆ ಬಂದಾಗ ನೀವೂ ನನ್ನೊಡನೆ ಇದ್ದು ಪಂಪನ ಆದಿಪುರಾಣವನ್ನು ಆಮೂಲಾಗ್ರವಾಗಿ ನನ್ನ ಕಿವಿಗೆ ಹಾಕಿ ಬಿಡಿ. ಕನ್ನಡಿಗನಾಗಿ ನಾನು ಹುಟ್ಟಿದ್ದಕ್ಕೆ ಸಾರ್ಥಕವಾಗುವುದು ಎಂದು ಸ್ವಾಮಿಗಳು ಆದೇಶ ವಿತ್ತರು. 'ಆಗಬಹುದು ಸ್ವಾಮಿ' ಎಂದು ನಾನು ಒಪ್ಪಿಕೊಂಡೆನು.

1980ರಲ್ಲಿ ಶ್ರೀ ಏಲಾಚಾರ್ಯರು ಕರ್ನಾಟಕಕ್ಕೆ ಬಂದು ದಾವಣಗೆರೆಯಲ್ಲಿ ತಂಗಿದ್ದರು. ಆಗ ನಾನು ದರ್ಶನ ಮಾಡಲು ಹೋಗಿದ್ದೆನು. ನನ್ನನ್ನು ಕಂಡ ಕೂಡಲೇ 'ನೀವು ಬಂದುದು ಒಳ್ಳೆಯದಾಯಿತು. ಪಂಪನ ಆದಿಪುರಾಣವನ್ನು ಕೇಳುವುದಕ್ಕಾಗೇ ನಾನು ಇತ್ತ ಬಂದಿರುವೆನು' ಎಂದು ನನ್ನನ್ನು ಎಚ್ಚರಿಸಿದರು. 'ಸ್ವಾಮಿ, ತಾವು ಶ್ರವಣಬೆಳಗೊಳಕ್ಕೆ ಬರುವ ಹೊತ್ತಿಗೆ ನಾನೂ ಅಲ್ಲಿಗೆ ಬರುವೆನು. ತಪ್ಪದೆ ಆದಿಪುರಾಣವನ್ನು ತಮ್ಮ ಮುಂದೆ ಓದುವೆನು' ಎಂದು ಮಾತುಕೊಟ್ಟೆನು.

ಶ್ರೀ ಏಲಾಚಾರ್ಯರು ಕರ್ನಾಟಕಕ್ಕೆ ಪ್ರವೇಶ ಮಾಡುತ್ತಿದ್ದಂತೆ ನಾನು ಬರೆ ದಿದ್ದ 'ಮುನಿ ವಿದ್ಯಾನಂದ' ಜೀವನ ಚರಿತ್ರೆ ಪ್ರಕಾಶವಾಯಿತು. ಮುನಿಗಳು ಪಾದ ಬೆಳೆಸಿದಂತೆ ಈ ಕೃತಿಯೂ ಜನರ ಕೈಸೇರಿ ಒಂದು ರೀತಿ ಉತ್ಸಾಹವ ತೆರೆಯುತ್ತಿತು. ಮುನಿಶ್ರೀಗಳನ್ನು ಕರ್ನಾಟಕಕ್ಕೆ ಕರೆದು ತಂದ ಭವ್ಯ ರತ್ನತ್ರಯದಲ್ಲಿ ಶ್ರೀ ಎಂ. ಸಿ. ಅನಂತರಾಜಯ್ಯನವರು ಸಮ್ಯಗ್ದರ್ಶನವಿದ್ದಂತೆ, ಶ್ರೀ ವೀರೇಂದ್ರ ಹೆಗ್ಗಡೆಯವರು ಸಮ್ಯಗ್ಜ್ಞಾನವಿದ್ದಂತೆ, ಮೂಡುಬಿದ್ರಿಯ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕರು ಸಮ್ಯಗ್‌ಚಾರಿತ್ರವಿದ್ದಂತೆ! ಈ ಭವ್ಯ ರತ್ನತ್ರಯರ ಅಭೀಪ್ಸೆಯಿಂದ ಶ್ರೀ ಏಲಾ-ಚಾರ್ಯರು ಕರ್ನಾಟಕಕ್ಕೆ ಬಂದರೆಂದರೆ ಅತಿಶಯೋಕ್ತಿಯಾಗಲಾರದು.

ಮಾತೃಶ್ರೀ ರತ್ನಮ್ಮನವರಿಗೂ ಇವರ ಸೊಸೆ ಶ್ರೀಮತಿ ಹೇಮಾವತಿಯವರಿಗೂ

ಪ್ರವಾದಿಗಳಾದ ಶ್ರೀ ಏಲಾಚಾರ್ಯರ ಚಾತುರ್ಮಾಸದ ಪ್ರವಚನವನ್ನು ಪುಸ್ತಕ ರೂಪವಾಗಿ ಸಂಗ್ರಹಿಸುವ ಪ್ರವಚನ ವಾತ್ಸಲ್ಯವುಂಟಾಯಿತು. ಇವರ ಅಪೇಕ್ಷೆಯನ್ನು ನೆರವೇರಿಸಲು ಶ್ರೀ ವೀರೇಂದ್ರ ಹೆಗ್ಗಡೆಯವರು ನನ್ನನ್ನು ಕರೆಸಿಕೊಂಡು ಮುನಿಗಳ ಪ್ರವಚನವನ್ನು ಸಂಗ್ರಹಿಸಲು ಆದೇಶವಿತ್ತರು. ನಾನು ಸಂಗ್ರಹಿಸಿದ ಚಾತುರ್ಮಾಸ ಪ್ರವಚನವನ್ನು ಶ್ರೀ ವೀರೇಂದ್ರ ಹೆಗ್ಗಡೆಯವರು 'ವಿದ್ಯಾನಂದ ವಾಣಿ' ಎಂದು ಎರಡು ಭಾಗವಾಗಿ ಪ್ರಕಟಿಸಿರುವರು. ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದಂತಾಯಿತು! ಹೇಗೂ ಆದಿ ಪುರಾಣವನ್ನು ಓದಲು ಸ್ವಾಮಿಗಳ ದಿವ್ಯ ಸನ್ನಿಧಿಯಲ್ಲಿ ನಾನು ತಂಗಲೇ ಬೇಕಾಗಿದ್ದಿತು. ಈಗ ಇನ್ನೊಂದು ಮಹತ್ಕಾರ್ಯ ನನ್ನ ಹೆಗಲ ಮೇಲೆ ಬಿದ್ದಂತಾಗಿ ಗಾಳಿಗೆ ಗರಿ ಮೂಡಿದಂತಾಯಿತು.

1980 ಜುಲೈ ತಿಂಗಳ ಕೊನೆಯ ಭಾಗದಲ್ಲಿ ಶ್ರೀ ಏಲಾಚಾರ್ಯರು ಶ್ರವಣಬೆಳಗೊಳಕ್ಕೆ ಆಗಮಿಸಿದರು. ನಾನೂ ಶ್ರವಣಬೆಳಗೊಳಕ್ಕೆ ಧಾವಿಸಿದೆನು. ದಿನವೂ ಸ್ವಾಮಿಗಳ ಪ್ರವಚನ ಧಾರೆಯನ್ನು ಟೇಪ್‌ರೇಕಾರ್ಡ್ ಮಾಡಿಕೊಂಡು ಅಂದಂದಿನ ಪ್ರವಚನವನ್ನು ಅಂದಂದೇ ಬರೆದಿಟ್ಟೆನು. ದಿನವೂ ಮಧ್ಯಾಹ್ನ 1 ಘಂಟೆಯಿಂದ 2 ಘಂಟೆಯ ತನಕ ಪಂಪನ ಆದಿ ಪುರಾಣವನ್ನು ಏಲಾಚಾರ್ಯರಿಗೆ ಪರಿಚಯ ಮಾಡಿಕೊಡುತ್ತಾ ಬಂದೆನು. ಸ್ವಾಮಿಗಳು ಮೈಯೆಲ್ಲಾ ಕಿವಿಯಾಗಿ, ಮೈಯೆಲ್ಲಾ ಮನಸಾಗಿ ಪಂಪನನ್ನು ಬಾಚಿ ಬಾಚಿ ತುಂಬಿಕೊಂಡರು. ರೋಮಾಂಚನಗೊಂಡು ಪಂಪನ ವಾಣಿಯನ್ನು ಆಲಿಸಿದರು. ಸಹೃದಯರಾಗಿ ಪಂಪನ ಪೆಂಪನ್ನು ಸವಿದರು.

ಕೆಲವು ದಿನ ಸ್ವಾಮಿಗಳು ದೊಡ್ಡ ಬೆಟ್ಟದ ಗುಹೆಗಳಲ್ಲಿ ಸಾಮಾಯಿಕಕ್ಕೆ ಹೋಗುತ್ತಿದ್ದರು. ನಾನು ಬೆನ್ನು ಹತ್ತಿದ ಬೇತಾಳನಾಗಿ ಅಲ್ಲಿಗೂ ಆದಿ ಪುರಾಣದೊಡನೆ ಹೋಗಿ ಪ್ರಕೃತಿಯ ಮಡಿಲಲ್ಲೇ ಕುಳಿತು ಪಂಪನನ್ನು ಪ್ರಾರಂಭಿಸುತ್ತಿದ್ದೆನು. ಶ್ರೀ ಏಲಾಚಾರ್ಯರು ಚಾತುರ್ಮಾಸ ಮುಗಿಸಿ ಕಂಬದ ಹಳ್ಳಿಗೆ ಹೋದಾಗ, ಅಲ್ಲಿಂದ ದಡಕ್ಕೆ ಹೋದಾಗ ನಾನೂ ಸ್ವಾಮೀಜಿಯನ್ನು ಹಿಂಬಾಲಿಸಿ ಆದಿ ಪುರಾಣವನ್ನು ತಪ್ಪದೆ ಓದಿದೆನು.

ಸುಮಾರು 8 ತಿಂಗಳಲ್ಲಿ ಆದಿ ಪುರಾಣ ಮುಗಿಯಿತು. ಅಂದು ಶ್ರೀ ಏಲಾ-ಚಾರ್ಯರು ತುಂಬ ಪ್ರಸನ್ನರಾಗಿದ್ದರು. 'ಬ್ರಹ್ಮಪ್ಪನವರೇ, ನಿಮ್ಮ ಉಪಕಾರವನ್ನು ನಾನು ಮರೆಯಲಾರೆ. ನಾನು ಕನ್ನಡಿಗನಾಗಿ ಹುಟ್ಟಿದುದು ಈಗ ಸಾರ್ಥಕವಾಯಿತು. ಪಂಪ ಮಹಾಕವಿ ಆದಿ ಪುರಾಣ ಸೊಗಸಾದ ಕಾವ್ಯ. ಜಿನ ಧರ್ಮ ಮತ್ತು ಕಾವ್ಯ ಧರ್ಮಗಳನ್ನು ಕವಿಯು ಸಮಪಾಕಗೊಳಿಸಿರುವನು. ನನಗೆ ಆನಂದವಾಯಿತು. ನಿಮಗೆ ಪ್ರತ್ಯುಪಕಾರವೇನು ಮಾಡಲಿ? ನಿಮಗೇನು ಬೇಕು?' ಎಂದು ಸ್ವಾಮೀಜಿಯವರು ನನ್ನನ್ನು ಕೇಳಿದಾಗ ನನಗೇನು ಬೇಕೋ ತೋಚದೆ ಒದ್ದಾಡಿದೆನು. 'ಒಂದು ಮನೆ ಕೇಳಲೆ? ಒಂದು ಲಕ್ಷ ರೂಪಾಯಿ ಕೇಳಲೆ?' ಎಂದು ಅಂತರಂಗದಲ್ಲಿ ಆಶಾ ಸರ್ಪ ಹೆಡೆ ಬಿಚ್ಚಿತು. ಒಂದೆರಡು ನಿಮಿಷ ಆ ಸರ್ಪ ನನ್ನನ್ನು ಆಕ್ರಮಿಸಲು ಉತ್ಸಾಹಗೊಂಡಿತು. ಇದ್ದಕ್ಕಿದ್ದಂತೆ ಯಾವುದೋ ಒಂದು ಮಿಂಚು ಒಳಗೆ ಮಿಂಚಿತು. ಒಂದು ತೀರ್ಮಾನಕ್ಕೆ ಬಂದೆನು. 'ಸ್ವಾಮೀಜಿ, ತಾವು ಅನುಗ್ರಹಿಸಲು ತವಕ ಪಡುತ್ತಿರು

ವಿರಿ. ನಾನು ಕೇಳಿದ್ದನ್ನು ತಪ್ಪದೆ ಕೊಡಬೇಕು. ಈ ಭರವಸೆ ಮೊದಲು ಕೊಡಿ. ಅನಂತರ ಕೇಳುವೆನು. ನಾನು ಕೇಳುವುದು ತಾವು ಆಗುವುದಿಲ್ಲ ಎನ್ನುವುದು ಆಗಬಾರದಲ್ಲ' ಎಂದು ನಾನು ತಿಳಿಸಿದಾಗ ಶ್ರೀ ವಿಳಾಚಾರ್ಯರು ಕ್ಷಣಕಾಲ ಮೌನಿಯಾದರು. ಯಾವುದೋ ಚಿಂತೆಗೆ ಸಿಕ್ಕಿದಂತೆ ಕ್ಷಣಕಾಲವೇನೂ ತೋಚದವರಂತೆ ಕುಳಿತರು. ಸ್ವಾಮೀಜಿಯವರ ಸನ್ನಿಧಿಯಲ್ಲಿ ಉತ್ತರ ಭಾರತದ ಕೆಲವು ಕುಬೇರರು ಕುಳಿತಿದ್ದರು. ಅವರೂ ಈ ಸಂದಿಗ್ಧ ಪರಿಸ್ಥಿತಿಗೆ ಕಾರಣವೇನೆಂದು ಸ್ವಾಮೀಜಿಯವರನ್ನು ಬೆಸಗೊಂಡರು. ಇವರು ಹಿಂದಿಯಲ್ಲಿ ಎಲ್ಲವನ್ನೂ ವಿವರಿಸಿದರು. ಕುಬೇರರ ಮುಖದಲ್ಲಿ ಸಾತ್ವಿಕ ಕೆಚ್ಚು ಮೂಡಿತು, ಔದಾರ್ಯದ ಮಿಂಚು ತುಳುಕಿತು.

'ಮಹಾರಾಜ್, ಇವರೇನು ಬೇಕಾದರೂ ಕೇಳಲಿ ಕೊಡುವೆವು' ಎಂದು ಕುಬೇರರು ತಿಳಿಸಿದರು.

'ಬ್ರಹ್ಮಪ್ಪ, ನಿನ್ನ ಭಾಗ್ಯದ ಬಾಗಿಲು ತೆರೆಯಿತು. ಏನು ಬೇಕೋ ಕೇಳಿ ಬಿಡಿ. ಇಂಥ ಅವಕಾಶ ಪದೇ ಪದೇ ಬರುವುದಿಲ್ಲ' ಎಂದು ನಗುತ್ತಾ ನನಗೆ ಪ್ರೋತ್ಸಾಹ ಕೊಟ್ಟರು.

'ಸ್ವಾಮೀಜಿ, ಪಂಪ ಮಹಾ ಕವಿ ಹೇಳಿರುವನು. 'ಪೆರರೀವುದೇಂ? ಪೆರರು ಪಾಳ್ವುದೇಂ? ಪೆರರಿಂದ ಮಪ್ಪುದೇಂ? ಜಿನೇಂದ್ರ ಸ್ತುತಿಯಿಂ ತಾಮೇ ಸಾರವೇ!' ನನಗೆ ಪಂಪನ ಈ ಉದ್ಗಾರದ ದರ್ಶನವಾಗಿದೆ. ತಾವು ಮೋಕ್ಷ ಮಾರ್ಗದಲ್ಲಿ ಹೋಗುತ್ತಿರುವಿರಿ. ವಿಶ್ವಾನುಕಂಪದಿಂದ ಪರಿತಪಿಸುತ್ತಿರುವಿರಿ. ತಮಗೆ ತೀರ್ಥಂಕರ ನಾಮ ಕರ್ಮ ಕಟ್ಟುವುದರಲ್ಲಿ ಸಂದೇಹವಿಲ್ಲ. ತಾವು ಎಂದಾದರೂ ತೀರ್ಥಂಕರರಾಗಿರಿ. ಯಾವ ಜನ್ಮದಲ್ಲಾದರೂ ಆಗಿರಿ. ಅಲ್ಲಿಯ ತನಕ ನಾನು ಕಾಯುವೆನು. ತಾವು ತೀರ್ಥಂಕರರಾದಾಗ ನನ್ನನ್ನು ಪ್ರಥಮ ಗಣಧರನನ್ನಾಗಿ ನೇಮಿಸಿಕೊಂಡು ಬಿಡಿ. ನನ್ನ ಪ್ರಾರ್ಥನೆ ಇಷ್ಟೇ!' ಎಂದು ನಾನು ವಿನಂತಿಸಿ ಕೊಂಡೆನು.

ನನ್ನ ಮಾತು ಮುಗಿಯುತ್ತಿದ್ದಂತೆ ಸ್ವಾಮೀಜಿಯವರ ಕಣ್ಣಲ್ಲಿ ಸಮವಸರಣ ನೆರೆದಂತಾಯಿತು. ಅವರ ಮುಖದಲ್ಲಿ ಮೋಕ್ಷ ದ್ವಾರ ತೆರೆದಂತಾಯಿತು. ಭಗವದ್ ಭಾವಾವೇಶವನ್ನು ಹಿಡಿತದಲ್ಲಿಟ್ಟುಕೊಳ್ಳಲಾರದೆ ಶ್ರೀ ವಿದ್ಯಾನಂದರು ಕ್ಷಣಕಾಲ ಹಾರಾಡುವಂತೆ ಉತ್ಸಾಹಿಗಳಾದರು. ಅನಂತರ ಭೂಮಿಗೆ ಬಂದರು.

'ಬ್ರಹ್ಮಪ್ಪ, ನಿಮಗೆ ವಿವೇಚನೆ ಕಡಿಮೆ. ಈಗ ಒಂದು ಮನೆಯನ್ನಾದರೂ ಮಾಡಿಕೊಳ್ಳಿ' ಎಂದು ತಿಳಿಸಿದರು.

'ಸ್ವಾಮಿ, ತಾವು ಅಪರಿಗ್ರಹಿಗಳು. ತಮ್ಮಲ್ಲೇನು ಬೇಡಬಹುದೋ ಅದನ್ನು ಮಾತ್ರ ಬೇಡುವೆನು. ಮನೆ ಬೇಕಾದಲ್ಲಿ ಯಾರನ್ನಾದರೂ ಶ್ರೀಮಂತರನ್ನು ಕೇಳುವೆನು. ಆದರೆ ಗಣಧರ ಪದವಿಯನ್ನು ಯಾವ ಶ್ರೀಮಂತರೂ ಕೊಡಲಾರರು. ಅದನ್ನು ತಮ್ಮಂಥವರ ಅನುಗ್ರಹದಿಂದಲೇ ಪಡೆಯಬೇಕು. ನಾನು ಈಗಾಗಲೆ ಅನಧಿಕೃತವಾಗಿ ಗಣಧರನ ಕಾರ್ಯ ಮಾಡುತ್ತಿರುವೆನು. ತಮ್ಮ ವಾಣಿಯನ್ನು ಜನ ಸಾಮಾನ್ಯರ

ಬಳಿಗೆ ಹರಿಸಲು ನಾನಾಗಲೇ ಕಾರ್ಯ ಮಾಡುತ್ತಿರುವೆನು. ಈಗ ಅದನ್ನು ತಾವು ಅಧಿಕೃತಗೊಳಿಸಿ ನನ್ನನ್ನು ಗಣಧರ ಎಂದು ಘೋಷಿಸಬೇಕಾಗಿದೆ' ಎಂದು ನಾನು ನಿವೇದಿಸಿಕೊಂಡೆನು. ಈ ಘಟನೆ ಕಳೆದ ಮೇಲೆ ನನ್ನ ಮುಖವನ್ನು ಶ್ರೀ ಏಲಾ-ಚಾರ್ಯರು ಯಾವಾಗ ಕಂಡರೂ ಬನ್ನಿ ಗಣಧರರೇ ಎಂದು ಹೇಳಿ ಸುತ್ತಮುತ್ತ ಇರುವವರನ್ನು ಚಕಿತಗೊಳಿಸುತ್ತಿರುವರು.



ವಿದ್ಯಾನಂದ ವಾಣಿ

## ಅಕ್ಷತಂ ಶತ್ರು ನಾಶಾಯ

ಅಕ್ಷತೆ ಏನಿದೆ ಅದು ಶುಭವಿದೆ; ಸತ್ಯವಿದೆ; ಅಖಂಡವಿದೆ. ನನ್ನ ಕರ್ಮ ಶತ್ರುಗಳೆಲ್ಲ ದೂರ ಆಗಲಿ, ಅವುಗಳಿಂದ ಬಿಡುಗಡೆಯಾಗಲಿ ಅಂತ ನಾನು ಪವಿತ್ರವಾದ ಅಕ್ಷತೆಯನ್ನು ಪರಮಾತ್ಮನಿಗೆ ಏರಿಸುವೆನು. ಏಕೆಂದರೆ ಎಲ್ಲಾ ಶುಭ ಕಾರ್ಯಗಳಲ್ಲೂ ನೀವು ಅಕ್ಷತೆ ಕೊಡುತ್ತೀರಿ. ಲಗ್ನದಲ್ಲೂ ಅಕ್ಷತೆ ಕೊಡುವಿರಿ. ಅಕ್ಷತೆ ಸ್ವಚ್ಛವಿದೆ. ನನ್ನ ಆತ್ಮದಲ್ಲಿನ ಮಲಿನ ಕರ್ಮಗಳು ತೊಲಗಲಿ ಎಂಬ ಪರಿಣಾಮದಿಂದ ಅಕ್ಷತೆಯನ್ನು ಅರ್ಪಿಸುವೆವು.

## ಪೂಜೆಯ ಅಂತರಾರ್ಥ

ಅಂತರಂಗದಲ್ಲಿ ನಮ್ಮ ಪರಿಣಾಮಗಳನ್ನು ಶುಚಿಮಾಡುವುದಕ್ಕೋಸ್ಕರ ಪೂಜೆ ಮಾಡಬೇಕು. ಸಂಸಾರೀ ವಸ್ತುಗಳಿಗಾಗಿ ಪೂಜೆ ಮಾಡಬಾರದು. ರತ್ನದ ಅಂಗಡಿಗೆ ಹೋಗಿ ಗಾಜು ಬೇಡಿದರೆ ಅವನೆಂಥ ಅಜ್ಞಾನಿ? ಹಾಗೆಯೇ ಬಂಗಾರದ ಅಂಗಡಿಗೆ ಹೋಗಿ ನೀವು ಕಬ್ಬಿಣ ಬೇಡಿದರೆ ಹೇಗೆ? ಪವಿತ್ರನಾದ ಭಗವಂತನ ಹತ್ತಿರ ಹೋಗಿ ನಮ್ಮ ಆತ್ಮ ಕಲ್ಯಾಣವಾಗಲಿ, ಮೋಕ್ಷ ಸಿಗಲಿ ಎಂದು ನಾವು ಪೂಜೆ ಮಾಡಬೇಕು.

# ಪ. ಪೂ. ವಿದ್ಯಾನಂದರ ಮೃದು - ಮಧುರ - ಗಂಭೀರ ಶೈಲಿ

ಲೇಖಕರು:
ಎಸ್. ಪಿ. ಪಾಟೀಲ, 'ಫಸಲ' ನಿರ್ಮಲನಗರ, ಧಾರವಾಡ - 3.

ಪರಮಪೂಜ್ಯ ಏಲಾಚಾರ್ಯ ಮುನಿಶ್ರೀ ವಿದ್ಯಾನಂದ ಮಹಾರಾಜರು ಹಿರಿಯ ಚಿಂತಕರು, ಪ್ರಭಾವಿ ಪ್ರವಚನಕಾರರು, ಶೇಡಬಾಳದವನಾದ ನನಗೆ ಬಾಲ್ಯದಲ್ಲಿಯೇ ಅವರನ್ನು ನೋಡುವ, ಕೇಳುವ ಅವಕಾಶ ಪ್ರಾಪ್ತವಾದುದು ಪುಣ್ಯ ವಿಶೇಷ. ಆಗಿನ್ನೂ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದ ನಮಗೆ ಶ್ರೀ ಶಾಂತಿಸಾಗರ ಆಶ್ರಮದ ವಿದ್ಯಾರ್ಥಿಗಳ ಶಿಸ್ತು, ಸಂಯಮ, ಅಚ್ಚುಕಟ್ಟುತನಕ್ಕೆ ಕಾರಣರಾದ ಅಂದಿನ ಪೂಜ್ಯ ಪಾರ್ಶ್ವಕೀರ್ತಿಗಳ ಬಗೆಗೆ ತಿಳಿದಿತ್ತು. ಒಂದು ಸಲ ಮಹಾವೀರ ಜಯಂತಿಯ ಉತ್ಸವದ ನಿಮಿತ್ತ ಹಲವಾರು ಹೊಸ ಉಪಕ್ರಮಗಳನ್ನು ಅವರು ಜಾರಿಯಲ್ಲಿ ತಂದಿದ್ದರು. ಪ್ರತಿ ವರ್ಷ ಕೇವಲ ಅಭಿಷೇಕಕ್ಕೆ ಮಾತ್ರ ಸೀಮಿತವಾಗಿದ್ದ ಕಾರ್ಯಕ್ರಮಗಳನ್ನು ಮಹಾವೀರರ ದೊಡ್ಡ ಭಾವಚಿತ್ರದ ಮೆರವಣಿಗೆ, ವಿದ್ಯಾರ್ಥಿಗಳಿಂದ ನಾಟಕ, ಸಂಗೀತ, ವಿನೋದ ಆಟ–ಪಾಟ ಹಾಗೂ ಉಪನ್ಯಾಸಗಳೂ ಒಳಗೊಳ್ಳುವಂತೆ ಮಾಡಿದವರು ಅವರೇ ಆಗಿದ್ದರು. ಅಂದಿನ ರಾತ್ರಿ ಶಾಂತಿನಾಥ ಮಂದಿರದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಅವರು ನೀಡಿದ ಉಪನ್ಯಾಸ ನನ್ನ ಬಾಲ್ಯ ಮನದಲ್ಲಿ ಅಚ್ಚಳಿಯದೇ ಉಳಿಯುವಂತಾಯಿತು. ಜೈನ ಧರ್ಮದ ತತ್ವಗಳನ್ನೂ, ಉದಾತ್ತತೆಯನ್ನೂ ವಿವರವಾಗಿ ನಿರೂಪಿಸಿದುದಲ್ಲದೆ ಸ್ಯಾದ್ವಾದವನ್ನು ವಿವರಿಸುತ್ತ ಅವರು ಅಂದು ಹೇಳಿದ ಏಳು ಜನ ಕುರುಡರು ವರ್ಣಿಸಿದ ಆನೆಯ ವರ್ಣನೆಯ ದೃಷ್ಟಾಂತವು ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತಾಗುವುದು. ಆಬಾಲವೃದ್ಧರೂ ತಿಳಿಯುವ ರೀತಿಯಲ್ಲಿ ಉಪನ್ಯಾಸ ನೀಡುವ ಕಲೆ ಪೂಜ್ಯ ವಿದ್ಯಾನಂದರದಾಗಿದೆ. ಮುಂದೆ ಭ. ಮಹಾವೀರರ 2500ನೆಯ ನಿರ್ವಾಣ ಮಹೋತ್ಸವವನ್ನು ಯಶಸ್ವಿಯಾಗಿ ಜಾರಿಗೊಳಿಸುವ ಯೋಜನೆಯನ್ನು ರೂಪಿಸಿದ ಅವರಲ್ಲಿ ಆಗಲೇ ಅದು ಬೀಜ ರೂಪದಲ್ಲಿದ್ದುದಾಗಿ ಭಾಸವಾಗುತ್ತದೆ.

ಮುಂದೆ ಅನೇಕ ವರ್ಷಗಳವರೆಗೆ ಉತ್ತರ ಭಾರತದಲ್ಲಿಯೇ ಅವರ ವಿಹಾರ ಸಾಗಿದುದರಿಂದ ಅವರ ಪ್ರವಚನವನ್ನು ಕೇಳುವ ಅವಕಾಶ ಪ್ರಾಪ್ತವಾಗಲಿಲ್ಲ. ಆದರೆ 1969ರಲ್ಲಿ ನಾನು ಕರ್ನಾಟಕ ವಿಶ್ವವಿದ್ಯಾನಿಲಯದ ಜೈನ ಸಾಹಿತ್ಯ ಸಂಶೋಧನೆಯ ಕಾರ್ಯಕ್ಕಾಗಿ ಧಾರವಾಡಕ್ಕೆ ಹೊರಡುವಾಗ ಸ್ನೇಹಿತರಾದ ಶ್ರೀ ಶಾಂತ ಗೌಡರು ತಮ್ಮಲ್ಲಿದ್ದ ಮುನಿಶ್ರೀ ವಿದ್ಯಾನಂದರ 'ಮಹಾವೀರ ಭಕ್ತಿಗಂಗಾ' ಹಿಂದಿ ಪುಸ್ತಕವನ್ನು ನನಗೆ ಕೊಟ್ಟರು. ಅದರ ಕೆಂಪು ವೆಲ್‌ವೆಟ್ ಹೊದಿಕೆ, ಶುಭ್ರ ಹಾಳೆ, ಆಕರ್ಷಕ ಮುದ್ರಣ, ಬೈಂಡು ಇವೆಲ್ಲ ಮೊದಲ ನೋಟಕ್ಕೆ ನನ್ನನ್ನು ಆಕರ್ಷಿಸಿದವು. ಹೊಸ ಕೆಲಸದೊಂದಿಗೆ ಹೊಂದಿಕೊಳ್ಳುವುದರಲ್ಲಿ ಕೆಲವು ಸಮಯ ಕಳೆದ ಮೇಲೆ ಈ ಕೃತಿಯನ್ನು ಓದಲು ಕೈಗೆತ್ತಿಕೊಂಡೆ. ಹಿಂದಿ ಭಾಷೆಯ ಕೃತಿಯಾದರೂ ಅರ್ಥವಾಗಲು ಕಷ್ಟವಾಗಲಿಲ್ಲ. ಅಲ್ಲದೆ ಅವರ ನಿರೂಪಣಾಕ್ರಮ ನನ್ನನ್ನು ಸೆರೆ ಹಿಡಿಯಿತು. ಆಗ

ಅದನ್ನು ಕನ್ನಡಕ್ಕೆ ಅನುವಾದಿಸಲು ಪ್ರಯತ್ನಿಸಬೇಕೆಂಬ ಇಚ್ಛೆ ತೀವ್ರವಾಗಿ ಆ ಕಾರ್ಯಕ್ಕೆ ಕೈ ಹಾಕಿದೆ. ಅನುವಾದ ಕಾರ್ಯಕ್ಕೆ ಮುನಿಶ್ರೀ ಅವರ ಅನುಮತಿಯನ್ನೂ ಆಶೀರ್ವಾದವನ್ನು ಪಡೆದೆ. ಮೊದಲು ಕ್ರಮಶಃ ಸನ್ಮತಿ ಮಾಸಪತ್ರಿಕೆಯಲ್ಲಿ[1], ಮುಂದೆ 1975ರಲ್ಲಿ ಪುಸ್ತಕ ರೂಪದಲ್ಲಿ[2] ಪ್ರಕಟವಾಯಿತು. ಪೂಜ್ಯ ಮುನಿಶ್ರೀಯವರ ಕರ್ನಾಟಕ ಮಂಗಲ ವಿಹಾರ ಸಂದರ್ಭದಲ್ಲಿ (1980)[3] ಅದರ ಮೂರನೆಯ ಪ್ರಕಟನೆ ಹೊರ ಬಂದುದು ಅವರ ಬರವಣಿಗೆಯ ಬಗೆಗೆ ಕನ್ನಡಿಗರಿಗಿರುವ ಪ್ರೀತಿಗೆ ದ್ಯೋತಕವಾಗಿದೆ.

ಪೂಜ್ಯ ವಿದ್ಯಾನಂದ ಮಹಾರಾಜರವರು ತಮ್ಮ ಪ್ರವಚನವಂತೆಯೇ ಬರವಣಿಗೆಯಲ್ಲಿಯೂ ವಿಷಯವನ್ನು ಸರಳವೂ, ಸುಲಭವೂ ಅರ್ಥವಾಗುವಂತೆಯೂ ಬಳಸುವುದು ಸರ್ವಶ್ರುತ. ಅವರು ಪ್ರಭಾವಿ ಪ್ರವಚನಕಾರರು, ಅವರ ಪ್ರವಚನಗಳಂತೆಯೇ ಅವರ ಬರವಣಿಗೆಯೂ ಎಲ್ಲರನ್ನೂ ತಲುಪುವಂಥದಾಗಿದೆ. ಅವರೆಲ್ಲರ ಬರವಣಿಗೆ ಹಿಂದಿಯಲ್ಲಾದುದರಿಂದ ದಕ್ಷಿಣದ ಭಾಷೆಯ ಜನಗಳಿಗೆ ಅದು ಅಷ್ಟೊಂದು ಪ್ರಮಾಣದಲ್ಲಿ ತಲುಪಿಲ್ಲವೆಂದೇ ಹೇಳಬೇಕಾಗುತ್ತದೆ. ಕೆಲವೊಂದು ಅನುವಾದ ಕೃತಿಗಳ[4] ಮೂಲಕ ಅವರ ಕೆಲವು ಕೃತಿಗಳ ಪರಿಚಯ ಅಲ್ಪಮಟ್ಟಿಗೆ ಆಗಿದೆ. ಆದರೆ ಏಲಾಚಾರ್ಯ ವಿದ್ಯಾನಂದರು ಆಳವಾದ ಅಧ್ಯಯನದಲ್ಲಿ ಸದಾ ನಿರತರಾದವರು, ಅನೇಕ ಗ್ರಂಥಗಳನ್ನು ವಿವರ, ವಿವರವಾಗಿ ಓದುತ್ತ, ಹೊಸ ದೃಷ್ಟಿಕೋನದಿಂದ ಅವರ ಉಪಯುಕ್ತತೆಯನ್ನು ಗಮನಿಸುತ್ತ ಜೈನಾಚಾರ್ಯರ ಗ್ರಂಥಗಳ ಜೊತೆಗೆ ಇತರ ಕೃತಿಗಳ ತೌಲನಿಕ ಅಧ್ಯಯನ ಕೈಕೊಳುತ್ತ ಸಾಗಿದ ಓರ್ವ ಸತ್ಯಾನ್ವೇಷಿ ಸಂಶೋಧಕನೆಂಬುದನ್ನು ತಿಳಿಯಬೇಕಾಗಿದೆ. ಈ ರೀತಿಯ ಅಧ್ಯಯನದ ಫಲವಾಗಿ ಅವರ ಬರವಣಿಗೆ ಸಂಕುಚಿತತೆಯ ಛಾಯೆಯಿಂದ ಮುಕ್ತವಾಗಿ ವಿಶ್ವವ್ಯಾಪಕತೆಯನ್ನು ಪಡೆದಿದೆ.

ವಿದ್ಯಾನಂದರ ಶೈಲಿ ಅನೇಕ ವೈಶಿಷ್ಟ್ಯಗಳಿಂದ ಕೂಡಿದುದಾಗಿದೆ ಅವರ ಶೈಲಿಯ ಪ್ರಮುಖ ಅಂಶವೆಂದರೆ ವಿಷಯ ನಿರೂಪಣೆಯ ಸರಳ-ನೇರ-ರೀತಿ. ವಿಷಯ ಪ್ರತಿಪಾದನೆಯಲ್ಲಿ ಯಾವ ಸಂದೇಹ-ಸಂದಿಗ್ಧತೆಗಳಿಗೆ ಅವಕಾಶ ಉಳಿಯದಂತೆ ವಿಚಾರಗಳ ಎಳೆ–ಎಳೆಗಳನ್ನು ಬಿಡಿ ಬಿಡಿಯಾಗಿ ವಿವರಿಸುತ್ತ ಸಾಗುವುದನ್ನು ಕಾಣುತ್ತೇವೆ.

'ಸೂರ್ಯನ ಸಹಸ್ರಾರು ಕಿರಣಗಳು ಮನೆ–ಮನೆಗಳಲ್ಲಿ ಪ್ರವೇಶಿಸಿ ಹಾಸಿಗೆಯನ್ನು ತ್ಯಜಿಸಲು ಜಗತ್ತಿಗೆ ಹೇಳುತ್ತವೆ. ಆದರೆ ಸಂಕಟವೇ ಪ್ರಿಯವಾದ ಒಂಟಿಯು ಪ್ರಭಾತ ಕಾಲದ ಹಸಿರು ಹುಲ್ಲನ್ನು ಜೇರೆಯವರಿಗಾಗಿ ಬಿಟ್ಟುಕೊಟ್ಟು ಮಲಗಿರುತ್ತದೆ. ಅದಕ್ಕಾಗಿ ಮಲಗಿದವ ಕಳೆದುಕೊಳ್ಳುವನು[5] ಎಂದು ಸಮಯದ ಮಹತ್ವವನ್ನು ಸರಳ ಮಾತಿನಲ್ಲಿ ವಿವರಿಸುತ್ತಾರೆ.

ವಿಷಯ ಪ್ರತಿಪಾದನೆ ಪರಿಣಾಮಕಾರಿಯಾಗುವಂಥ ಸನ್ನಿವೇಶಗಳ ಚಿತ್ರಣ ವಿದ್ಯಾನಂದರ ಶೈಲಿಯ ಒಂದು ಪ್ರಮುಖ ಅಂಶವೆಂಬುದನ್ನು ನೋಡಬಹುದು. 'ಎಲ್ಲ

---

1) [1]'ಸನ್ಮತಿ' ಮಾಸಪತ್ರಿಕೆ-1971 [2]ಸನ್ಮತಿ ಪ್ರಕಾಶನ, ಧಾರವಾಡ-1975 [3]ಏಲಾಚಾರ್ಯ ವಿದ್ಯಾನಂದ ಮಂಗಲ ವಿಹಾರ ಸ್ವಾಗತ ಸಮಿತಿ, ಕರ್ನಾಟಕ (ಬೆಳ್ಳೂರು) 1980.
[4]ಮಹಾವೀರ ಭಕ್ತಿಗಂಗಾ [5]ಸಮಯದ ಮೌಲ್ಯ — ಎಸ್. ಪಿ. ಪಾಟೀಲ

ಭೂಚರ, ನಭಚರ, ಪ್ರಾಣಿಗಳು ಅಸಹನೀಯ ಉಷ್ಣತೆಯಿಂದ ತ್ರಾಹೀ ತ್ರಾಹೀ ಎನ್ನಲು ಪ್ರಾರಂಭಿಸುತ್ತವೆ, ಆಗ ಪ್ರಪಂಚದ ವ್ಯಾಕುಲತೆಯನ್ನು ನೋಡಿ ಪ್ರಕೃತಿ ಮಗ್ಗುಲನ್ನು ಬದಲಿಸುತ್ತದೆ. ಆಕಾಶದಲ್ಲಿ ಕಪ್ಪು ಮೋಡಗಳು ಆವರಿಸುತ್ತವೆ. ಪ್ರಪಂಚದ ಸಂತಾಪವನ್ನು ನಿರ್ಮೂಲಗೊಳಿಸಲು ಅವುಗಳಿಂದ ಶೀತಲ ಜಲ ಬಿಂದುಗಳು ಉದುರಲು ಪ್ರಾರಂಭವಾಗುತ್ತವೆ. ಇದೇ ರೀತಿ ಸ್ವಾರ್ಥದ ಮರೆಯಲ್ಲಿ ಯಾವಾಗ ದುರಾಚಾರ, ಪಾಪಮಯ ಅತ್ಯಾಚಾರ ಸಂಸಾರದಲ್ಲಿ ಹೆಚ್ಚಿ ಬಿಡುವದೋ, ಹೀನ ದೀನ ಬಲಹೀನ ಪ್ರಾಣಿಗಳು ನಿರ್ದಯತೆಯ ಚಕ್ರದಲ್ಲಿ ಪುಡಿಪುಡಿಯಾಗಲು ಹತ್ತುತ್ತವೆಯೋ ಆಗ ರಕ್ಷಕರೇ ಭಕ್ಷಕರಾಗುತ್ತಾರೆ.[1] ಮಹಾವೀರರ ಜನನ ಪೂರ್ವದ ನಿರ್ದಯ ಹಿಂಸಾಚಾರವನ್ನು ಕಣ್ಣಿಗೆ ಕಟ್ಟುವಂತೆ ಅಂದಿನ ಪರಿಸರವನ್ನು ಇಲ್ಲಿ ಚಿತ್ರಿಸಲಾಗಿದೆ. ಸಮವಸರಣದಲ್ಲಿ ಮಹಾಪ್ರಕಾಶವಿದ್ದುದರಿಂದ ಅಲ್ಲಿ ಹಗಲು ರಾತ್ರಿಯ ಭೇದ ಗೋಚರಿಸುತ್ತಿರಲಿಲ್ಲ. ಅಲ್ಲಿ ಪರಮಶಾಂತಿ ಇತ್ತು. ಅಲ್ಲಿ ಬಂದ ಪ್ರತಿಯೊಂದು ಪ್ರಾಣಿಯ ಹೃದಯದಲ್ಲಿ ಯಾವ ಕ್ರೋಧೆ, ವ್ಯಾಕುಲತೆ ಇರಲಿಲ್ಲ[2] 'ಕಣ್ಣು ಇರದಿದ್ದರೆ ಶರೀರದ ಭಾರ ಜಿಟ್ಟದಂತಾಗುವದು. ಒಂದು ಹೆಜ್ಜೆ ಅಂತರ ನಡೆಯಲು ಒಂದು ಹರದಾರಿ ನಡೆದಂತಾಗುವದು. ಪ್ರಪಂಚದ ಮನೋರಂಜಕ ವಿಲಾಸ, ಹೂಗಳ ಚಿತ್ತಾಕರ್ಷಕ ಬಣ್ಣ ರಾಜಮಾರ್ಗಗದಲ್ಲಿ ಯಾವುದೇ ಶಂಕೆಯಿಲ್ಲದೆ ಅಡ್ಡಾಡುವದು ಎಲ್ಲವೂ ಅದೃಶ್ಯವಾಗಿ ಜೀವನವನ್ನು ಶೂನ್ಯತೆ ತುಂಬಿ ಬಿಡುವದು'[3] 'ಪ್ರಪಂಚದಲ್ಲಿ ಸ್ತ್ರೀ-ಪುರುಷ, ಪಕ್ಷಿಯಾದಿ ಸಮಸ್ತ ಜೀವಿಗಳು ಕಾಮದೇವನ ದಾಸರಾಗಿದ್ದಾರೆ. ಇದೇ ಕಾರಣದಿಂದಾಗಿ ಸ್ತ್ರೀ-ಪುರುಷರು ಜೀವಿಸಿರುವ ವರೆಗೆ ವಿಷಯ ವಾಸನೆಯು ಕ್ರಿಮಿಯಾಗಿ ಉಳಿಯತ್ತದೆ. ಆ ಅದಮ್ಯ ಕಾಮವಾಸನೆಯ ಲೇಶಮಾತ್ರವೂ ಕೂಡ ಕ್ಷತ್ರಿಯ ನವಯುವಕ ರಾಜಕುಮಾರ ವರ್ಧಮಾನರ ಹೃದಯದಲ್ಲಿ ಇರಲಿಲ್ಲ[4] ಇಲ್ಲಿನ ವಿವರಣೆಗಳು ಆಯಾ ಸಂದರ್ಭದ ಸ್ಪಷ್ಟ ಚಿತ್ರಣವನ್ನು ಪರಿಣಾಮಕಾರಿಯಾಗಿ ಬಿಂಬಿಸುವಲ್ಲಿ ಸಮರ್ಥವಾಗಿವೆ. ಮುಂದೆ ನಿರೂಪಿಸಬೇಕಾದ ವಿಷಯಕ್ಕೆ ತಕ್ಕ ಹಿನ್ನೆಲೆಯನ್ನು ಒದಗಿಸಿಕೊಟ್ಟಿವೆ.

ತಾತ್ವಿಕ ವಿಚಾರಗಳನ್ನೂ ಸರಳ-ಸುಲಭ ಶಬ್ದಗಳಲ್ಲಿ ಸೆರೆಹಿಡಿಯುವಲ್ಲಿ ವಿದ್ಯಾನಂದರ ಶೈಲಿ ಸಾರ್ಥಕತೆಯನ್ನು ಪಡೆಯುವುದನ್ನು ಕಾಣುತ್ತೇವೆ. ಆತ್ಮವು ಅನೇಕ ವೈಭವಗಳ ಸಮೂಹವಿದೆ. ಅದಕ್ಕೆ ಸಮಾನ ಅಮೂಲ್ಯವಾದ ವಸ್ತು ಪ್ರಪಂಚದಲ್ಲಿ ಮತ್ತಾವುದೂ ಇಲ್ಲ. ಆದರೆ ಅಶುದ್ಧ ರತ್ನದಂತೆ ಅದರ ವೈಭವವು ಅನಾದಿ ಕಾಲದ ಕರ್ಮದ ಹೊಲಸಿನಲ್ಲಿ ಅಡಗಿರುತ್ತದೆ. ಆ ಗಹನವಾದ ಕರ್ಮ ಮಲಿನತೆಯಲ್ಲಿ

---

1 ಅಭೀಕ್ಷ್ಣಜ್ಞಾನೋಪಯೋಗ — ಎಸ್. ಪಿ. ಪಾಟೀಲ

2 ವೃಷಭ ಭಕ್ತಿಗಂಗಾ 3 ಸಮಯದ ಬೆಲೆ — ಪದ್ಮನಾಭ ಶರ್ಮ

2) ಸಮಯದ ಮೌಲ್ಯ ಸಸ್ಕೃತಿ ... ಅನು. ಎಸ್.ಪಿ.ಪಾಟೀಲ ಮೇ - 1973 ಪು - 124.

3) ಮಹಾವೀರ ಭಕ್ತಿಗಂಗಾ ಕನ್ನಡ ಅನುವಾದ ಮೂರನೆಯ ಮುದ್ರಣ 1980, ಪು. 9-10

4) — ಅದೇ — ಪು. 31

5) ಅಭೀಕ್ಷ್ಣಜ್ಞಾನೋಪಯೋಗ 1980, ಪು. 2

4 ಮಹಾವೀರ ಭಕ್ತಿಗಂಗಾ ಪು. 18

ಅಡಗಿರುವ ವೈಭವವನ್ನು ಪೂರ್ಣ ಶುದ್ಧವಾಗಿ ಪ್ರಕಟಗೊಳಿಸಲು ಮಹಾ ಪರಿಶ್ರಮ ಪಡಬೇಕು. ಆಗ ಆತ್ಮನು ಪರಮ ವಿಶುದ್ಧ ವಿಶ್ವವಂದ್ಯ ಪರಮಾತ್ಮನಾಗುತ್ತಾನೆ.[1] ಈ ಮಾದರಿಯ ಬರವಣಿಗೆ ತಾತ್ವಿಕ ವಿಚಾರಗಳ ಕ್ಲಿಷ್ಟತೆ, ಸಂಕೀರ್ಣತೆಯನ್ನು ಸರಳ ಸುಲಭ ಗ್ರಾಹ್ಯವಾಗಿ ಮಾಡುತ್ತದೆ.

ವಿಷಯದ ಮಹತ್ವವನ್ನು ಮನಗಾಣಿಸಿ ಕೊಡುವಲ್ಲಿ ಉದಾಹರಣೆ, ಉಪಮೆ, ಹೋಲಿಕೆ, ದೃಷ್ಟಾಂತಗಳ ಬಳಕೆ ತುಂಬ ಪರಿಣಾಮಕಾರಿಯಾದುದು. ದೃಷ್ಟಾಂತಗಳ ಬಳಕೆ ಹರಿತವಾದ ಅಸ್ತ್ರವಿದ್ದಂತೆ. ಅದನ್ನು ಬಳಸುವ ವ್ಯಕ್ತಿ ತುಂಬ ಜಾಗರೂಕತೆಯನ್ನೂ ವಹಿಸಬೇಕಾಗುತ್ತದೆ. ಅದರ ಬಳಕೆಯಲ್ಲಿ ನಿಯಂತ್ರಣದಿಂದ ಹೆಚ್ಚಿನ ಸೊಬಗು ಉಂಟಾಗುವಂತೆಯೇ ನಿಯಂತ್ರಣವನ್ನು ಮೀರಿದಾಗ ಅಂದಗೆಡುವದೂ ಉಂಟು. ಅಪಾಯದ ಅಂಚನ್ನು ತಲುಪಬಹುದು. ಅಲ್ಲದೆ ಸಂದರ್ಭಕ್ಕನುಸಾರ ಉಚಿತ ದೃಷ್ಟಾಂತಗಳನ್ನು ನೀಡುವವರ ವ್ಯಾಪಕ ಓದು, ಸ್ಮರಣಶಕ್ತಿ, ಚಿಂತೆಯ ಆಳವೂ ವ್ಯಕ್ತವಾಗುವದು. ಈ ದೃಷ್ಟಿಯಿಂದ ಪೂಜ್ಯ ವಿದ್ಯಾನಂದರ ಬರವಣಿಗೆಯಲ್ಲಿ ದೃಷ್ಟಾಂತ ಹೋಲಿಕೆಗಳ ಸಂಯಮ ಪೂರ್ಣ ವಿಪುಲತೆಯನ್ನು ಕಾಣುತ್ತೇವೆ.

‘ಪ್ರಪಂಚದಲ್ಲಿ ಯಾವುದೇ ಪದಾರ್ಥ ಪರಿಶ್ರಮ ಹಾಗೂ ಕಷ್ಟ ಸಹನೆಯಿಂದಲೇ ಬಹುಮೂಲ್ಯ ಹಾಗೂ ಆದರಣೀಯವಾಗುವದು. ಆಳವಾಗಿ ಅಗೆದ ಮೇಲೆ ಕಲ್ಲು ಮಣ್ಣುಗಳಿಂದ ಕೂಡಿದ ಶುದ್ಧವಾಗಬೇಕಾದ ರತ್ನ ಶಿಲೆಯು ಹೊರಡುವದು. ಅದಕ್ಕೆ ಉಳಿ, ಸುತ್ತಿಗೆಯ ಹೊಡೆತಗಳನ್ನು ಸಹಿಸಬೇಕಾಗುವದು. ಆಗ ಬಹು ಮೂಲ್ಯ ರತ್ನ ಪ್ರಕಟವಾಗುವದು’[2] ‘ಕಾಡಿಗೆಯ ಡಬ್ಬಿಯಲ್ಲಿನ ಅತಿ ಸ್ವಲ್ಪವನ್ನೇ ಕೈಬೆರಳಿನ ತುದಿಯ ಮೇಲೆ ತೆಗೆದುಕೊಂಡು ಕಣ್ಣುಗಳಿಗೆ ಹಚ್ಚಿಕೊಳ್ಳಲಾಗುವುದು. ಹೀಗೆ ಸ್ವಲ್ಪವನ್ನೇ ತೆಗೆದುಕೊಂಡರೂ ಒಂದು ದಿನ ಕಾಡಿಗೆಯು ಡಬ್ಬಿಯು ಬರಿದಾಗುವದು. ಇದರಂತೆ ಸಣ್ಣ ಇರುವೆ ಹುತ್ತವನ್ನು ನಿರ್ಮಿಸುತ್ತದೆ’[3] ‘ಆಕಳು ಮೊದಲಾದ ಪ್ರಾಣಿಗಳು ತಿಂದ ಹುಲ್ಲು ಮೊದಲಾದವನ್ನು ವಿಶ್ರಾಂತಿಯ ಸಮಯ ಚರ್ವಿತ ಚರ್ವಣ ಮಾಡುತ್ತವೆ. ಹಾಗೂ ಹಾಗೆ ಮಾಡುವುದರಿಂದ ತಿಂದ ಪದಾರ್ಥದ ರಸಮಯ ಪರಿಪಾಕವನ್ನು ಪಡೆಯುತ್ತವೆ. ಹಾಗೆಯೇ ಕಲಿತ ವಿದ್ಯೆಯು ಪುನಃ ಪುನಃ ಮಂಥನ (ವಿಚಾರ) ಮಾಡುವದು ಅಭೀಕ್ಷ್ಣಜ್ಞಾನೋಪಯೋಗವಾಗಿದೆ.’[4]

ಜನಸಾಮಾನ್ಯರನ್ನು ತಟ್ಟಬಲ್ಲ, ವಿದ್ವಾಂಸರನ್ನು ಆಲೋಚನೆಗೆ ಒಳಗು ಮಾಡಬಲ್ಲ ಇಂಥ ಹೋಲಿಕೆ, ದೃಷ್ಟಾಂತಗಳಿಂದಾಗಿಯೇ ವಿದ್ಯಾನಂದರ ಪ್ರವಚನ ಬರವಣಿಗೆಗಳು ಜನಪ್ರಿಯವಾಗಿವೆ, ಸರ್ವಾದರಣೀಯವಾಗಿವೆ, ಇವನ್ನು ಪರಿಣಾಮಕಾರಿಯಾಗಿ ಬಳಸುವಲ್ಲಿ ಅವರ ವ್ಯಾಪಕ ಅಧ್ಯಯನದ, ಚಿಂತನಶೀಲತೆಯ ದರ್ಶನವಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಪೂರ್ವಾಚಾರ್ಯರ, ದಾರ್ಶನಿಕರ, ಕವಿಶ್ರೇಷ್ಠರ ಶ್ಲೋಕಗಳನ್ನು ಉದ್ಧರಿಸುವ ಮೂಲಕ ವಿಷಯದ ಮಹತ್ವವನ್ನು ಬಿಂಬಿಸುವರು. ದೃಷ್ಟಾಂತ

---

1 ಮಹಾವೀರ ಭಕ್ತಿಗಂಗಾ ಪು. 27   2 ಅದೇ ಪು. 27   3 ಸಮಯದ ಮೌಲ್ಯ ‘ಸನ್ಮತಿ’ 1973, ಪು. 156   4 ಅಭೀಕ್ಷ್ಣಜ್ಞಾನೋಪಯೋಗ ಪು. 16

ಗಳ ವಿಸ್ತೃತಿ ವಿದ್ಯಾನಂದರ ಶೈಲಿಯ ಒಂದು ಮಹತ್ವದ ಅಂಶವಾದರೂ ಅದರ ಧಾರಾಳತೆ ಅಥವಾ ದುಂದು ಬಳಕೆ ಎಲ್ಲಿಯೂ ಕಂಡುಬರುವುದಿಲ್ಲ. ಹಿತ-ಮಿತದ ಎಲ್ಲೆಯನ್ನು ಮೀರದ ಸಂಯಮಶೀಲ ಬರವಣಿಗೆಗೆ ಅದು ಮಾದರಿಯಾಗಿ ಪರಿಣಮಿಸಿದೆ.

ವಿದ್ಯಾನಂದರ ವಾಕ್ಯ ರಚನೆಗೆ ಚಿಕ್ಕ--ಚೊಕ್ಕ ಗಾದೆಮಾತು, ನಾಣ್ಣುಡಿ ಲೋಕೋಕ್ತಿಯ ಸ್ವರೂಪ ಪ್ರಾಪ್ತವಾದುದನ್ನು ಕಾಣುತ್ತೇವೆ. ಅವಶ್ಯವಿದ್ದ ಪದಗಳನ್ನು ಮಾತ್ರ ಅವರು ಆಯ್ದು ಬಳಸುತ್ತಾರೆ. ಹಾಗೆಂದು ಹೇಳುವುದಕ್ಕಿಂತ ಅವರ ಮನದಲ್ಲಿ ಮೂಡಿದ ವಿಚಾರ ಸಾರ್ಥಕ ಪದಪುಂಜಗಳೊಂದಿಗೆ ವಾಣಿಯ ಮೂಲಕ, ಅಕ್ಷರಗಳ ಮೂಲಕ ಹೊರಹೊಮ್ಮುತ್ತವೆ ಎಂದರೆ ಉಚಿತವಾಗುತ್ತದೆ. 'ಪ್ರಪಂಚದಲ್ಲಿಯ ಯಾವುದೇ ಪದಾರ್ಥವು ಪರಿಶ್ರಮ ಹಾಗೂ ಕಷ್ಟ ಸಹನೆಯಿಂದಲೇ ಬಹುಮೂಲ್ಯ ಹಾಗೂ ಆದರಣೀಯವಾಗುವದು'[1]. 'ಸಮಯವು ಚಿಂತಾಮಣಿಯಾಗಿದೆ. ಕಾಮಧೇನುವಾಗಿದೆ. ಅಪೇಕ್ಷಿತ ಧನವಾಗಿದೆ'[2]. 'ಕ್ಷಣದಷ್ಟು ಮಲಗಿದ ಮಣದಷ್ಟು ಕಳೆದುಕೊಂಡ'[3], 'ಕಾಲವನ್ನು ಪುರುಷಾರ್ಥದಿಂದಲೇ ಜಯಿಸಲಾಗುವದು ಎಂಬುದನ್ನು ವಾಸ್ತವಿಕವಾಗಿ ಮನುಷ್ಯನು ನೆನಪಿನಲ್ಲಿಡಬೇಕು'[4]. 'ಕ್ರಿಯೆಯು ಪರಿಣಾಮಗಳಿಂದಲೇ ಪ್ರಶಂಸಿಸಲ್ಪಡುತ್ತದೆ. ಆಕಳು ಶರೀರದಿಂದ ಸುಂದರವಾಗಿದ್ದರೂ, ಅದು ಹಾಲು ಕೊಡುತ್ತಿರದಿದ್ದರೆ ಅದರ ಕಾಯವು ವಂದನೀಯವಾಗುವುದಿಲ್ಲ'[5]. 'ಜ್ಞಾನವಿಲ್ಲದ ಚಾರಿತ್ರ ವ್ಯರ್ಥವಾಗಿದೆ'[6].

ಒಟ್ಟಿನಲ್ಲಿ ಹಿತ-ಮಿತವಾದ ಪದ ಬಳಕೆಯಿಂದ ಪರಮಾವಧಿ ಪರಿಣಾಮವನ್ನುಂಟುಮಾಡುವ ಶೈಲಿ ವಿದ್ಯಾನಂದರದು. ಆಲಂಕಾರಿಕ ಭಾಷೆಗೆ ಮೋಹಿಸಿ ಅದರ ಹುಚ್ಚು ಹೊಳೆಯಲ್ಲಿ ಕೊಚ್ಚಿಕೊಂಡು ಹೋಗದಂತೆ ಸಂಯಮ ಪೂರ್ಣ ಬರವಣಿಗೆಯಿಂದ ಹಿತ-ಮಿತ ಮೃದು ಮಧುರ ಶೈಲಿಗೆ ಮಾದರಿಯ ಬರವಣಿಗೆಯನ್ನು ಒದಗಿಸಿ ಕೊಟ್ಟಿದ್ದಾರೆ. ಅವರ ಶೈಲಿಯನ್ನು 'ಸ್ವಲ್ಪಾಕರ ಶೈಲಿ'ಯೆಂದು ಡಾ. ನೇಮಿಚಂದ್ರ ಜೈನ ಅವರು ಸಾರ್ಥಕವಾಗಿ ಹೆಸರಿಸಿದ್ದಾರೆ. ಅವರ 'ಮಹಾವೀರ ಭಕ್ತಿಗಂಗಾ' ಕೃತಿಯು ಕನ್ನಡ ಅನುವಾದ ಬಗ್ಗೆ ವ್ಯಕ್ತಪಡಿಸಿದ ವಿಮರ್ಶಕರ ಅಭಿಪ್ರಾಯಗಳೂ ವಿದ್ಯಾನಂದರ ಶೈಲಿಯನ್ನು ಸರಿಯಾಗಿ ಗುರುತಿಸುತ್ತವೆ.

'ಮಹಾವೀರರ ಜೀವನವನ್ನು ಬಹು ಶ್ರದ್ಧೆಯಿಂದ ಭಕ್ತಿಯಿಂದ ನಿರ್ಮಿಸಿದ್ದಾರೆ. ಕೆಲವು ಕಡೆಗಳಲ್ಲಿ ಭಾವುಕತೆಯ ಅಸಾಮಾನ್ಯತೆಗೇರುತ್ತದೆಂದು ಭಾಸವಾಗುತ್ತದೆ'. (ಪುಸ್ತಕ ಪರಿಚಯ) ಆಕಾಶವಾಣಿ ಧಾರವಾಡ, ಅನುವಾದ ಮೂಲ ಲೇಖಕರ ಕಾರ್ಯಕ್ಕೆ ಶೋಭೆ ತರುವಂತಿದೆ. ತೀರ್ಥಂಕರರ ದರ್ಶನವೂ ಇಲ್ಲಿ ಕಾವ್ಯಮಯವಾದ ಗದ್ಯದಲ್ಲಿ ಚಿತ್ರಿಸಲಾಗಿದೆ. ಹೃದ್ಯವಾದ ನಿರೂಪಣೆಯಿದೆ, ಮಹಾವೀರರ ಚರಿತ್ರೆ

1 ಮಹಾವೀರ ಭಕ್ತಿಗಂಗಾ ಪು. 27  2 ಸಮಯದಮೌಲ್ಯ 'ಸನ್ಮತಿ' 1973, ಪು. 121
3 ಅದೇ ಪು. 122  4 ಅದೇ ಪು. 153  5 ಅಭೀಕ್ಷ್ಣ ಜ್ಞಾನೋಪಯೋಗ ಪು. 9
6 ಅದೇ ಪು. 20

ಯೊಂದಿಗೆ ಅವರ ತತ್ತ್ವಗಳನ್ನೂ ಈ ಪುಸ್ತಕ ಪರಿಚಯ ಮಾಡಿಕೊಡುತ್ತದೆ. (ಪುಸ್ತಕ ವಿಮರ್ಶೆ) ಕನ್ನಡನುಡಿ.

ಪೂಜ್ಯ ವಿದ್ಯಾನಂದರ ಮೂರು ಕೃತಿಗಳನ್ನು ಅನುವಾದಿಸುವ ಅವಕಾಶ ನನಗೆ ಲಭಿಸಿದುದು ಒಂದು ಸುಯೋಗ. ಕನ್ನಡದಲ್ಲಿ ಬಂದ ಈ ಮೂರು ಕೃತಿಗಳ ಹಿನ್ನೆಲೆಯಲ್ಲಿ ಈ ಮಾತುಗಳನ್ನು ಹೇಳಲು ಸಾಧ್ಯವಾಗಿದೆ. ಇದು ಸಾಗರದಲ್ಲಿಯ ಒಂದು ಹನಿಯ ದರ್ಶನ ಮಾತ್ರ. ವಿದ್ಯಾನಂದರ ಕೃತಿಗಳ ವಿವರವಾದ, ಆಳವಾದ ಅಧ್ಯಯನದ ಅಗತ್ಯತೆ ತುಂಬ ಇದೆ. ಅವರ ಕೃತಿಗಳೂ ಇನ್ನೂ ಹಿಚ್ಚಿನ ಪ್ರಮಾಣದಲ್ಲಿ ಕನ್ನಡದಲ್ಲಿ ದೊರೆಯುವಂತೆ ಆಗಬೇಕಾದುದು ತುಂಬ ಮಹತ್ತ್ವಪೂರ್ಣವಾಗಿದೆ. ಆಗ ಮಾತ್ರ ಅದರ ಪ್ರಯೋಜನ ಕನ್ನಡಿಗರಿಗೆ ನಿಜವಾಗಿಯೂ ಆಗುವುದರಲ್ಲಿ ಸಂದೇಹವಿಲ್ಲ.



**ವಿದ್ಯಾನಂದ ವಾಣಿ**

## ಮನಸ್ಸಿನ ಸ್ವಚ್ಛತೆ

**ನಾವು ಮನಸ್ಸನ್ನು ಸ್ವಚ್ಛ ಇಟ್ಟುಕೊಳ್ಳಬೇಕು, ನಿರ್ಮಲ ಇಟ್ಟುಕೊಳ್ಳಬೇಕು. ಮನಸ್ಸು ಸ್ವಚ್ಛ ಆದಷ್ಟೂ ನಮಗೆ ಲಾಭ. ಯಾರ ಮನಸ್ಸು ಉನ್ನತವಿದೆ, ಸ್ವಚ್ಛವಿದೆ, ನಿರ್ಮಲವಿದೆ, ಅಂಥವರ ಜೀವನವೇ ಉನ್ನತವಾದುದು.**

---

## ಜೀವಕ್ಕೆ ಸುಖ ಯಾವಾಗ?

**ಪರಿಶುದ್ಧನಾದ ಜೀವ ಈ ದೇಹದಲ್ಲಿ ಏಕೆ ಬಂಧಿಯಾಗಿರುವನು? ಸ್ವೇಚ್ಛಾ ಮಾರ್ಗದಲ್ಲಿ ತಾನು ಗಳಿಸಿದ ಕರ್ಮಗಳಿಂದ ಜೀವನಿಗೆ ಈ ಅವಸ್ಥೆಯುಂಟಾಗಿದೆ. ಕ್ರೋಧ, ಮಾನ, ಮಾಯಾ, ಲೋಭಗಳೇ ಕರ್ಮರೂಪ ತಾಳಿವೆ. ಕ್ರೂರಿಯಾದ ಕಷಾಯವನ್ನು ಸುಟ್ಟಾಗ ಜೀವಕ್ಕೆ ಸುಖ ವುಂಟಾಗುವುದು.**

# ಪ. ಪೂ. ಏಲಾಚಾರ್ಯ ಮಹಾರಾಜರ ಮುಂಬಯಿ ನಗರದ ಚಾತುರ್ಮಾಸ

ಲೇಖಕರು: **ಭರತ್‌ಕುಮಾರ ತೇಜಪಾಲಕಾಲಾ,**
ಸಹಸಂಪಾದಕ 'ಜೈನದರ್ಶನ', ವಿಕ್ರೋಲೀ, **ಮುಂಬಯಿ.**

ವಿಶ್ವಧರ್ಮದ ಪ್ರಕಾಂಡ ವಕ್ತಾ ಸಿದ್ಧಾಂತ ಚಕ್ರವರ್ತಿ ಏಲಾಚಾರ್ಯ ಪ.ಪೂ. ಮುನಿಶ್ರೀ ವಿದ್ಯಾನಂದ ಮಹಾರಾಜರ ಸನ್ 1984ರ ಚಾತುರ್ಮಾಸ ಅಥವಾ ವರ್ಷಾಯೋಗವು ಮೋಹಮಾಯಾವೀ ಮುಂಬಯಿಯಂತಹ ಮಹಾ ನಗರದಲ್ಲಿ ತುಂಬಾ ಉತ್ಸಾಹ ಮತ್ತು ಧರ್ಮಪ್ರಭಾವನೆಯೊಂದಿಗೆ ನಡೆಯಿತು.

ಇಡೀ ಭಾರತದಲ್ಲಿ ಆಧುನಿಕ, ಭೌತಿಕ, ಭೋಗೋಪಭೋಗಗಳಲ್ಲಿ ಹೆಚ್ಚಾಗಿ ಮುಂದುವರಿದಿರುವ ಈ ನಗರದಲ್ಲಿ ಓರ್ವ ದಿಗಂಬರ ಸಂತರ ಚಾತುರ್ಮಾಸದ ಮಾತಂತಿರಲಿ, ವಿಶ್ರಾಂತಿ ಹೆಚ್ಚೇಕೆ ಪ್ರವೇಶವು ಸಹ ಇಂದಿಗೆ ಮೂವತ್ತು ವರ್ಷಗಳ ಹಿಂದೆ ಚಿಂತೆ, ಭಯ ಮತ್ತು ಯೋಚಿಸಬೇಕಾದ ವಿಷಯವಾಗಿತ್ತು.

ಆದರೆ ಚಾರಿತ್ರ ಚೂಡಾಮಣಿ ಸ್ವರ್ಗೀಯ ಪ. ಪೂ. ಆಚಾರ್ಯ ಶ್ರೀ ನೇಮಿ-ಸಾಗರ ಮಹಾರಾಜರ ಪರಮ ಕೃಪೆಯಿಂದ ಅನೇಕ ವಿರೋಧಗಳ ಮಧ್ಯೆ ಭಯ ಮತ್ತು ಆಪತ್ತಿನ ಕಡೆಗೆ ಲಕ್ಷ್ಯವೀಯದೆ ಈ ಮಹಾನಗರಕ್ಕೆ ಪ್ರವೇಶ ಮಾಡಿದ್ದ-ಲ್ಲದೆ ದಿಗಂಬರ ಜೈನ ಧರ್ಮದ ಸಾಧಕರ ಹಾಗೂ ಆರಾಧಕರ ಮಾರ್ಗವನ್ನು ಸರಾಗ (ಪ್ರಶಸ್ತಿ) ಸುರಕ್ಷಿತಗೊಳಿಸಿದರು. ಆ ಕಾಲದಲ್ಲಿ ಸೌಭಾಗ್ಯವಶಾತ್ ನಮ್ಮ ಪರಮ ಪೂಜ್ಯ ಏಲಾಚಾರ್ಯರು ಮಹಾರಾಜ 'ಪಾರ್ಶ್ವಕೀರ್ತಿ' ಎಂಬ ಹೆಸರಿಂದ ಕ್ಷುಲ್ಲಕಾ-ವಸ್ಥೆಯಲ್ಲಿ ಅಧ್ಯಯನ ಸಾಧನೆಯಲ್ಲಿ ನಿರತರಾಗಿ ಆಚಾರ್ಯ ನೇಮಿಸಾಗರರ ಬಳಿ ನೆಲೆಸಿದ್ದರು.

ಪೂಜ್ಯ ಏಲಾಚಾರ್ಯ ಮಹಾರಾಜರ ಜ್ಞಾನಾರಾಧನೆ ಮತ್ತು ವಕ್ತೃತ್ವ-ಪ್ರವಚನ ಶೈಲಿಯು ಸರ್ವ ವಿಶ್ರುತವಾಗಿದೆ. ಅತ್ಯಂತ ಪ್ರಭಾವಶಾಲಿಯಾದ ಹಾಗೂ ಆಕರ್ಷಣೀಯವಾಗಿರುವುದರೊಂದಿಗೆ ಅವರ ಪ್ರವಚನವು ಸುಸ್ಪಷ್ಟವೂ, ಅನುಕರ-ಣೀಯವೂ, ಅನುಶೀಲನಪರವೂ ಆಗಿರುತ್ತದೆ. ಭಾರತೀಯ ಸಂಸ್ಕೃತಿಯ ವಸ್ತುನಿಷ್ಠ ಪ್ರಾಚೀನ ಪರಂಪರೆಯನ್ನೇ ಆಧುನಿಕ ರೀತಿಯಲ್ಲಿ ಮಾನವ ಸಮಾಜದ ಅಂತರಂಗ ದೊಳಗೆ ಮೊಳಗಿಸಬಲ್ಲ ಸಾಮರ್ಥ್ಯ ಪಡೆದಿದೆ. ಇಷ್ಟೇ ಅಲ್ಲ, ವಕ್ತೃತ್ವದ ಪ್ರಭುತ್ವ ಪಡೆದಿರುವ ಮುನಿವರ್ಯರು ವಿಶ್ವಧರ್ಮದ ಜಯ-ಜಯಕಾರದೊಂದಿಗೆ ದಿಗಂಬರ ಜೈನ ತತ್ತ್ವದ ವಸ್ತುನಿಷ್ಠ ಪ್ರಭಾವವನ್ನು ಬೀರಿ ಸನಾತನ ತತ್ತ್ವದ ಮೂಲ್ಯದ ಬಗ್ಗೆ ಭ್ರಾಂತಿ ಹೊಂದಿರುವ ಸಾರ್ವಜನಿಕ ಸಮಾಜಗಳ ಮಿಥ್ಯಾಧಾರಣೆ (ತಪ್ಪು ಕಲ್ಪನೆ)ಗಳನ್ನು ನಿರ್ಮೂಲಗೊಳಿಸಬಲ್ಲವರೂ ಆಗಿದ್ದಾರೆ.

ವರ್ತಮಾನ ಯುಗದಲ್ಲಿ ಮೊದಲ ಬಾರಿಗೆ ಕಾಲು ನಡಿಗೆಯಲ್ಲಿ ದಿಗಂಬರ ಸಾಧುವಿನ ವಿಹಾರವು ಹಿಮಾಲಯದ ಮಡಿಲಲ್ಲಿ ತಲುಪಿತು. ದಿಗಂಬರತ್ವದ ಸಾನ್ನಿಧ್ಯ

ದಿಂದ ಹಿಮಾಲಯದ ಅನಾದಿಕಾಲೀನ ದಿಗಂಬರ ತತ್ವವು ಜಾಗೃತ (ಎಚ್ಚರ) ಗೊಂಡಿತು. ಧರ್ಮ ಶಾಸಕ ಇಪ್ಪತ್ನಾಲ್ಕನೇ ತೀರ್ಥಂಕರರಾದ ಭಗವಾನ್ ಮಹಾವೀರರ 2500ನೇ ನಿರ್ವಾಣ ಮಹೋತ್ಸವ ಹಾಗೂ ಶ್ರವಣಬೆಳಗೊಳದ ವಿಶ್ವವಿಖ್ಯಾತ, ನೀಳಕಾಯ, ಭಗವಾನ್ ಬಾಹುಬಲಿಯ ಸಹಸ್ರಾಬ್ದಿ ಮಸ್ತಕಾಭಿಷೇಕದಂತಹ ವಿಶ್ವ ವ್ಯಾಪೀ ಕಾರ್ಯಕ್ರಮವು ಇದೇ ಮಹಾ ಸಂತರ ಅನವರತ-ಅವಿಶ್ರಾಂತ–ಪರಿಶ್ರಮದ ಫಲ ಸ್ವರೂಪವಾಗಿದೆ. ಅಹಿಂಸೆ, ಅನೇಕಾಂತ–ಸ್ಯಾದ್ವಾದದ ಮರ್ಮವು ವಿಶ್ವದಾದ್ಯಂತ ಮರ್ಮಜ್ಞರಿಗೆ ಮನದಟ್ಟು ಮಾಡಿಕೊಟ್ಟ ಮಹಾ ಸಾಧುಗಳೇ ಇವರು. ಕುಂಭೋಜ (ಬಾಹುಬಲಿ)ಯಲ್ಲಿ ಇವರ ದೃಡತೆಯ ಉಪವಾಸ ಬಲದಿಂದ ದಿಗಂಬರ ಜೈನರ ಪ್ರಾಚೀನ ಕ್ಷೇತ್ರದ ಅಪಹರಣ ಪ್ರಯತ್ನವು ವಿಫಲಗೊಂಡಿತೆಂದರೆ ಅತಿಶಯೋಕ್ತಿ ಯೆನಲ್ಲ! ಇಂದೂರು, ಉಜ್ಜೈನಿ, ಜಯಪುರ, ದೆಹಲಿ (ದಿಲ್ಲಿ)ಯಂತಹ ರಾಜಧಾನಿ ಗಳಲ್ಲಿ ದಿಗಂಬರಾಭಾಸದ ಮರೆಯಲ್ಲಿ ನಡೆಯುತ್ತಿದ್ದ ಏಕಾಂತವಾದಿಗಳ ಮೂಲಕ ಪಸರಿಸಿದ್ದ ಮಿಥ್ಯಾಭ್ರಾಂತಿಯು ಈ ಸಂತರ ಸತತ ಪರಿಶ್ರಮದಿಂದ ನಿರ್ಮೂಲಗೊಂಡು ದಿಗಂಬರ ತತ್ವದ ಶ್ರದ್ಧೆಯು ಇನ್ನಷ್ಟು ದೃಢವಾಯಿತು.

ಇಂತಹ ಪರಿಶ್ರಮಿಾ ಸಂತರು ಪೂರ್ಣ ನಾಲ್ಕು ತಿಂಗಳ ಕಾಲ (ಚಾತುರ್ಮಾಸ) ಮುಂಬಯಿ ಮಹಾನಗರದಲ್ಲಿ ಆಚರಿಸುವಂತಾದುದು ಮುಂಬಯಿ ನಿವಾಸಿಗಳ ಪರಮ ಸೌಭಾಗ್ಯವೇ ಅಹುದು. ಶ್ರೀ ಆಚಾರ್ಯ ಶಾಂತಿಸಾಗರ ಸ್ಮಾರಕವಾದ ಪೌದನಾಪುರ (ತೀನ್ ಮೂರ್ತಿ) ಕ್ಷೇತ್ರವು ಎಂದಿನಂತೆ ಮತ್ತೆ ಧರ್ಮಾತ್ಮರ ಸಮೂಹದಿಂದ ಮೆರೆಯುವಂತಾಯಿತು. ಎಲ್ಲರೂ ಈ ಸಂತರತ್ನರ ಸಂದರ್ಶನದಿಂದ ಪುನೀತರಾಗಿ ಭಾವವಿಹ್ವಲರಾಗಿ ಅಭಿನಂದನ ಸಮರ್ಪಣೆಯನ್ನೂ ಸಲ್ಲಿಸಿದರು.

ಕರ್ಮ ಯುಗದ ಆದಿ–ತ್ರಾತಾ (ಮೊದಲ ಧರ್ಮರಕ್ಷಕ) ಭಗವಾನ್ ಆದಿನಾಥ, ಪ್ರಥಮ ಚಕ್ರವರ್ತಿ ಭರತ, ಪ್ರಥಮ ಕಾಮದೇವ ಬಾಹುಬಲಿ ಭಗವಂತರ ಮೂವತ್ತೇಳು ಫೀಟ್ ಎತ್ತರದ ಉತ್ತುಂಗ ಜಿನ ಪ್ರತಿಮೆಗಳ ಹಾಗೂ ಜೈನರ ಇಪ್ಪತ್ನಾಲ್ಕು ಮಹಾನ್ ತೀರ್ಥಂಕರ ಪದ್ಮಾಸನಾಸೀನ ಬಿಂಬಗಳ ಪಾದ ಮೂಲದಲ್ಲಿ ಮುನಿವರ್ಯ ಏಲಾಚಾರ್ಯರ ಚಾತುರ್ಮಾಸ (ವಿಶ್ರಾಮ)ವು ಸ್ವಾಗತಾಭಿವಂದನೆ ಸಮಾರಂಭ ಗಳೊಂದಿಗೆ ಪ್ರಾರಂಭಗೊಂಡಿತು.

ಚಾತುರ್ಮಾಸಾರಂಭದ ಈ ಮಂಗಲಮಯ ಸಮಯದಲ್ಲಿ ಈ ಶಾಂತಮಯ ಕ್ಷೇತ್ರದಲ್ಲಿ ಆಯೋಜಿಸಲ್ಪಟ್ಟಂತೆ ಸಮಾರಂಭದ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಪ್ರಸಿದ್ಧ ಭೂದಾನ ನೇತಾ, ಸಲ್ಲೇಖನಾ ಪೂರ್ವಕ ಸಮಾಧಿ ಹೊಂದಿದ ಸ್ವರ್ಗೀಯ ಪೂಜ್ಯ ವಿನೋಬಾ ಭಾವೆಯರ ಶಿಷ್ಯೋತ್ತಮಳಾದ, ಸುಪ್ರಸಿದ್ಧ ಸಮಾಜ ಸೇವಿಕಾ ಕುಮಾರೀ ನಿರ್ಮಲಾ ದೇಶಪಾಂಡೆಯವರು ಕೆಳಕಂಡ ರೀತಿಯಲ್ಲಿ ಹೇಳಿದರು.

'ವ್ಯಸನ (ದುಶ್ಚಟ) ಹಾಗೂ ಭೋಗಮಯ ಜೀವನದಲ್ಲಿ ನಿರತರಾದ ಮೋಹ ಮಾಯಾಮಯಿಯಾದ ಈ ಮಹಾನಗರಿಯಲ್ಲಿ ಆತ್ಮಾಭಿಮಾನಿಗಳಾದ ಪೂಜ್ಯ ಮುನಿಶ್ರೀ ಗಳವರು ಚಾತುರ್ಮಾಸ ಮಾಡು (ನೆಲೆನಿಲ್ಲು)ತ್ತಿದ್ದಾರೆಂದರೆ ಈ ಸಮಸ್ತ ಮಹಾ

ನಗರದ ನಾಗರಿಕ ಸಮಾಜಕ್ಕೆ ಸಂಯಮದ ವಿಷಯ ವಾಸನೆಯಿಂದ ದೂರವಾದ ಜೀವನವಿಂದ ಜೀವಿಸಬೇಕೆಂಬ ಸಮ್ಯಗ್ ತತ್ವವನ್ನು ಬೋಧನೆ ಮಾಡಲೆಂದೇ ದಯ ಮಾಡಿಸಿದ್ದಾರೆಂದೇ ಭಾವಿಸಬೇಕು. ಈ ನಮ್ಮ ದೇಶದಲ್ಲಿ ಸನಾತನ ಸದಾಚಾರವುಳ್ಳ ಸಂಯಮಿತವಾದ ಜೀವನದ ಉಳಿವು ಇಂತಹ ಸಾಧು–ಸಂತರ ಸಮೂಹದಿಂದಲೇ ಸಾಧ್ಯ. ಎಲ್ಲಿಯ ತನಕ ಶ್ರೀಗಳಂಥವರ ಪಾವನ ಪಾದ ಸಂಚಾರವಿರುವುದೋ, ಕಲು-ಷಿತ ರಾಜನೀತಿಯಿಂದ ಹೊಲಸಾದ ರಾಷ್ಟ್ರದ ಸನಾತನ ಧರ್ಮವು ಅದು ವರೆಗೆ ಸ್ವಲ್ಪವಾದರೂ ಉಳಿದುಕೊಂಡಿದೆ. ಮುಂದೆಯೂ ಉಳಿಯಬಲ್ಲದೆಂಬುದರಲ್ಲಿ ಸಂದೇ-ಹವೇ ಸಲ್ಲದು'.

ಹೀಗೆ ಅಪರಿಗ್ರಹೀ ಪೂಜ್ಯ ವಿದ್ಯಾಚಾರ್ಯ ಮಹಾರಾಜಶ್ರೀಗಳವರ ಚಾತುರ್ಮಾಸದ ಶುಭಾರಂಭವು ಬಹಳ ಉತ್ಸಾಹದೊಂದಿಗೆ

'ಸಂಪೂಜಕಾನಾಂ ಪ್ರತಿಪಾಲಕಾನಾಂ ಯತೀಂದ್ರಸಾಮಾನ್ಯ ತಪೋಧನಾನಾಂ,
ದೇಶಸ್ಯ, ರಾಷ್ಟ್ರಸ್ಯ, ಪುರಸ್ಯ ರಾಜ್ಞಃ ಕರೋತು ಶಾಂತಿಂ ಭಗವಾನ್ ಜಿನೇಂದ್ರಃ'

ಎಂಬ ಘೋಷಣೆಯೊಂದಿಗೆ ಪೂರ್ಣಗೊಂಡಿತು.

ಪ್ರತಿ ರವಿವಾರವೂ ಪೂಜ್ಯ ಮುನಿಶ್ರೀಗಳವರ ಅಮೃತ ವಾಣಿಯ ಲಾಭವು ವ್ಯಸ್ತ ನಗರವಾಸಿಗಳಿಗೆ ದೊರೆಯುತ್ತಿತ್ತು. ಕೋಟಿಗಟ್ಟಲೆ ಜನಸಂಖ್ಯೆ ತುಂಬಿರುವ ಈ ಮಹಾನಗರದ ದೂರ-ದೂರದ, ಮೂಲೆ-ಮೂಲೆಗಳಿಂದ ಶ್ರೋತೃಗಳು ಬಂದು ಶ್ರೀಗಳವರ ಪ್ರವಚನ ಪ್ರವಾಹದಲ್ಲಿ ತಮ್ಮ ಕಲುಷಿತ ಮನದ ಕೊಳೆಯನ್ನು ತೊಳೆಯುತ್ತಿದ್ದರು. ಮುಂಬಯಿಯ ಮಹಾನಗರದ ಪೌದನಾಪುರವು ಇದುವರೆಗೆ ಸರಕಾರದ ಕಾಗದದಲ್ಲಿ ಹಾಗೂ ಭಕ್ತರ ಮಟ್ಟಿಗೆ ಮಾತ್ರ ಪರಿಶುದ್ಧವಾಗಿತ್ತು. ಆದರೆ ಈಗ ಇದು ಭಾರತದ ಭೂಪಟದಲ್ಲೂ ಮೂಡಿ ಬರುವಂತಾಗಿದೆ. ಇಡೀ ದೇಶದ ಎಲ್ಲಾ ಪ್ರಾಂತಗಳಿಂದ ಎಲ್ಲಾ ಮಟ್ಟದ ಶ್ರೇಷ್ಠ ರಾಜನೀತಿಜ್ಞರು, ಘನ ವಿದ್ವಾಂಸರು, ಶ್ರೇಯಾರ್ಥಿಗಳು ಈ ಮಹಾನ್ ಸಂತರ ದರ್ಶನಾಕಾಂಕ್ಷಿಗಳಾಗಿ ಪೌದನಾಪುರಕ್ಕೆ ಬಂದು ದೇವ–ಗುರು ದರ್ಶನದಿಂದ ಧನ್ಯರಾಗುತ್ತಿದ್ದರು. ಪರಮ ಪಾವನವಾದ ತೀನ್ (ಮೂರು) ಮೂರ್ತಿಗಳ ಪಾದಮೂಲದಲ್ಲಿ ಮಸ್ತಕವಿರಿಸಿ ಈ ಕ್ಷೇತ್ರವನ್ನು ಪುಣ್ಯತೀರ್ಥವನ್ನಾಗಿಸಿದ್ದಾರೆ.

ಕ್ಷಮಾವಾಣಿಯ ಮಹಾಪರ್ವದ ಸಂದರ್ಭದಲ್ಲಿ ಪೂಜ್ಯ ಶ್ರೀಗಳವರ ದಿವ್ಯ ವಾಣಿಯನ್ನು ಕೇಳಿ ಆನಂದಿಸುವ ಭಾಗ್ಯವು ಪ್ರಾಂಗಣದಲ್ಲಿ ತುಂಬಿತುಳುಕಿದ್ದ ಅನೇಕ ಭವ್ಯಾತ್ಮರು, ರಾಜನೇತರು, ಅಭಿನೇತರು, ಧರ್ಮಪ್ರೇಮಿಗಳು, ಧನಿಕರು, ಮುಣಿ-ಗಳು ಮುಂತಾದ ಎಲ್ಲರಿಗೂ ಲಭಿಸಿತ್ತು.

ಮುನಿಶ್ರೀಯವರು ತಮ್ಮ ಕ್ಷಮಾವಾಣಿಯ ಪ್ರವಚನದಲ್ಲಿ 'ಈ ಭವ್ಯ ಸ್ಮಾರಕದ ನಿರ್ಮಾಣ ಕಾರ್ಯದಲ್ಲಿ ತಮ್ಮ ಜೀವಿತದ ಅಮೂಲ್ಯವಾದ 25 ವರ್ಷಗಳ ಸತತ ಪರಿಶ್ರಮವನ್ನು ನೀಡಿದ ವಿಶ್ವಸ್ತ ಟ್ರಸ್ಟಿಗಳಾಗಿದ್ದ ನಿಷ್ಠಾವಂತ ಕಾರ್ಯ ಕರ್ತರಾಗಿದ್ದ ಸ್ವರ್ಗೀಯ ಶ್ರೀ ಚಾಂದ್‌ಮಲ್ ಮೆಹತಾರವರು ತಮ್ಮ ಆಶೀರ್ವಾದ ಪಡೆದು 'ತೀನ್

ಮೂರ್ತಿ ಪಾದ ಮೂಲದಲ್ಲಿ ವೀರಗತಿಯನ್ನು ಪಡೆವರೆಂದು' ಸ್ಮರಿಸಿದಾಗ ಎಲ್ಲರೂ ಗದ್ಗದಿತರಾಗಿ ಕಣ್ಣೀರು ಸುರಿಸಿದರು. ಈ ಪೂಜ್ಯಪಾದರ ವರ್ಷಾಯೋಗ (ಚಾತು-ರ್ಮಾಸ)ವು ಇನ್ನೊಮ್ಮೆ ಇಲ್ಲಾಗಲೆಂದು ಮನದಲ್ಲೇ ಭಾವಿಸಿದೆ.

ಪೌದನಾಪುರದ ಪ್ರಾಂಗಣದಲ್ಲಿ ನಡೆದ ಏಲಾಚಾರ್ಯರ ಈ ಚಾತುರ್ಮಾಸ ಪರ್ವವು ಭಾರತದ ಸುಪ್ರಸಿದ್ಧ ಉದ್ಯೋಗಪತಿ ಸೇಠ್ ಶ್ರೀ ಲಾಲ್‌ಚಂದ್‌ಜೀ ಹೀರಾಚಂದ್‌ಜೀಯವರ ಸತ್ಪ್ರಯತ್ನದಿಂದಲೂ ಅವರ ಸುಪುತ್ರಿ ಮುನಿಭಕ್ತೆ ಶ್ರೀಮತಿ ಸರಯೂ ದಫ್ತರಿಯವರ ಪುಣ್ಯ ಪ್ರೇರಣೆಯಿಂದ ಗೌರವಾನ್ವಿತವಾಗಿ ಜರಗಿತೆಂದರೆ ಅತಿಶಯೋಕ್ತಿಯೂ ಅಲ್ಲ, ಅತ್ಪ್ರೇಕ್ಷೆಯೂ ಅಲ್ಲ. ಅವರಿಗೆ ಸರ್ವ ಶ್ರೇಯಸ್ಸೂ ಸೇರಿದ್ದು. ಅವರಿಗೆ ಪ್ರತ್ಯಕ್ಷ-ಪರೋಕ್ಷ ರೂಪವಾಗಿ ಸಹಕಾರ ನೀಡಿದ ಸಮಸ್ತ ಭವ್ಯ ಬಂಧುಗಳಿಗೂ ನನ್ನ ಅಭಿನಂದನೆ ಸಲ್ಲಬೇಕು. ಈ ಪವಿತ್ರ 'ತೀನ್‌ಮೂರ್ತಿ ಕ್ಷೇತ್ರ' ಪರಮ ಪೂಜ್ಯ ಮುನಿ ಏಲಾಚಾರ್ಯ ವಿದ್ಯಾನಂದರ ಪಾದಾರ್ಪಣದಿಂದ ಮುಂದಕ್ಕೆ ಇನ್ನೂ ಹೆಚ್ಚಿನ ಉನ್ನತಿ ಹೊಂದುವಂತಾಗಲೆಂದು ನನ್ನ ಶುಭಭಾವನೆ ಯಾಗಿದೆ.

ಪೂಜ್ಯ ಶ್ರೀಯವರಿಗೆ 1985 ಎಪ್ರಿಲ್ ತಿಂಗಳಲ್ಲಿ ಅವರ ಪುನೀತ ಜೀವನದ 60 ವರ್ಷ (ಷಷ್ಟ್ಯಬ್ದಿ)ಗಳು ತುಂಬುವುದರಿಂದ ಅವರು ಶತಾಯುಷಿಗಳಾಗಲೆಂದು ತುಂಬು ಹೃದಯದಿಂದ ಅಭಿವಂದಿಸುತ್ತೇನೆ.

**ವಿದ್ಯಾನಂದ ವಾಣಿ**

## ಶುಭ ಪರಿಣಾಮ

**ಒಳ್ಳೊಳ್ಳೆ ಮಂತ್ರಗಳನ್ನು ಹೇಳಿ, ಒಳ್ಳೊಳ್ಳೆ ಭಾವನೆ ಗಳನ್ನಿಟ್ಟುಕೊಂಡು ಶುಭ ಪರಿಣಾಮದಿಂದ ಪೂಜೆ ಮಾಡಿದರೆ ನಮ್ಮ ಆತ್ಮ ಸ್ವಚ್ಛ ಆಗುತ್ತಾನೆ. ಹೂವು ತಂದು ಏರಿಸಿ ಬಿಟ್ಟರೆ ಏನು ಲಾಭ? ಮರದಿಂದ ಹೂವು ಕೀಳುವಾಗ ಆ ಮರಕ್ಕೂ ನೋವಾಗುತ್ತದೆ. ಆ ಹೂವಿನ ಮರಕ್ಕೆ ನೋವು ಮಾಡಿ ನೀವು ದೇವರನ್ನು ಪ್ರಸನ್ನಗೊಳಿಸಲು ಶಕ್ಯವೇ?**



# ಹೆಣ್ಣು ಸರ್ಪಗಳ ಲೋಕದಲ್ಲಿ ಚಂದನದ ವೃಕ್ಷ

ಲೇಖಕರು: ಶ್ರೀ ಡಾ. ನೇಮಿಚಂದ ಜೈನ್, ಎಂ.ಎ.,ಪಿಎಚ್.ಡಿ..
ಸಂ. 'ತೀರ್ಥಂಕರ', ಇಂದೋರ್. (ಮಧ್ಯ ಪ್ರದೇಶ)

ಮುನಿಶ್ರೀ ವಿದ್ಯಾನಂದರನ್ನು ಸಾಕ್ಷಾತ್ಕಾರ ಮಾಡಿದ ದಿನ ನನ್ನ ಮನಸ್ಸಿನಲ್ಲಿ ಕಬೀರನ ನೆನಪು ಸುಳಿಯ ತೊಡಗಿತು. ಕಬೀರನ ಅನೇಕ ದೋಹೆ (ಕವಿತೆ)ಗಳು ನನ್ನ ಮನಸ್ಸಿನ ಮೇಲೆ ಮೂಡಿ ಬಂದವು. ಒಂದು ಕವಿತೆಯು ಮೋಡವು ಮಳೆ ಸುರಿಸಿ ಘೋಷಿಸಿಯೇ ಹೋಯಿತು.

'ಸಾಧ್ ಕಹಾವತ್ ಕಠಿನ್ ಹೈ ಲಂಬಾ ಪೇಡ್ ಖಜೂರ್ ।
ಚಢೇ ತೋ ಚಾಖೇ ಪ್ರೇಮರಸ್ ಗಿರೇತೋ ಚಕನಾ ಚೂರ್ ॥'

ಭಾವ– 'ಸಾಧುಗಳ ಗಾದೆ (ಹೇಳಿಕೆ) ಕಠಿಣವಿದೆ. ಖರ್ಜೂರದ ಮರ ಎತ್ತರವಾಗಿದೆ. ಹತ್ತಿದರೆ ಪ್ರೇಮರಸವನ್ನು ಸವಿಯಬಹುದು, ಜಾರಿ ಬಿದ್ದರೆ ಪುಡಿ ಪುಡಿ'.

ಈ ಅರ್ಥ ಗೌರವವನ್ನು ಯೋಚಿಸಿ ಮನ ಮಯೂರವು ಕುಣಿದಾಡತೊಡಗಿತು. ನನ್ನ ಲಕ್ಷ್ಯವು ಕಮಲದ ಎಸಳಿನ ಮೇಲೆ ಮುತ್ತಿನಂತೆ ಹೊಳೆಯುತ್ತಿದ್ದ ಯಾವುದೋ ಒಂದು ಹನಿಯ ಮೇಲೆ ಕೇಂದ್ರಿಕೃತವಾಯಿತು. ಜಲ ಬಿಂದುವು ಹೊಳೆಯುತ್ತಿದೆ ಎಸಳ ಮೇಲೆ, ಆದರೆ ಎಸಳು ಎಸಳೇ ಆಗಿದೆ. ಎರಡೂ ಒಂದೇ ಎರಡೂ ಬೇರೆ ಬೇರೆ. ಅಂದು ಆ ಪರಮ ವ್ಯಕ್ತಿತ್ವದ ಪರಿಚಯದೊಂದಿಗೆ ಒಂದು ಹೊಸದಾದ ಅಲೌಕಿಕ ಜ್ಞಾನ ಉದಯವಾಗುವುದರ ಜೊತೆಗೆ ಅನೇಕಾಂತವು ನವೀನ ಆಕಾರದೊಂದಿಗೆ ನನ್ನ ಕಣ್ಮುಂದೆ ಒಂದು ಅಪೂರ್ವ ಕಾಂತಿ ಹಾಗೂ ವೈಭವದಿಂದ ಕೂಡಿ ಬೆಳಗಿದಂತಾಯಿತು. ಅಷ್ಟರಲ್ಲಿ ಕಬೀರನ ಇನ್ನೊಂದು ದೋಹೆ (ಕವಿತೆ) ಮನಸ್ಸಿನಲ್ಲಿ ಸುಳಿದಂತಾಯಿತು.

'ಪರಮಾರಥ್ ಕೇ ಕಾರಣೇ ಸಾಧುನ್ ಧರಾ ಶರೀರ್'

ಭಾವ– ಪರಮಾರ್ಥದ ಸಾಧನೆಗಾಗಿಯೇ ಸಾಧುಗಳು ಶರೀರ ಧಾರಣೆ ಮಾಡುತ್ತಾರೆ.

ಮುನಿಶ್ರೀಗಳ ಮಾರ್ಗವು ಶಿಲೆಯಂತೆ ಅತ್ಯಂತ ಕಠಿಣವಾದುದು. ಅವರು ಆತ್ಮಾರ್ಥಿಗಳು–ಆತ್ಮಸಾಧಕರು. ಸಮಾಜ ಹಿತ ಕಾರ್ಯಗಳಲ್ಲೂ ಅನಾಸಕ್ತರಾಗಿ ಬಲು ಎಚ್ಚರಿಕೆಯಿಂದ ನಡೆದುಕೊಳ್ಳುತ್ತಾರೆ. ಅವರ ನಸು ನಗುವಿನಲ್ಲಿ ಸಮಾಧಾನವಿದೆ. ವಾಣಿಯಲ್ಲಿ ಸಮನ್ವಯದ ಅಬಾಧಕ (ತಡೆ ಇಲ್ಲದ) ಧ್ವನಿ ಇದೆ. ಅವರ ಪ್ರತಿ ಹೆಜ್ಜೆಯೂ ಮಾನವತೆಯ ಮಂಗಳಮಯ ನಗುವಿನಂತಿದೆ. ಪ್ರತಿಯೊಂದು ಶಬ್ದವೂ ಜೀವನದ ದಾರಿ ತೋರಿಸುವಂತಿದೆ. ಹೆಣ್ಣು ಸರ್ಪಗಳ ಮಧ್ಯದಲ್ಲಿ ಸುವಾಸನೆಯನ್ನು ಬೀರುವ ಚಂದನದ ವೃಕ್ಷದಂತಿದೆ.

ಒಮ್ಮೆ ಓರ್ವ ಸಜ್ಜನ ಮಿತ್ರರು ಮನೆಗೆ ಬಂದರು. ಹೇಳಿದರು 'ನೀವು ಮುನಿಶ್ರೀ ವಿದ್ಯಾನಂದರ ಅಂಥ ಭಕ್ತರು.' ಇದಕ್ಕೆ ಉತ್ತರವಾಗಿ ನಾನು ಸಹಜವಾಗಿಯೇ ಹೇಳಿದೆ 'ಇದರಲ್ಲಿ ನಿಮಗೇನು ಕಷ್ಟ? ಭಕ್ತಿ ಮತ್ತು ಆರಾಧನೆ ವ್ಯಕ್ತಿಗತ ವಿಷಯವಾಗಿದೆ.' ಅವರು ಸಿಗರೇಟಿನ ಒಂದು ದಮ್ಮು ಎಳೆಯುತ್ತಾ ಹೇಳಿದರು 'ಹೀಗೆಯೇ ಹೇಳಿದೆ ನನಗೇನೂ ಕಷ್ಟವಿಲ್ಲ. ನಿಮ್ಮನ್ನು ಆಗಾಗ್ಗೆ ಅವರ ಬಳಿ ಹೋಗುತ್ತಾ ಬರುವುದನ್ನು ಕಂಡಿದ್ದೆ.' ನಾನು ಹೇಳಿದೆ 'ಹಾಗಾದರೆ ನೀವು ಮಿತ್ರರ ಮೇಲೆ ಗೂಢಾಚಾರರನ್ನು ನಿಯಮಿಸಿರುವಂತಿದೆಯಲ್ಲಾ? ಆಗ ಅವರು ಸ್ವಲ್ಪ ಕೆರಳಿದವರಂತೆ ನುಡಿದರು. ಹಾಗೇನೂ ಇಲ್ಲ, ಮಿತ್ರರ ಮೇಲೂ ಗೂಢಾಚಾರರನ್ನು ನಿಯಮಿಸುವುದುಂಟೆ? ಆದರೆ ಮಿತ್ರರ ಬಗ್ಗೆ ಆಸಕ್ತಿ ವಹಿಸಿದರೆ ತಪ್ಪೇ? ಈ ಮಧ್ಯೆ ಆ ಮಿತ್ರರು ಸಿಗರೇಟಿನ ಇನ್ನೊಂದು ದಮ್ಮು ಜೋರಾಗಿ ಸೇದಿದ್ದರು. ನಾನು ತಮಾಷೆಗಾಗಿ ಹೇಳಿದೆ. ನೀವು ಸಿಗರೇಟಿನ ಅಂಥ ಭಕ್ತರೇನು? ನನ್ನ ಪ್ರಶ್ನೆಯಲ್ಲೇ ಉತ್ತರ ದೊರೆತ ಕಾರಣ ಗಾಬರಿಯಿಂದ ಹೊರಡಲು ಸಿದ್ಧರಾದರು. ಅವರು ಹೋಗುತ್ತಿದ್ದಂತೆಯೇ ಅವರ ಕಿವಿಯ ಮೇಲೆ ಬೀಳುವಂತೆಯೇ ಈ ಕೆಳಗಿನ ಕಬೀರನ ಇನ್ನೊಂದು ಕವಿತೆಯನ್ನು ಹೇಳಿಬಿಟ್ಟೆ.

'ಜಾತಿ ನ ಪೂಛೋ ಸಾಧು ಕಿ ಪೂಛ್ ಲೀಜಿಯೇ ಜ್ಞಾನ್।
ಮೋಲ್ ಕರೋ ತಲವಾರ್ ಕಾ ಪಡಾ ರಹನೇ ದೋ ಮ್ಯಾನ್॥'

ಭಾವ– ಸಾಧುವಿನ ಜಾತಿ ಕೇಳಬೇಡಿ? ಜ್ಞಾನವೆಷ್ಟೆಂದು ಕೇಳಿ! ಕತ್ತಿಯ ಬೆಲೆ ಕಟ್ಟಿರಿ. ಪೊರೆ (ತಳವಾರದ ಚೀಲ) ಆಚೆಗೆ ಬಿದ್ದಿರಲಿ. ತಳವಾರಿಗೆ (ಕತ್ತಿ) ಬೆಲೆ ಕೇಳುವುದು ವೀರ ಯೋಧರ ಕರ್ತವ್ಯವಾಗಿದೆ. ಇಂದು ಜೀವನ ಯುದ್ಧದಲ್ಲಿ ಕತ್ತಿಗೆ ಬೆಲೆ ಪ್ರಶ್ನಿಸುವ ರಣಧೀರರೆಷ್ಟು ಮಂದಿ ಸಿಗುತ್ತಾರೆ? ಇಂದು ಹೆಚ್ಚಾಗಿ ಪೊರೆಗೆ ಹೊಡೆದಾಡುವವರೇ ಹೆಚ್ಚು! ಧ್ಯಾನದ ಕಡೆಗೆ ಯಾರಿಗೂ ಗಮನವೇ ಇಲ್ಲ. ಇಲ್ಲಿ ಮುನಿಶ್ರೀಯವರ ಚರಣಗಳು ಸಾಧನೆಯ ಹರಿತವಾದ ಇಬ್ಬಾಯಿಯ ಕತ್ತಿಯ ಮೇಲಿವೆ. ಅವರು ಜ್ಞಾನದ ಶೋಧನೆಯಲ್ಲಿ ಕರ್ಮ ನಿರತರಾಗಿದ್ದಾರೆ. ಅವರ ಒಂದು ಕ್ಷಣವೂ ಕ್ಷೀಣವಾಗುತ್ತಿಲ್ಲ. ಅವರು ಬಾಡುವ ಮೊದಲೇ ಜೀವನ ಕುಸುಮದ ಸುಗಂಧವನ್ನು ಲೋಕದಲ್ಲಿ ಹರಡುತ್ತಿದ್ದಾರೆ. ರೌರವ ಮತ್ತು ಕೌರವರ ಈ ಕಾಲದಲ್ಲಿ ಸೌರಭ (ಸುಗಂಧ)ದ ಸವಿಯನ್ನು ಸವಿಯದ ವ್ಯಕ್ತಿಯು ಭಾಗ್ಯಹೀನನೆಂದು ನಾನು ನಿಜವಾಗಿಯೂ ಕಲ್ಪಿಸದೆ ವಿಧಿಯಿಲ್ಲ.

ಇಂದು ಮುನಿಶ್ರೀಯವರ ಸಾಧನೆಯು ವಿಶ್ವಧರ್ಮದ ಸಾರ್ಥಕತೆಯನ್ನು ಸಾರುತ್ತದೆ. ಅವರ ತೇಜೋಮಯ ವ್ಯಕ್ತಿತ್ವ ಹಾಗೂ ಬೆಂಕಿಯಂತೆ ರಾತ್ರಿ ಹಗಲು ಉರಿಯುವ ಜ್ಞಾನ ದೇಹವನ್ನು ನೋಡಿದವರು ಸಹಜವಾಗಿ ವಿಸ್ಮಯಚಕಿತರಾಗಿ ನಿಂತು ಬಿಡುತ್ತಾರೆ. ಒಂದು ಸ್ವಾಭಾವಿಕ ಮುಗುಳ್ನಗು, ದ್ವಂದ್ವ ರಹಿತವಾದ ಮುಖಮಂಡಲ, ವಿಶಾಲವಾದ ಹಣೆ, ಜ್ಞಾನದ ಕಿಟಕಿ ತೆರೆದು ಜ್ಞಾನವನ್ನು ಹುಡುಕುವ ಕಣ್ಣುಗಳು, ಜೀವನವನ್ನು ತಡವರಿಸಿ ನೋಡುವ ಪ್ರತಿಯೊಂದು ಮುಖ ಮುದ್ರೆ, ದೇಹದಲ್ಲಿ ಎಲ್ಲೂ ಸುಕ್ಕು ಇಲ್ಲ. ಪರಮಾನಂದದ ಮಂಗಲ ಮೂರ್ತಿಯಾದ ಮುನಿಶ್ರೀ

ಯವರು ಬಂದಾಗ ವಿಶಾಲ ಜನತೆಯು ಮುಂದೆ ಪ್ರವಚನಕ್ಕೆ ಉಪಸ್ಥಿತರಾಗುತ್ತಾರೋ ಆಗ ಪೂರ್ವ ದಿಕ್ಕಿನಲ್ಲಿ ಅಪೂರ್ವ ಸೂರ್ಯ ಉದಯವಾದಂತೆ ಭಾಸವಾಗುತ್ತದೆ. ಈ ಜ್ಞಾನ ಸೂರ್ಯನು ಮಧ್ಯಾಹ್ನವಾಗುವುದರೊಳಗೆ ಉಪಸ್ಥಿತ ಜನ ಮಾನಸದಲ್ಲಿ ಅಲೌಕಿಕ ಕರ್ಮ ನಿಷ್ಠೆಯನ್ನು ತುಂಬುವುದಲ್ಲದೆ ಅದನ್ನು ಸಾಧನೆಯ ರೂಪದಲ್ಲಿ ಜಾಗೃತಗೊಳಿಸಬಲ್ಲರು. ಇದು ಸತ್ಯ ಸಂಗತಿಯಾಗಿದೆ. ಏಕೆಂದರೆ ಮುನಿಶ್ರೀಗಳ ವಾಣಿಯು ಜನ ಮನವನ್ನು ಉತ್ತೇಜನಗೊಳಿಸಲು ಸಮರ್ಥವಾಗಿದೆ. ಶರೀರವನ್ನು ಸಂಯಮದಲ್ಲಿ ತೊಡಗಿಸುತ್ತದೆ. ಧನವನ್ನು ಸರಿಯಾದ ಮಾರ್ಗಕ್ಕೆ ಒಯ್ಯುತ್ತದೆ. ಥಳಥಳಿಸುವ ಮಾಯೆಯಲ್ಲಿ ಬಿಸಿಲ್ಗುದುರೆ (ಮೃಗ ತೃಷ್ಣೆ)ಯಲ್ಲಿ ಸಿಕ್ಕಿ ತೊಳಲಾಡುವ ಅನೇಕ ವ್ಯಕ್ತಿಗಳು ನಿತ್ಯವೂ ಮುನಿಶ್ರೀಗಳ ಸಮ್ಮುಖದಲ್ಲಿ ಸೇರುತ್ತಾರೆ. ಜೊತೆಗೆ ಎಲ್ಲರೂ ಒಂದು ಅನಂತ ತೃಪ್ತಿಯನ್ನು ಹೊಂದಿ ಮರಳುತ್ತಾರೆ. ಮುನಿಶ್ರೀಗಳು ಶಿವಾಲಯಕ್ಕೆ ಹೋದರೋ ತಿಳಿಯದು (ಹೋಗಿದ್ದಾರೆ.) ಆದರೆ ಅವರ ದರ್ಶನಾರ್ಥಿಗಳು ಅವರ ದರ್ಶನವನ್ನು ಮಾಡಿದ ಮೇಲೆ ಶಿವಾಲಯವೇ ಸ್ವಯಂ ತಮ್ಮ ಅಂತರಂಗದಲ್ಲಿ ಕರಗುತ್ತಿರುವಂತೆ ಅನುಭವ ಮಾಡುತ್ತಾರೆ. ಅದರಿಂದ ಜನರ ನೂರು ನೂರು ಜೇಸಿಯ ಜನ್ಮ ಜನ್ಮದ ದಾಹವು ಶಾಂತವಾಗುತ್ತದೆ. ಹೀಗೆ ಮುನಿಶ್ರೀಯವರ ದರ್ಶನವು ಜೀವನದ ಸರ್ವೋಚ್ಚ ಶಿಖರದ ದರ್ಶನದಂತೆ ಭಾಸವಾಗುತ್ತದೆ.

ಬಹಳಷ್ಟು ಜನರು ಮುನಿಶ್ರೀ ವಿದ್ಯಾನಂದಜೀಯವರನ್ನು ದಿಗಂಬರ ವೇಷಧಾರಿ ಮುನಿಗಳೆಂದು ತಿಳಿದಿದ್ದಾರೆ. ಶಾಸ್ತ್ರವು ಯಾವ ರೀತಿ ಬಟ್ಟೆಯಿಂದ ಸುತ್ತಲ್ಪಡುತ್ತದೋ ಅದರಂತೆ ಇವರೂ ಕೂಡಾ ಪರಂಪರೆಯ ವೇಷ್ಟನ (ಆವರಣ)ದಿಂದ ಸುತ್ತಲ್ಪಟ್ಟ ರೂಢಿಗ್ರಸ್ತರಾಗಿರಬಹುದು. ಆದರೆ ಹೀಗೆ ಊಹಿಸುವ ಜನರ ಕಣ್ಣುಗಳ ಮೇಲಿನ ಪರದೆ ಜಾರಿ ಅವರಿಗೆ ನವನಿಧಿಗಳ ಅನಂತ ಕೋಶವು ಸಿಕ್ಕಿದಂತಾಗುವುದು. ಅವರ ಮುಂದೆ ಜಾನದ ಆನಂದದ ಒಂದು ಅಪೂರ್ವ ಭಂಡಾರವೇ ಕಂಡು ಬರುತ್ತದೆ. ಅವರಿಗೆ ತಾವು ಯಾವುದೋ ಆಧ್ಯಾತ್ಮಿಕ ಕಲ್ಪವೃಕ್ಷದ ನೆರಳಿನಲ್ಲಿ ನಿಂತಿರುವಂತೆಯೂ ತನ್ನ ಎಲ್ಲಾ ಅಭಿಲಾಷೆಗಳು ಫಲಿಸಿದಂತೆಯೂ ಅನಿಸುವುದು. ಮುನಿಶ್ರೀಗಳು ರೂಢಿವಾದಿಗಳಲ್ಲ. ಪರಂಪರೆಯಭಯತ್ರಸ್ತರೂ ಅಲ್ಲ. ಅವರು ಶುದ್ಧ ಸತ್ಯಾರ್ಥಿಗಳು. ಆಡಂಬರದಲ್ಲಾಗಲೀ, ಪಾಖಂಡಿತನದಲ್ಲಾಗಲೀ ಅವರಿಗೆ ವಿಶ್ವಾಸವಿಲ್ಲ. ಅವರಿಗೆ ಬೇಕಾದುದು ಕೇವಲ ಜ್ಞಾನ ಹಾಗೂ ಸಮ್ಯಗ್‌ಜ್ಞಾನ. ಅವರ ಸಾಧನೆಯು ಕೂಡಾ ಪ್ರತಿ ಕ್ಷಣವೂ ಅದರಲ್ಲೇ ಕೇಂದ್ರೀಕೃತವಾಗಿರುತ್ತದೆ. ಆದರೆ ಅವರ ಚಿಂತನೆಯ ಉದಾರತೆಯು ವ್ಯಕ್ತಿ, ಸಮಾಜ ದೇಶಕ್ಕೆ ಮಾತ್ರವಲ್ಲದೆ ಇಡೀ ಪ್ರಪಂಚಕ್ಕೆ ವಿಸ್ತಾರಗೊಂಡಿರುತ್ತದೆ. ವಿಶ್ವ ಧರ್ಮದ ಒಂದು ಸ್ಪಷ್ಟ ವಾತಾವರಣಕ್ಕೆ ಸಂಬಂಧ ಪಟ್ಟಿರುತ್ತದೆ.

ವ್ಯಕ್ತಿ ಧರ್ಮದಿಂದ ಹಿಡಿದು ಲೋಕ ಧರ್ಮದ ವರೆಗಿನ ಎಲ್ಲಾ ಪರಿಭಾಷೆಗಳೂ ಮುನಿಶ್ರೀಗಳ ಸಂದರ್ಶನವೆಂದರೆ ವಿಶ್ವ ಧರ್ಮದ ಜೊತೆಗಿನ ಪವಿತ್ರ ಸಂದರ್ಶನವೆಂದೇ ಅರ್ಥ. ವಿಶ್ವ ಧರ್ಮವನ್ನು ತಿಳಿಯಬೇಕೆಂದಿದ್ದರೆ ಮುನಿಶ್ರೀಯವರ ವಿಚಾರಗಳನ್ನು ಪೂರ್ಣ ಏಕಾಗ್ರತೆಯಿಂದ ಆಚಮನ (ಮನನ) ಮಾಡಿ ನೋಡಿದಲ್ಲಿ ಒಂದು ವಿಲಕ್ಷಣ ಆತ್ಮ ಸ್ಫೂರ್ತಿಯಿಂದ ವಿಶ್ವ ಧರ್ಮದ ಅನುಭೂತಿಯುಂಟಾಗುವುದು. ಪರಿ

ಭಾಷೆಗಳ ವಿಚಾರಧಾರೆಯಲ್ಲಿ ಜೀವನವು ಸ್ಥೂಲ ಯಾತ್ರೆಯನ್ನು ಮಾಡುತ್ತಿರುತ್ತದೆ. ಆದರೆ ಪರಿಭಾಷೆಗಳ ಆ ಸಮಯದಲ್ಲಿ ಜೀವನ ಯಾತ್ರೆಯು ಒಂದು ಪೂರ್ಣ ಮಂಗಲ ಯಾತ್ರೆಯಾಗಿರುತ್ತದೆ. ಅವರನ್ನು ನೀವು ಕೇಳಬೇಕಾಗಿಯೇ ಇಲ್ಲ. ನೋಡಿದರೆ ಸಾಕು! ಜೈನ ಧರ್ಮದ ಮೂಲ ರೂಪವನ್ನೂ ವಿಶ್ವಧರ್ಮ ವರ್ಣಮಾಲೆಯನ್ನೂ ತಿಳಿದುಕೊಳ್ಳಬಲ್ಲಿರಿ. ನಿಜವಾಗಿಯೂ ವ್ಯರ್ಥವಾಗಿ ಕುತರ್ಕ ಮಾಡುವವರ ಮನಸ್ಸಿನಲ್ಲಿ ಕೊಳೆ ತುಂಬಿರುತ್ತದೆ. ಅವರು ಪ್ರತಿಯೊಂದು ಮಾತನ್ನು ಟೀಕಿಸಲು ತೊಡಗುತ್ತಾರೆ. ಅವರ ನಿಯತ್ತಿನಲ್ಲಿ ನಿಷ್ಪಕ್ಷತೆ ಇರುವುದಿಲ್ಲ. ಗಂಗಾಜಲವನ್ನು ಕುಡಿಯಲು ಹೋಗುವವನು ಬೊಗಸೆ ತುಂಬಿ ಪೂರ್ಣ ನಿಷ್ಠೆಯಿಂದ ತೃಪ್ತಿ ಪೂರ್ವಕವಾಗಿ ಕುಡಿಯುತ್ತಾನೆ. ಅದರ ರುಚಿಯನ್ನು ಸವಿಯುತ್ತಾನೆ. ಆದರೆ ಯಾರು ಪುಣ್ಯ ಜಲ ಪೂರ್ಣವಾದ ಗಂಗೆಯ ಬಳಿ ಪರೀಕ್ಷಿಸಬೇಕೆಂದು ಹೋಗುವನೋ ಅವನಿಗೆ ಆ ಜಲವು ರುಚಿಸುವುದಿಲ್ಲ. ಸಮಯ ಕಳೆಯುತ್ತಾ ಹೋಗುತ್ತದೆ. ಶಕ್ತಿ ಮುಳುಗಿ ಹೋಗುತ್ತದೆ. ಮುನಿಶ್ರೀಯವರು ಪತಿತಪಾವನಿಯಾದ ಗಂಗಾಜಲದ ಧಾರೆಯಾಗಿದ್ದಾರೆ. ಮೂಕನ ಬೆಲ್ಲದಂತೆ ಅದು ಅನುಭೂತಿಗಮ್ಯವಾಗಿದೆ. ಆಸವಿಯನ್ನು ಅರಿಯಬೇಕಾದರೆ ಸಾಧನೆ ಮಾಡಬೇಕು. ಸ್ವಚ್ಛವಾಗಿರಬೇಕು. ಚೆನ್ನಾಗಿ ಅರಿಯಬೇಕು. ಹೀಗಿಲ್ಲವಾದರೆ ಗಂಗಾನದಿಯ ಪ್ರಬಲ ಧಾರೆಯನ್ನು ಯಾರು ತಾನೇ ತಡೆಯಬಲ್ಲರು?

ಮುನಿಶ್ರೀಯವರು ಶಾಸ್ತ್ರ ಬಲ್ಲವರು. ಅವರು ಶಾಸ್ತ್ರ ಸಾಗರವನ್ನು ಚೆನ್ನಾಗಿ ಮಂಥನ ಮಾಡಿದವರು. ಅವರ ಪ್ರವಚನವು ಶಾಸ್ತ್ರ ಸಾಗರದ ಮಹಾ ಮಂಥನದಿಂದ ದೊರೆಯುವ ಅಮೃತ ಕಲಶವಾಗಿದೆ. ಮಾತು ಮಾತುಗಳಲ್ಲಿ ಆಳವಾಗಿ ವಿಶ್ಲೇಷಿಸುವುದು ಅವರ ಸ್ವಭಾವವಾಗಿದೆ. ಮನೋ ವಿನೋದವೂ ಇದೆ. ಜೀವನದ ಗಂಭೀರ-ತೆಯೂ ಜೊತೆಗೆ ಇದೆ. ಇದನ್ನು ಅವರ ಮಾತುಕತೆಗಳಲ್ಲೂ ಅವರ ಜೀವನದಲ್ಲೂ ಕಾಣಬಹುದು. ಅವರು ಬಾಲಕನಂತೆ ಸರಳ ಹಾಗೂ ಪ್ರಶ್ನೆ ಕೇಳುವುದರಲ್ಲಿ ಉತ್ಸುಕರಾಗಿ ಪ್ರತಿಕ್ಷಣ ಕುತೂಹಲ ಭಾವದಿಂದ ತುಂಬಿರುತ್ತಾರೆ. ಶೈಶವದಂತಹ ಅದ್ಭುತವಾದ ಸ್ವಭಾವವು ಅವರ ಜೀವನದ ಅವಿಭಾಜ್ಯ ಅಂಗವಾಗಿದೆ. ಬಾಲಕರಲ್ಲಿ ಅವರಿಗಿರುವ ಅಭಿರುಚಿಯು ವೃದ್ಧರಲಿಲ್ಲ. ಆದುದರಿಂದ ಅವರು ಹೆಚ್ಚಾಗಿ ಬಾಲಕರೊಂದಿಗೆ ಮಿಳಿತರಾಗುತ್ತಾರೆ. ಬಾಲಕರ ಸರಳ ಹಾಗೂ ನಿಷ್ಕಪಟವಾದ ನಗುವಿನಲ್ಲಿ ವಾತ್ಸಲ್ಯದಲ್ಲಿ ಬೆರೆಯುತ್ತಾರೆ. ಮತ್ತು ಉಪಸ್ಥಿತರ ಮುಂದೆ ಆ ವಾತ್ಸಲ್ಯವನ್ನು ಚೆಲ್ಲುತ್ತಾರೆ. ಮಕ್ಕಳಿಂದ ಅವರಿಗೆ ಹೊಸ ಚೈತನ್ಯ ದೊರೆಯುತ್ತದೆ. 'ಚೈಲ್ಡ್ ಈಸ್‌ದ ಫಾದರ್ ಆಫ್ ಮೇನ್' ಎಂಬ ಇಂಗ್ಲೀಷ್ ಗಾದೆಯನ್ನು ಅವರು ಚೆನ್ನಾಗಿ ತಿಳಿದಿದ್ದಾರೆ. ಶಾಸ್ತ್ರದ ಶುಷ್ಕ ನೀರಸ ಭಾಗವನ್ನು, ಶಿಶು ಸುಲಭವಾದ ಸೌಂದರ್ಯ, ಸರಳತೆ ಮತ್ತು ನಿಷ್ಕಾಪಟ್ಯದ ರಸದಿಂದ ತುಂಬಿಸಿ ಸರಸ ಗೊಳಿಸುವುದು ಮುನಿಶ್ರೀಗಳ ವ್ಯಕ್ತಿತ್ವದ ದೊಡ್ಡ ಆಕರ್ಷಕ ಭಾವವಾಗಿದೆ.

ಮುನಿಶ್ರೀಗಳು ರಾಷ್ಟ್ರೀಯ ಸಮನ್ವಯದ ಒಂದು ಸೇತುವೆಯಂತಿದ್ದಾರೆ. ಅವರ ಜನ್ಮವು ಕರ್ನಾಟಕ ಪ್ರದೇಶದ ಬೆಳಗಾಂವ್ ಜಿಲ್ಲೆಯ ಶೇಡಬಾಳ ಗ್ರಾಮದಲ್ಲಿ 1925 ನೆಯ ಇಸವಿ ಎಪ್ರಿಲ್ 22ನೆಯ ದಿನಾಂಕದಂದು ಆಯಿತು. ಸುರೇಂದ್ರಕುಮಾರ

ರಿಂದ ಪಾರ್ಶ್ವಕೀರ್ತಿ ಮತ್ತು ಪಾರ್ಶ್ವಕೀರ್ತಿಯಿಂದ ಮುನಿಶ್ರೀ ವಿದ್ಯಾನಂದರ ತನಕ ಅವರ ಸಾಧನೆಯ ಸೋಪಾನಗಳಾಗಿವೆ. ಬ್ರಹ್ಮಚರ್ಯ, ಕ್ಷುಲ್ಲಕ ಜೀವನ ಈಗ ಪರಮ ದಿಗಂಬರತ್ವ ಹೀಗೆ ಅವರ ಸಾಧನೆಯು ಸಾಗುತ್ತಾ ಬಂದಿದೆ. ಕನ್ನಡ, ಸಂಸ್ಕೃತ, ಪ್ರಾಕೃತ, ಅಪಭ್ರಂಶ ಹಿಂದಿ, ಮರಾಠಿ, ಇಂಗ್ಲೀಷ್ ಇನ್ನೂ ಅನೇಕ ಭಾಷೆಗಳನ್ನು ಬಲ್ಲರು. ಒಂದು ದಿನ ಜಪಾನಿನ ಕೆಲವು ಮಂದಿ ಪ್ರವಾಸಿಗಳು ಅವರನ್ನು ಕಾಣಲು ಬಂದಿದ್ದರು. ಜಪಾನಿನ ಸಾಂಸ್ಕೃತಿಕ ಮತ್ತು ಧಾರ್ಮಿಕ ಶಬ್ದಾವಲಿಯ ಪರಿಗಿಸ ಜ್ಞಾನವನ್ನು ಸಹ ಮಾಡಿಕೊಂಡು ಬಿಟ್ಟರು. ಅವರು ಯಾವ ಭಾಷೆ ತಿಳಿದಿದ್ದಾರೋ, ಅಥವಾ ಕಲಿಯುತ್ತಾರೋ, ಅದರ ಉದ್ದೇಶ ಕೇವಲ ಅರಿಯುವುದು ಮಾತ್ರವಾಗಿದೆ. ಭಾಷಾ ದ್ರೋಹವು ಅವರ ದೃಷ್ಟಿಯಲ್ಲಿ ರಾಷ್ಟ್ರೀಯ ಚಿಂತನೆಗೆ ಅತ್ಯಂತ ವಿರೋಧಿ ಯೆಂದು ತಿಳಿಯುತ್ತಾರೆ. ಮಾಧ್ಯಮಕ್ಕಿಂತ ಅವರಿಗೆ ಲಕ್ಷ್ಯದ ಮೇಲೆಯೇ ಹೆಚ್ಚು ಲಕ್ಷ್ಯವಿರುತ್ತದೆ. ಸಾಧನವೂ ಸಹ ಪ್ರತಿಕ್ಷಣದಲ್ಲಿ ನಿರ್ಮಲವಾಗಿರಬೇಕೆಂಬುದು ಉಜ್ವಲವಾದ ಅವರ ಪಕ್ಷವಾಗಿದೆ. 'ಪಿಚ್ಛಿ ಕಮಂಡಲು' ಅವರ ಹೆಚ್ಚು ಬೆಲೆ ಬಾಳುವ ಬೆಣ್ಣೆಯಂತಹ ಶ್ರೇಷ್ಠ ಕೃತಿಯಾಗಿದೆ. ಅದು ಸಂಕಲನ ದೃಷ್ಟಿಯಿಂದ ಉತ್ತಮ ಗ್ರಂಥ ವಾಗಿದೆ. ಜ್ಞಾನ ಪೂರ್ಣವಾದ ಡಿಕ್ಷ್ನರಿಯಾಗಬಲ್ಲ ಸಮರ್ಥ ಗ್ರಂಥರತ್ನವಾಗಿದೆ.

ಮುನಿಶ್ರೀಯವರು ಪರಮಾರ್ಥ ಪುರುಷರಾಗಿದ್ದಾರೆ. ಅವರಲ್ಲಿ ದಕ್ಷಿಣ ಮತ್ತು ಉತ್ತರ, ವ್ಯವಹಾರ ಮತ್ತು ನಿಶ್ಚಯ, ಲೋಕ ಕಲ್ಯಾಣ ಆತ್ಮ ಕಲ್ಯಾಣ, ವ್ಯಕ್ತಿ ಮತ್ತು ವಿಶ್ವ ಅನೇಕಾಂತ ಸ್ಯಾದ್ವಾದ ಅಂದರೆ ವಿಶ್ಲೇಷಣೆ ಮತ್ತು ಸಂಶ್ಲೇಷಣೆ ಇವು ಜೊತೆಗೆ ಸ್ಪಂದಿಸುತ್ತವೆ. ಈ ದೃಷ್ಟಿಯಿಂದ ಅವರ ಪ್ರವಚನವು ಅಗಾಧವಾದ ಸಮುದ್ರ ದಂತಿದೆ. ಅದರಲ್ಲಿ ವಿದ್ವಾಂಸರಿಗೆ ಹೆಚ್ಚಿನ ವಿದ್ವತ್ತು ಹಾಗೂ ಸಾಮಾನ್ಯ ವ್ಯಕ್ತಿಗೆ ಸರಿಯಾದ ಮಾರ್ಗದರ್ಶನ ತುಂಬಿರುತ್ತದೆ. ಜನರು ಮುನಿಶ್ರೀಗಳ ಜೀವನ ದಾಯೀ ಸಂಕೇತದಂತೆ ಬಾಗುತ್ತಾರೆ. ಅವರು ಧಾರ್ಮಿಕ, ವೈಶ್ವಿಕ ಮತ್ತು ರಾಷ್ಟ್ರೀಯ ವ್ಯಕ್ತಿ ಗಳಾಗಿ ಒಮ್ಮೆಗೇ ಗೋಚರಿಸುತ್ತಾರೆ. ಆ ಲೋಕಕ್ಕೆ ಆ ಲೋಕವಾಗಿಯೂ, ಎಲ್ಲ ರಿಗೂ ಮುನಿಶ್ರೀ ವಿದ್ಯಾನಂದರು ಅಜಸ್ರವಾ ಹರಿಯುವ ಪ್ರವಾಹದಂತಿದ್ದಾರೆ.

ಒಂದು ದಿವಸ ನಾನು ಮುನಿಶ್ರೀಗಳ ಮಾನಸ ತಟದ ಮೇಲೆ ನನ್ನ ದೋಣಿ ಯನ್ನು ಸಾಗಿಸಿಯೇ ಬಿಟ್ಟೆ. ಸಾಯಂಕಾಲದ ಸುಮಾರು 5 ಗಂಟೆಯಾಗಿರಬಹುದು. ಏಕಾಂತವಾಗಿತ್ತು. ಒಂದು ಕಟ್ಟಡದ ಸುತ್ತಮುತ್ತಲು ಜನಗಳ ಸಂಚಾರ ಓಡಾಟ ವಿತ್ತು. ಆದರೆ ಒಳಗೆ ಪೂರ್ಣವಾದ ಶಾಂತಿ ನೆಲೆಸಿತ್ತು. ನಾನು ಮುನಿಶ್ರೀಗಳಿಗೆ 'ತೀರ್ಥಂಕರ ಪತ್ರಿಕೆಯಲ್ಲಿ ಕೆಲವು ಸರಳರೇಖಾ ಚಿತ್ರಗಳನ್ನು ಛಾಪಿಸಬೇಕೆಂಬ ಅಭಿ ಲಾಷೆ ಇದೆ' ಎಂದು ಹೇಳಿದೆ. ಅದಕ್ಕೆ ಮುನಿಶ್ರೀಗಳು ಈ ಕಾಲದಲ್ಲಿ ಸರಳರೇಖಾ ಚಿತ್ರವನ್ನು ಯಾರು ಬರೆಯುತ್ತಾರೆ? ತನ್ನಿ ಇಲ್ಲಿ ಏನಾದರೂ ಮಾಡಲಾಗುತ್ತದೋ ನೋಡೋಣ ಎಂದು ಹೇಳಿ ಒಂದು ಕಾಗದ ತೆಗೆದುಕೊಂಡು ಚಿತ್ರ ಬರೆಯ ತೊಡಗಿ ದರು. ಆಹಾರ ಮುದ್ರೆ, ಪಿಂಛ, ಕಮಂಡಲು, ಕಡಿಮೆ ರೇಖೆಗಳು! ಅಧಿಕ ಭಾವಾಭಿ ವ್ಯಂಜನ! ನೋಡಿ ನಾನು ಸ್ತಬ್ಧನಾದೆ. ಮನದಲ್ಲೇ ಯೋಚಿಸ ತೊಡಗಿದೆ. ಇವರು ಮುನಿಗಳು! ಮಹಾಮುನಿಗಳು ಜೀವನದ ಚಿತ್ರಗಾರ! ಮುಕ್ತಿಯ ಮಹಾಶಿಲ್ಪಿ!

ಮಾನವೀಯತೆಯ ಚಿತ್ರಣ! ಮುನಿಶ್ರೀಗಳವರು ಎಲ್ಲವೂ ಹೌದು, ಕೆಲವರು ಶೂನ್ಯವನ್ನು ಒಂದು ಸಂಖ್ಯೆಗೆ ಮೊದಲು ಎಣಿಸುತ್ತಾರೆ. ಮತ್ತೆ ಕೆಲವರು ಸಂಖ್ಯೆಯ ಮುಂದೆ ಹತ್ತು, ನೂರು, ಸಾವಿರ, ಲಕ್ಷ ಪಟ್ಟು ಹೆಚ್ಚು ಹೆಚ್ಚು ಸೇರಿಸಿ ಬರೆಯುತ್ತಾರೆ. ಗಂಗಾಜಲದ ರುಚಿಯು ಬೇರೆ ಬೇರೆ ಅನುಭೂತಿಗಳಿಗೆ ಬೇರೆ ಬೇರೆ ರೀತಿ ತೋರುವುದು ಸಹಜ. ಗಂಗಾ ಪ್ರವಾಹದಂತೆ ಯೋಗೀಶ್ವರ ಮುನಿಶ್ರೀಗಳವರು ಇದ್ದಾರೆ.

ಸಂಯೋಗಿತಾ ಗಂಜ್ (ಇಂದೋರ್)ನ ಮಂದಿರದಲ್ಲಿ ಮುನಿಶ್ರೀಗಳು ವಿರಾಜಿಸಿದ್ದಾಗಿನ ಸಂಗತಿ. ಮೂರ್ತಿಗಳ ಪ್ರಸಂಗ ಬಂದಾಗ ಅವರು ಎದ್ದು ಎಲ್ಲಾ ಮೂರ್ತಿಗಳನ್ನೂ ಸುತ್ತಾಡಿಕೊಂಡು ಬಂದರು. ಈ ಮಧ್ಯೆ ಅವರು ಮೂರ್ತಿಗಳು ಹೇಗಿರಬೇಕು? ದರ್ಶಕರ ನೇತ್ರ ಮುದ್ರೆ ಮತ್ತು ಮೂರ್ತಿಯ ಮುಖಮುದ್ರೆಗಳಲ್ಲಿ ಸಾಮ್ಯ ಭಾವ ಹೇಗಿರಬೇಕು? ಮೂರ್ತಿಗಳ ಶಿಲ್ಪ ರಚನೆ ಎಂತಹುದು? ಅದರಲ್ಲಿ ಪ್ರಕಾರಗಳೆಷ್ಟು? ಇವೇ ಮುಂತಾದುವುಗಳನ್ನು ವಿವರಿಸಿ ಹೇಳಿದರು. ಶಿಲ್ಪ ವಿಚಾರವಾಗಿ ಇಷ್ಟೊಂದು ವಿಸ್ತಾರವಾದ ಜ್ಞಾನ ಪಡೆದ ಅವರನ್ನು ಕಂಡು ಆಶ್ಚರ್ಯಚಕಿತನಾದೆ. ನಾನು ಮನದಲ್ಲೇ ಹೇಳಿಕೊಂಡೆ 'ಕೇಸವ ಕಹಿ ನ ಜಾಇಕಾ ಕಹಿಯೇ' ಮುನಿಗಳಿದ್ದರೆ ಹೀಗಿರಬೇಕು. ಒಳಗಿನಿಂದ ಪರಮಸಾಧಕರು, ಹೊರಗಿನಿಂದ ವಿಶುದ್ಧ ತಪಸ್ವಿಗಳು! ಎಂಟೂ ಜಾವ ತಪಸ್ವಿಗಳು. ಪ್ರತಿ ಸಲವೂ ದೊರೆವ ಪರಮ ಸ್ವಾದವನ್ನು ನಿರಂತರವೂ ಉದಾರ ಭಾವದಿಂದ ಹಂಚುತ್ತಾರೆ. ಹಂಚಿದಷ್ಟು ಜ್ಞಾನ ಹೆಚ್ಚಾಗುವುದು. ಉಜ್ಜಿ ಬೆಳಗಿದಷ್ಟೂ ಉಜ್ಜ್ವಲವಾಗುವುದು, ನಿರ್ಮಲವಾಗಿರುವುದು. ಹೀಗೆ ಮುನಿಶ್ರೀಯವರು ಜ್ಞಾನದ ಅತುಲಸಾಗರ, ಜ್ಞಾನಸುಮೇರುಗಳಾಗಿದ್ದಾರೆ.

ಅವರ ಅಧ್ಯಯನವು ಆಳವಾಗಿದೆ. ಅವರು ಒಮ್ಮೆ ಹಿಡಿದ ಸೂತ್ರವನ್ನು ಕೊನೆಯ ತನಕ ಶೋಧಿಸಿಯೇ ನೋಡುತ್ತಾರೆ. ರಾಮನನ್ನು-ರಾಮಕಥೆಯನ್ನು ಅವರು 18 ಭಾಷೆಗಳಲ್ಲಿ ತಿಳಿದಿದ್ದಾರೆ. ಆದುದರಿಂದ ಅವರ ಮುಖದಿಂದ ಸೀತೆಯ ಅಥವಾ ರಾಮನ ಚರಿತ್ರೆ ತಿಳಿದಷ್ಟು ಬೇರೆ ಕಡೆ ತಿಳಿಯಲಾರೆವು. ಮನಸ್ಸು ಕರುಣಾರಸದಲ್ಲಿ ಮುಳುಗೇಳುತ್ತದೆ. ದಕ್ಷಿಣದ ರಾಮ, ಉತ್ತರದ ರಾಮ, ಪೂರ್ವದ ರಾಮ, ಪಶ್ಚಿಮದ ರಾಮ ಎಲ್ಲಾ ಕಡೆಯೂ ರಾಮತ್ವವು, ಅಭಿರಾಮತ್ವವು ಅದರಲ್ಲಿ ತುಂಬಿರುತ್ತದೆ. ಅವರಿಗೆ ಪೂರ್ವದ ದೋಷಗಳ ಮೇಲೆ ಮೋಹವಾಗಲೀ, ಪಶ್ಚಿಮದ ಒಳ್ಳೆಯ ಗುಣಗಳ ಮೇಲೆ ದ್ರೋಹ ಭಾವವಾಗಲೀ ಇರುವುದಿಲ್ಲ. ಒಳ್ಳೆಯ ಗುಣಗಳನ್ನು ಜೀವನದ ಪ್ರತಿ ಕಿಟಕಿಗಳ ಮೂಲಕ ಬರಮಾಡಿಕೊಳ್ಳುತ್ತಾರೆ. ಜೀವನಕ್ಕೆ ಒಳ್ಳೆಯ ತತ್ತ್ವದ ಬೆಳಕು ಎಲ್ಲಿಂದಲೇ ಬರಲಿ, ಅದರ ಸ್ವಾಗತಕ್ಕಾಗಿ ಕಾದು ನಿಲ್ಲುತ್ತಾರೆ. ಅವುಗಳನ್ನು ಅಭಿನಂದಿಸುವುದಕ್ಕಾಗಿ ಸಮಾಜಕ್ಕೆ ಪ್ರೇರಣೆ ನೀಡುತ್ತಾರೆ. ಅವರ ಕರ್ತೃತ್ವವು ಬಹಳ ದೊಡ್ಡದು. ಅವರ ಜೀವನ ಸಮರ್ಪಿತವಾಗಿದೆ. ಆತ್ಮನ ಅನಂತ ಯಾತ್ರೆಯಲ್ಲಿ ಅವರ ಅರವಟ್ಟಿಗೆಗೆ ಬಾಯಾರಿ ಬರುವ ಪಿಪಾಸುಗಳಿಗೆ ಅನಂತ ತೃಪ್ತಿಯ ವರದಾನವು ಅನಾಯಾಸವಾಗಿ ದೊರೆಯುತ್ತದೆ. ವ್ಯಥಿತ-ತೃಷಿತ ವ್ಯಕ್ತಿಯು ಯಾವನೇ ಅವರ ಬಳಿ ಹೋದರೂ ಅವನ ಮನಸ್ಸಿನ ಗಾಯಗಳೆಲ್ಲ ಮಾಯವಾಗಿ ಅವರ ಚಂದನಸದೃಶವಾದ ಚರ್ಚೆಯಿಂದ ಮಧುರ ತುಂಬಿಕೊಳ್ಳುತ್ತದೆ.

ತರುಣ ಪತ್ರಿಕೆಕಾರ 'ಶ್ರೀ ಗಜಾನಂದ್' ಢೆರೋಲಿಯಾರವರ ಲೇಖಾಂಶ ದೊಂದಿಗೆ ಈ ಲೇಖನವನ್ನು ಸಮಾಪ್ತಿಗೊಳಿಸಲು ಬಯಸುತ್ತೇನೆ. ದಿಲ್ಲಿಯಲ್ಲಿ ಒಮ್ಮೆ ಮುನಿಶ್ರೀಯವರ ದರ್ಶನಕ್ಕಾಗಿ ಕೆಲವು ಜಪಾನೀ ವಿದ್ಯಾರ್ಥಿಗಳ ಒಂದು ತಂಡ ಬಂದಿತ್ತು. ಅವರಲ್ಲೊಬ್ಬ ಹೇಳಿದ 'ನಮ್ಮಲ್ಲಿ ಧರ್ಮ ಅಧರ್ಮಗಳ ಯಾವ ಭೇದವೂ ಇಲ್ಲ.' ಮುನಿಶ್ರೀಯವರು ತುಂಬಾ ಆತ್ಮೀಯತೆಯಿಂದ ಹೇಳಿದರು. 'ನೀವು ಹೇಳು ವುದು ಸರಿಯಲ್ಲ! ಪ್ರತಿಯೊಬ್ಬ ವ್ಯಕ್ತಿಯೂ ಧರ್ಮ ಹಾಗೂ ಅಧರ್ಮಗಳಲ್ಲಿ ವ್ಯತ್ಯಾಸ ಕಾಣುತ್ತಾನೆ. ನೀವು ಸ್ವತಃ ಧರ್ಮವು ಒಳ್ಳೆಯದೆಂದೂ ಅಧರ್ಮವು ಕೆಟ್ಟದೆಂದೂ ನಂಬುತ್ತೀರಿ.' ವಿದ್ಯಾರ್ಥಿಯು ಉತ್ತರ ಕೊಡುತ್ತಾ ಹೇಳಿದ 'ನನಗೆ ಧರ್ಮದ ಮೇಲೆ ನಂಬಿಕೆಯೇ ಇಲ್ಲವೆಂದು ಹೇಳಿದೆನಲ್ಲಾ'. ಮುನಿಶ್ರೀಯವರು ಕೇಳಿದರು. 'ನಿಮ್ಮ ತಲೆಯ ಮೇಲೆ ಯಾರಾದರೂ ಲಾಠಿಯಿಂದ ಹೊಡೆದರೆ ನಿಮಗೆ ಹೇಗಾಗುತ್ತದೆ?' 'ಬಹಳ ಕೆಡುಕೆನಿಸುತ್ತದೆ.' ವಿದ್ಯಾರ್ಥಿಯು ತಕ್ಷಣ ಉತ್ತರಿಸಿದ. 'ಆ ಮೇಲೆ ಯಾರಾದರೂ ನಿಮ್ಮ ಗಾಯಕ್ಕೆ ಮುಲಾಮು ಪಟ್ಟಿ ಹಾಗೂ ಚಿಕಿತ್ಸೆಗಾಗಿ ಆಸ್ಪತ್ರೆಗೆ ಕರೆದೊಯ್ದರೆ?' ಮುನಿಗಳು ಮರು ಪ್ರಶ್ನೆ ಹಾಕಿದರು. ಅದಕ್ಕೆ ವಿದ್ಯಾರ್ಥಿಯು 'ಬಹಳ ಸಂತೋಷವಾಗುವುದು.' ಮುನಿಶ್ರೀಯವರು ಸೂತ್ರ ಧಾರ ಹಿಡಿದು 'ಮೊದಲ ಕೆಲಸ ಅಧರ್ಮ.' ಎರಡನೆಯ ಕೃತ್ಯ 'ಧರ್ಮ' ಎಂದರು. ಜಪಾನೀ ವಿದಾರ್ಥಿ ತಂಡವು 'ಧರ್ಮ'ದ ಈ ಸ್ವಾಭಾವಿಕ ಸರಳ ಪರಿಭಾಷೆಯನ್ನು ದಾರಿ ಬುತ್ತಿಯ ರೂಪ ದಲ್ಲಿ ಸ್ವೀಕರಿಸಿ ಮರಳಿತು. ಹೀಗೆ ಮುನಿಶ್ರೀಗಳು ಜೀವನ ಸಂದರ್ಭಗಳಲ್ಲಿ ಅವುಗಳ ಮೂಲ್ಯಗಳ ಹೊಸ ರೂಪದ ಪರಿಭಾಷೆಗಳನ್ನು ನೀಡುವುದೂ ಕೂಡಾ ಅವರ ಒಂದು ವೈಶಿಷ್ಟ್ಯ ಗುಣವಾಗಿದೆ. ಅವರು ವರ್ತಮಾನದ ಕುರಿತು ಜಾಗರೂಕರಾಗಿಯೂ ಭವಿಷ್ಯದ ಬಗ್ಗೆ ಆಶಾವಾದಿಗಳಾಗಿಯೂ ಅತೀತದ ಬಗ್ಗೆ ನಂಬಿಕೆಯುಳ್ಳವರಾಗಿಯೂ ಇರುತ್ತಾರೆ.

ಆದುದರಿಂದ ಅವರ ಈ ಜನ್ಮ ದಿನದಂದು ಅವರಂತಹ ಪರಮ ಯೋಗೀಶ್ವರರು ಯುದ್ಧ ಸಂತಪ್ತ ವಿಶ್ವದ ಕಣ್ಣಿಗೆ ಅನೇಕಾಂತದ ಅಂಜನ ತೀಡಿ ಶಾಂತಿ ನೀಡುತ್ತಿರು ವುದರಿಂದ ಅವರಿಗೆ ನನ್ನ ಕೋಟಿ ಕೋಟಿ ಪ್ರಣಾಮಗಳು.



# ಜಿನಶಾಸನ ಪ್ರಭಾವಕ ಲೋಕಪ್ರಿಯ ಸಾಧುಗಳು

ಲೇಖಕರು: **ಶ್ರೀ ಪಂ. ಡಾ. ಪನ್ನಾಲಾಲ್**, ಸಾಹಿತ್ಯಾಚಾರ್ಯ,
ಅಧ್ಯಕ್ಷರು, ಅಖಿಲ ಭಾರತೀಯ ದಿಗಂಬರ ಜೈನ
ವಿದ್ವತ್ ಪರಿಷದ್, **ಸಾಗರ.** (ಮಧ್ಯ ಪ್ರದೇಶ)

ಏಲಾಚಾರ್ಯ ಸಿದ್ಧಾಂತ ಚಕ್ರವರ್ತಿ ಶ್ರೀ ವಿದ್ಯಾನಂದಜೀ ಮಹಾರಾಜರು ವಿದ್ವಾಂಸರಾಗಿದ್ದಾರೆ. ಅವರು ಸಮಾಜದ ಎಲ್ಲಾ ಆಗು–ಹೋಗುಗಳನ್ನು ತಿಳಿದು ಕೊಂಡಿದ್ದಾರೆ. ಎಲ್ಲಿ ಯಾವುದೇ ರೀತಿಯ ಕಾರ್ಯಕ್ರಮಗಳಿದ್ದರೂ ಅವುಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುವಂತೆ ಮಾರ್ಗದರ್ಶನ ನೀಡುತ್ತಾರೆ. ಭಗವಾನ್ ಮಹಾ-ವೀರಸ್ವಾಮಿಯ 2500ನೆಯ ನಿರ್ವಾಣ ಮಹೋತ್ಸವವನ್ನು ಒಳ್ಳೆಯ ರೀತಿಯಿಂದ ನಡೆಸಲು ಅವರು ಮಾರ್ಗದರ್ಶನವನ್ನು ಹಾಕಿಕೊಟ್ಟರು. ಅದೇ ರೀತಿ ಬಾಹುಬಲಿ ಮಸ್ತಕಾಭಿಷೇಕದ ಸಮಯದಲ್ಲಿ ಅವರು ಶ್ರಮಿಸಿದರು.

ಅವರು ಲೋಕಪ್ರಿಯ ಸಂತರಾಗಿದ್ದಾರೆ. ಅವರು ಜೈನಧರ್ಮವನ್ನು ಮಾತ್ರ ವಲ್ಲದೆ ಇತರ ಎಲ್ಲಾ ಧರ್ಮಗಳ ಬಗ್ಗೆಯೂ ಆಳವಾಗಿ ಅಧ್ಯಯನ ನಡೆಸಿದ್ದಾರೆ. ಜೈನ ಧರ್ಮವಲ್ಲದೆ ಇತರ ಧರ್ಮಗಳಿಂದಲೂ ವಿಚಾರಗಳನ್ನು ಆರಿಸಿಕೊಂಡು ಸರಳ ಭಾಷೆಯಲ್ಲಿ ಪ್ರತಿಪಾದಿಸುತ್ತಾರೆ. ಆದುದರಿಂದ ಅವರ ಪ್ರವಚನಗಳಲ್ಲಿ ಜೈನ ಧರ್ಮಿಗಳೇ ಸೇರಿರದೆ ಇತರ ಧರ್ಮಗಳ ಜನರೂ ಸಹಸ್ರಾರು ಸಂಖ್ಯೆಯಲ್ಲಿ ನೆರೆದಿರುತ್ತಾರೆ. ಅವರ ಪ್ರವಚನಗಳಲ್ಲಿ ಸಹಸ್ರಾರು ಜನರು ಸೇರಿದ್ದರೂ ಯಾವುದೇ ರೀತಿಯ ತೊಂದರೆಗಳನ್ನು ಮಾಡದೆ ಜನರು ಶಾಂತರಾಗಿ ಕೇಳುತ್ತಾರೆ. ಅವರು ಪ್ರವಚನ ನಡೆಸುವ ಸ್ಥಳಕ್ಕೆ ಆರಿಸಿದ ವಿಷಯಗಳ ಬಗ್ಗೆ ಆಳವಾಗಿ ಚಿಂತಿಸಿ ಪ್ರವಚನ ನೀಡುತ್ತಾರೆ. ಇದು ಶ್ರೋತೃಗಳ ಮೇಲೆ ಪ್ರಭಾವ ಬೀರುತ್ತದೆ.

ಬದರೀನಾಥ ಯಾತ್ರೆಯಲ್ಲಿ ಜೈನ ಮುನಿಗಳ ಬಗ್ಗೆ ಹಾಗೂ ಧರ್ಮದ ಬಗ್ಗೆ ಆದ ಭಾವನೆಯು ಇತರರಿಗೂ ದಾರ್ಶನಿಕವಾಗಿದೆ. ದಕ್ಷಿಣದಿಂದ ಹಿಡಿದು ಉತ್ತರ ಭಾರತದವರೆಗೂ ಅವರು ಧರ್ಮದ ಪ್ರಚಾರವನ್ನು ಮಾಡುತ್ತಾರೆ. ಭಗವಾನ್ ಮಹಾವೀರರ 2500ನೆಯ ಪರಿ ನಿರ್ವಾಣ ಮಹೋತ್ಸವದ ಸಮಯದಲ್ಲಿ ಜೈನ ವಿದ್ವಾಂಸರನ್ನು ಸನ್ಮಾನಿಸುವ ಯೋಜನೆಗೆ ಶ್ರೀಮಂತರೆಲ್ಲರೂ ಬೆಂಬಲ ನೀಡಿದರು. ಅಷ್ಟೇ ಅಲ್ಲದೆ ಹಲವು ಕಡೆ ಅನೇಕ ಸಂದರ್ಭಗಳಲ್ಲಿ ವಿದ್ವಾಂಸರನ್ನು ಸನ್ಮಾನಿಸಲಾಯಿತು. ಮುನಿಶ್ರೀಗಳು ಉತ್ತಮ ಲೇಖಕರೂ ಆಗಿದ್ದಾರೆ. ಹಲವು ಪುಸ್ತಕಗಳನ್ನು ಬರೆದಿದ್ದಾರೆ. ಅವರ ಶೈಲಿಯು ವಾಚಕರ ಮನಸ್ಸನ್ನು ಸೂರೆಗೊಳ್ಳುತ್ತದೆ.

ಅರವತ್ತು ವರ್ಷಗಳನ್ನು ಕಳೆದು 61ನೆಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಾರೆ. ಇಂದೋರಿನಲ್ಲಿ ಜನರು ಗೊಮ್ಮಟ ಗಿರಿಯಲ್ಲಿ ಷಷ್ಟ್ಯಬ್ಧಿಯನ್ನು ಆಚರಿಸುವ ಉದ್ದೇಶವಿರಿಸಿದ್ದಾರೆ. ಅವರ ಗುಣಗಾನ ಮಾಡುವ 'ವಿವೇಕಾಭ್ಯುದಯ' ವಿಶೇಷಾಂಕವು ಪ್ರಕಾಶಿತವಾಗುತ್ತಲಿದೆ. ಈ ಸಂದರ್ಭದಲ್ಲಿ ಅಖಿಲ ಭಾರತೀಯ ದಿಗಂಬರ ಜೈನ ವಿದ್ವತ್ ಸಮಿತಿಯ ಪರವಾಗಿ ವಿನಯಾಂಜಲಿಯನ್ನು ಅರ್ಪಿಸುತ್ತೇನೆ.

# ಕ್ರಾಂತಿಯ ಅಮರ ಹಸ್ತಾಕ್ಷರ

ಲೇಖಕರು:
ಡಾ. ದೇವೇಂದ್ರಕುಮಾರ ಶಾಸ್ತ್ರಿ, ನೀಮಚ್ (ಮ. ಪ್ರ.)

ಜೀವನದ ಯಾವ ಕ್ಷಣದಲ್ಲಿ ಏನಾಗುತ್ತದೆ ಎಂಬುದನ್ನು ಹೇಳಲು ಬರುವುದಿಲ್ಲ. ಅವುಗಳಲ್ಲಿ ಕೆಲವು ವೈಶಿಷ್ಟ್ಯವೂ, ಅರ್ಥವತ್ತಾಗಿರುವಂಥಹವು ಆಗಿರುತ್ತವೆ. ನಾವು ಕಲ್ಪನೆಯನ್ನು ವರ್ಣಿಸಲಿಕ್ಕೆ ಶಬ್ದಗಳನ್ನು ಹೇಗೆ ಉಪಯೋಗಿಸುತ್ತೇವೋ ಹಾಗೆಯೇ ಜೀವನದಲ್ಲಿ ತಿರುವುಗಳನ್ನು ಉಂಟು ಮಾಡಲು ಅವು ಸಹಾಯಕವಾಗುತ್ತವೆ. ನಮ್ಮ ಭಾವನೆಗಳನ್ನು ಕೆಲವು ಬಾರಿ ವ್ಯಕ್ತಪಡಿಸಲು ಸಾಧ್ಯವಾಗುವುದಿಲ್ಲ. ಅವು ನಮ್ಮಲ್ಲೇ ಉಳಿಯುತ್ತವೆ. ಕಲ್ಪನೆಯನ್ನು ವರ್ಣಿಸಲು ಸಾಹಿತ್ಯವು ಸಹಾಯ ಮಾಡುತ್ತದೆ. ಒಂದು ವೇಳೆ ಸಾಹಿತ್ಯವಿಲ್ಲದಿದ್ದರೆ ನಮ್ಮಲ್ಲೇ ಉಳಿಯುತ್ತಿತ್ತು. ಮತ್ತು ಅವರ ಅನುಭವವನ್ನು ಉಳಿದವರಿಗೆ ಹಂಚಲಾಗುತ್ತಿರಲಿಲ್ಲ. ನಮ್ಮ ಜೀವನದಲ್ಲಿ ಕೂಡಾ ವಿದ್ಯಾನಂದ ಮುನಿಗಳ ಪ್ರವೇಶವಾಗಿ, ನಮ್ಮ ಭಾವನೆಗಳಿಗೂ ಮನಸ್ಸಿಗೂ ಒಂದು ನಿರ್ದಿಷ್ಟ ರೂಪವನ್ನು ಕೊಟ್ಟರು. ಅವರ ವ್ಯಕ್ತಿತ್ವವನ್ನು ಶಬ್ದಗಳಿಂದ ಅಳೆಯಲಾಗುವುದಿಲ್ಲ. ಅವರು ಸರಳವಾಗಿದ್ದು, ತೇಜಸ್ವಿಗಳಾಗಿದ್ದಾರೆ. ಅವರ ಅಂತರ್ದೃಷ್ಟಿ ಮತ್ತು ಅಧ್ಯಯನ ಸಾಧನೆ ಇವುಗಳೇ ಅವರ ವ್ಯಕ್ತಿತ್ವವಾಗಿದೆ. ಧ್ಯಾನದಲ್ಲಿ ಅವರು ಹಿಮಾಲಯದಂತೆ ಸ್ಥಿರವಾಗಿದ್ದಾರೆ. ಗಂಗೆಯಂತಿರುವ ಅವರ ಮನಸ್ಸು ಜ್ಞಾನ ಪಿಪಾಸುವಾಗಿದೆ

## ವ್ಯಕ್ತಿ ಒಬ್ಬ, ಹಲವು ದೃಷ್ಟಿ:

ವಸ್ತು ಒಂದೇ ಆಗಿದ್ದರೂ ಕೂಡಾ ನಾವು ಅದನ್ನು ಹಲವು ರೀತಿಯಲ್ಲಿ ಪ್ರಕಟಿಸುತ್ತೇವೆ. ಉದಾಹರಣೆಗಾಗಿ ಅನ್ನವನ್ನು ವಿವಿಧ ರೀತಿಯಾಗಿ ಹೇಳುತ್ತೇವೆ. ಅದೇ ತರಹ ಒಬ್ಬ ವ್ಯಕ್ತಿಯ ಬಗ್ಗೆ ನಮ್ಮಲ್ಲಿ ಹಲವು ತರಹದಭಿಪ್ರಾಯಗಳಿರುತ್ತವೆ. ಅವರು ಈ ಶತಮಾನದಲ್ಲಿರುವುದರಿಂದ ಕೆಲವರಿಗೆ ಅವರು ಒಳ್ಳೆಯ ವ್ಯಕ್ತಿಯೆನಿಸ ಬಹುದು. ಇನ್ನು ಕೆಲವರಿಗೆ ಅವರ ಮಾತುಗಳೇ ಕಡಿಮೆಯಾಗಿ ಆತ್ಮ ಧ್ಯಾನದಲ್ಲಿ ಮಗ್ನರಾಗಿರುವುದಕ್ಕೆ ಉತ್ತಮರೆನಿಸಬಹುದು. ಈ ಸಮಾಜದಲ್ಲಿ ಶಾಸ್ತ್ರಗಳು ತುಂಬಾ ಇವೆ. ಆದರೆ ಅವು ಖಾಲಿ ಶಾಸ್ತ್ರಗಳೆನಿಸಿವೆ. ಕೆಲವು ಬಾರಿ ಅವುಗಳನ್ನು ಹೊತ್ತು ಕೊಂಡು ತಿರುಗಾಡುವುದರಿಂದಲೂ ಅವು ಶಾಸ್ತ್ರಗಳೆನಿಸಬಹುದು. ಮುನಿಗಳು ತತ್ತ್ವ ಮಾತ್ರವಲ್ಲದೆ ಅವುಗಳ ಭಾವಾರ್ಥವನ್ನೂ ತಿಳಿದುಕೊಂಡಿದ್ದಾರೆ. ಇದು ಅವರ ವಿಶಿಷ್ಟ ಗುಣ.

ನಾವು ಕೇವಲ ಕಾಗದದ ಮೇಲೆ ಬರೆದಿರುವ ಟೀಕೆಗಳನ್ನು ಓದಲು ಜ್ಞಾನದ ವಿಕಾಸವಾದರೆ ಸಾಲದು. ಸ್ಪಷ್ಟವಾಗಿ ಅವುಗಳ ಭಾವ, ಗೂಢಾರ್ಥ ಇವುಗಳನ್ನು ಅರಿತುಕೊಳ್ಳಬೇಕು. ಸಮಾಜದಲ್ಲಿ ಸಂಪ್ರದಾಯವನ್ನು ಅನುಸರಿಸುವವರು ಹಲವರು ಸಿಗುತ್ತಾರೆ. ಆದರೆ ಜೀವನವನ್ನು ವಿಮರ್ಶಿಸಿಕೊಂಡು ಹೊಸ ವಿಷಯಗಳನ್ನು ತಿಳಿಸುವವರು ಭಾರಿ ಕಡಿಮೆ ಸಂಖ್ಯೆಯಲ್ಲಿ ಇರುತ್ತಾರೆ.

**ವಿವಿಧತೆಯಲ್ಲಿ ಏಕತೆ:**

ಮುನಿಗಳ ಬಗ್ಗೆ ಹಲವರ ದೃಷ್ಟಿಕೋನ ಬೇರೆ ಬೇರೆಯಾಗಿರಬಹುದು. ಆದರೆ ಅವರು ಅಸಾಧಾರಣ ವ್ಯಕ್ತಿತ್ವವುಳ್ಳವರು. ಅವರಂಥವರು ಇರುವುದು ತುಂಬಾ ಅಪರೂಪ. ಇದನ್ನು ನಾವು ಒಪ್ಪಿಕೊಳ್ಳಲೇಬೇಕಾಗಿದೆ. ಸಾಮಾನ್ಯ ವ್ಯಕ್ತಿತ್ವದಿಂದ ಹಿಡಿದು ವಿಶ್ವಧರ್ಮದ ಸಮಸ್ತ ವ್ಯಾಖ್ಯಾನಗಳೂ ಇವರ ವ್ಯಕ್ತಿತ್ವದಲ್ಲಿ ಅಡಕವಾಗಿವೆ. ಅವರ ವ್ಯಕ್ತಿತ್ವದಲ್ಲಿ ಸಾರ್ಥಕತೆಯಿದೆ. ಸ್ವತಃ ವಿಶ್ವಧರ್ಮದ ಪ್ರತೀಕರಾಗಿದ್ದಾರೆ. ಕೆಲವು ಜನರಿಗೆ ವಿಶ್ವಧರ್ಮದ ಬಗ್ಗೆ ಒಳ್ಳೆಯ ಭಾವನೆ ಇರುವುದಿಲ್ಲ. ಏಕೆಂದರೆ ವಿಶ್ವ (ಜಗತ್ತಿಗೂ)ಕ್ಕೆ ಒಂದು ಧರ್ಮವಿದೆ ಎಂಬುದು ಅವರಿಗೆ ತಿಳಿದಿರುವುದಿಲ್ಲ. ಜೀವಿಗಳಿರುವೆಡೆಯಲ್ಲೆಲ್ಲಾ ಧರ್ಮವು ಇರುತ್ತದೆ. ಮನುಷ್ಯನಿಗೆ ಭೇದವಿಜ್ಞಾನವಿದ್ದಿದ್ದರೆ ಧರ್ಮವನ್ನು ತಿಳಿದುಕೊಂಡು ಅದರ ಒಳಿತನ್ನೂ ಕೆಡುಕನ್ನೂ ನೋಡುತ್ತಿದ್ದ. ನಮ್ಮ ಒಳಿತು–ಕೆಡುಕುಗಳು ನಮ್ಮ ಆನುವಂಶಿಕತೆಯಿಂದ ಬಂದವುಗಳಾಗಿವೆ. ಅವುಗಳನ್ನು ಮುನಿಗಳು ಜನಸಾಮಾನ್ಯರಿಗೆ ತಿಳಿಸುವ ಕಾರ್ಯವನ್ನು ಮಾಡುತ್ತಾರೆ. ಗಂಗೆಯನ್ನು ಭೂಲೋಕದಲ್ಲಿ ಹರಿಸುವ ಕೆಲಸ ಭಗೀರಥನಿಂದ ಮಾತ್ರನಿಂದಾಯ್ತು. ಹಾಗೆಯೇ ಮುನಿಗಳೂ ಕೂಡಾ ಉಳಿದವರಿಂದ ಅಸಾಧ್ಯವಾದ ಕೆಲಸವನ್ನು ನಿರ್ವಹಿಸುತ್ತಿದ್ದಾರೆ.

**ಯೋಗೇಶ್ವರ:**

ಮುನಿಗಳು ಧ್ಯಾನದಲ್ಲಿ ಹೇಗೆ ಯೋಗೇಶ್ವರರಾಗಿದ್ದಾರೋ ಹಾಗೆಯೇ ಮುಕ್ತಿಯಲ್ಲೂ ಸಿದ್ಧಹಸ್ತರಾಗಿದ್ದಾರೆ. ಜನರ ನಡುವೆ ಎಲ್ಲಾ ಜಾತಿ, ವಿಚಾರಗಳನ್ನು ತೊಡೆದುಕೊಂಡು ಶುದ್ಧ ವ್ಯಕ್ತಿಯಂತೆ ಮಾನವತೆಯ ವ್ಯಕ್ತಿ ಜೀವಿಸುತ್ತಾನೆ. ಈಗಿನ ಜನರಲ್ಲಿ ಅವಿಶ್ವಾಸ, ದ್ವೇಷ ಮುಂತಾದುವುಗಳು ಹೆಚ್ಚಿಕೊಂಡಿವೆ. ಇವುಗಳನ್ನು ನಿವಾರಿಸಿಕೊಂಡು ಪ್ರೀತಿ, ವಿಶ್ವಾಸಗಳನ್ನು ಹೆಚ್ಚಿಸುವುದು ಮುಖ್ಯ ಕೆಲಸವಾಗಿದೆ. ಸಮಾಜವು ಹರಿಹಂಚಾಗುತ್ತದೆ. ಎಲ್ಲಾ ಮಾನ್ಯತೆಗಳೂ ಸುಳ್ಳು ಎಂದು ತಿಳಿಯಲ್ಪಟ್ಟಿವೆ. ವೈಜ್ಞಾನಿಕ ದೃಷ್ಟಿಯಲ್ಲಿ ಧಾರ್ಮಿಕ ಮಾನ್ಯತೆಗಳಿಗೆ ಯಾವುದೇ ಬೆಲೆ ಇಲ್ಲ. ಅವುಗಳಿಗೆ ಕಳೆದು ಹೋದ ಸ್ಥಾನ ದೊರಕಿಸುವ ಮಹಾಪುರುಷರು ಯಾರಾದರೂ ಇದ್ದಾರೆಂದರೆ ವಿದ್ಯಾನಂದ ಮುನಿಗಳು ಮಾತ್ರ.



# ವಿಶ್ವಧರ್ಮದ ಮಂತ್ರದಾತರಾದ 'ಮುನಿವರ್ಯರು

ಲೇಖಕರು:
ಶ್ರೀ ಪಂ. ನಾಥೂಲಾಲ್ ಶಾಸ್ತ್ರಿ, ಇಂದೋರ್, (ಮ.ಪ್ರ.)

ಪ. ಪೂ. ಮುನಿಗಳ ವಿಶ್ವಧರ್ಮದ ಪ್ರವಚನಗಳನ್ನು ಕೇಳಲು ಸಾವಿರಾರು ಮಂದಿ ಜನರು ಜಾತಿ ಭೇದವಿಲ್ಲದೆ ಸೇರುತ್ತಾರೆ. ಅವರ ವಿಶ್ವಧರ್ಮದ ಘೋಷಣೆ ಯಿಂದ ಜನರಿಗೇನು ಪ್ರಯೋಜನ? ಎಂದು ಕೇಳುವವರು ಅನೇಕರಿದ್ದಾರೆ.

ಜನರನ್ನು ಸುಸಂಸ್ಕೃತರನ್ನಾಗಿಸಿ, ರಾಗ–ದ್ವೇಷಗಳಿಂದ ದೂರವಿದ್ದುಕೊಂಡು ಜೀವನದಲ್ಲಿ ಸುಖ ಹಾಗೂ ಶಾಂತಿಯಿಂದಿರುವುದೇ ಧರ್ಮದ ಉದ್ದೇಶ. ಅಹಿಂಸೆ ಹಾಗೂ ಸಮನ್ವಯತೆಯ ಭಾವನೆಗಳು ಜನರಲ್ಲಿ ಮನೆಮಾಡಿರಬೇಕು. ವರ್ಗ ಕಲಹಗಳು ಅತಿಯಾಗಿ ಧರ್ಮವು ವಿನಾಶದತ್ತ ಸರಿದಾಗ ಯುಗಪುರುಷನ ಜನ್ಮ ಉಂಟಾಗುತ್ತದೆ. ಯುಗಪುರುಷರಿಗೆ ತೊಂದರೆಗಳನ್ನೀಯುವವರೂ ಮನಸ್ಸು ಬದ-ಲಾಯಿಸಿ ಒಂದಲ್ಲ ಒಂದು ದಿನ ಅವರ ಶಿಷ್ಯರಾಗುತ್ತಾರೆ. ಯುಗಪುರುಷರಿಂದಾ-ಗಿಯೇ ಹಲವು ಜಾತಿ–ಪಂಥಗಳು ಹುಟ್ಟಿಕೊಂಡು ಅವರ ಅನುಯಾಯಿಗಳಿಂದ ಹಿಂಸೆ ಉಂಟಾಗುತ್ತದೆ.

ಮಾನವತೆಯ ವಿಕಾಸವು ಅಹಿಂಸೆಯಿಂದಲೇ ಸಾಧ್ಯ ಎಂದು ಮುನಿಗಳು ಹೇಳುತ್ತಾರೆ. ಅಹಿಂಸೆಯು ವ್ಯಾಪಕವಾಗಿದ್ದು ಅದರ ಸಾಕ್ಷಾತ್ಕಾರಕ್ಕಾಗಿ ಮುನಿಗಳು ಇಂದು ಕೆಲಸ ಮಾಡುತ್ತಿದ್ದಾರೆ. ಅಹಿಂಸೆಯು ಬ್ರಹ್ಮಸ್ವರೂಪ, ಅದರಿಂದ ಮುಕ್ತಿ ಸಿಗುತ್ತದೆ ಎಂದು ಸಮಂತಭದ್ರರು ಹೇಳಿದ್ದಾರೆ. ಆತ್ಮವು ಪರಮಾತ್ಮನಂತಾಗಲು ತ್ರಿಕರಣಪೂರ್ವಕವಾಗಿ ಅಹಿಂಸೆಯನ್ನು ಪಾಲಿಸಬೇಕು. ಜೈನ ಧರ್ಮವು ಕೇವಲ ದೈಹಿಕ ಅಹಿಂಸೆಗೆ ಮಾತ್ರ ಸೀಮಿತವಾಗಿರದೆ ಬೌದ್ಧಿಕ ಅಹಿಂಸೆಯನ್ನೂ ಒಳಗೊಂಡಿರ ಬೇಕು. ಬೌದ್ಧಿಕ ಅಹಿಂಸೆಯು ಸತ್ಯ, ಧ್ಯಾನ, ಸಹಿಷ್ಣುತೆ ಮುಂತಾದುವುಗಳನ್ನು ಒಳಗೊಂಡಿದೆ. ಜೈನ ಧರ್ಮವು ಆಚಾರದಲ್ಲಿ ಅಹಿಂಸೆ, ಒಳ್ಳೆಯ ಯೋಚನೆ, ಧ್ಯಾನ, ಕಳ್ಳತನ (ಮೋಸ) ಮಾಡದಿರುವುದು, ಇವು ನಾಲ್ಕು ಸೂತ್ರ (ವಿಷಯ) ಗಳನ್ನೊಳಗೊಂಡಿದೆ. ಇದು ಹೊಸ ವಿಷಯವೇನೂ ಆಗಿರದೆ ಹಿಂದಿನಿಂದಲೂ ಬಂದಿರುವಂಥಾದ್ದು ಆಗಿದೆ. ವಿದ್ಯಾನಂದ ಮುನಿಗಳು ಎಲ್ಲರಿಗೂ ಆಚರಿಸಲು ಯೋಗ್ಯವಾದ ಜೈನಧರ್ಮವನ್ನು 'ವಿಶ್ವಧರ್ಮ'ವೆಂದರೆ ಉತ್ತಮ ಧರ್ಮವೆಂದಿದ್ದಾರೆ. ರೂಢಿಯಲ್ಲಿರುವುದನ್ನು ಬದಲಾಯಿಸದೆ, ಇಜನರಿಗೆ ಒಳಿತನ್ನುಂಟುಮಾಡುವ ಕೆಲಸ ಮಾಡಬೇಕು. ತಮ್ಮ ಕೆಲಸಗಳನ್ನು ಮಾಡುತ್ತಾ ಜನರನ್ನು ಧರ್ಮದತ್ತ ಪ್ರೇರೇ-ಪಿಸಬೇಕು. ನಾವು ನಮ್ಮ ಕುಟುಂಬಕ್ಕೆ ಅಂಟಿಕೊಂಡಿರದ ಜಗತ್ತು ನನ್ನದೇ ಆಗಿದೆ. (ವಸುಧೈವ ಕುಟುಂಬಕಂ) ಎಂಬ ಭಾವನೆಯನ್ನು ಉಂಟುಮಾಡಿಕೊಳ್ಳಬೇಕು. ಸ್ವ-ಹಿತದೊಂದಿಗೆ ಪರೋಪಕಾರವನ್ನೂ ಮಾಡಬೇಕು.

ಈಗಿನ ಯುಗವು ಸಮನ್ವಯತೆಯ ಯುಗವಾಗಿದೆ. ನಾವು ಹಲವಾರು ಗುಂಪು (ಜಾತಿ)ಗಳಾಗಿ ವಿಭಜಿಸಲ್ಪಟ್ಟಿದ್ದರೂ ನಾವೆಲ್ಲ ಒಂದು ಎಂಬ ಪ್ರಜ್ಞೆ ನಮ್ಮಲ್ಲಿಂದು ಮೂಡಿ ಬರುತ್ತಿದೆ. ನಾವು ಇದರಿಂದ ಸಂಘಟಿತರಾಗಬಲ್ಲೆವು.

ನಮ್ಮ ಸಿದ್ಧಾಂತ (ತತ್ತ್ವ)ಗಳನ್ನು ಪ್ರಚಾರ ಮಾಡಲು ನಮ್ಮಲ್ಲಿ ತ್ಯಾಗ ಮತ್ತು ಸಮಾನತೆ ಇರಬೇಕು. ಅಂದರೆ ಅದಕ್ಕಾಗಿ ಎಷ್ಟೇ ಕಷ್ಟ ಬಂದರೂ ಸಹಿಸ ಬೇಕು. ಒಂದೇ ಮತದಲ್ಲಿದ್ದುಕೊಂಡು ಭೇದ–ಭಾವಗಳಿಂದ ನಾವು ಇತರರನ್ನು ನೋಡದೆ ನಮ್ಮ ಸಮಾನರಂತೆ ನೋಡಿಕೊಳ್ಳಬೇಕು.

1893ರಲ್ಲಿ ಸ್ವಾಮಿ ವಿವೇಕಾನಂದರು ಅಮೇರಿಕೆಗೆ ಹೋಗಿ ಭಾರತೀಯ ಸಂಸ್ಕೃತಿಯ ಬಗ್ಗೆ ಪ್ರಚಾರ ಮಾಡಿದರು. ಚಿಕಾಗೋ ಧರ್ಮ ಸಮ್ಮೇಲನದಲ್ಲಿ ಅವರ ವಿಶ್ವಧರ್ಮದ ಕುರಿತ ಭಾಷಣವನ್ನು ಕೇಳಿ ಜನರು ಮಂತ್ರಮುಗ್ಧರಾದರು. ಅವರು ಅಲ್ಲಿ ಅಹಿಂಸೆ, ವಿಶ್ವಕಲ್ಯಾಣಗಳನ್ನೊಳಗೊಂಡ ಭಾರತೀಯ ಧರ್ಮದ ಕುರಿತು ವ್ಯಾಖ್ಯಾನಿಸಿ ಜಗತ್ತಿನಲ್ಲಿ ಹಿಂದೂ ಧರ್ಮದ ಬಗ್ಗೆ ಕುತೂಹಲವನ್ನುಂಟು ಮಾಡಿದರು. ನಮಗೆ ಇಂದು ಇಂತಹ ವ್ಯಕ್ತಿಗಳು ಬೇಕಾಗಿದ್ದಾರೆ. ಈ ಕೆಲಸ ವನ್ನಿಂದು ವಿದ್ಯಾನಂದ ಮುನಿಗಳು ಸಮರ್ಪಕವಾಗಿ ಮಾಡುತ್ತಿದ್ದಾರೆ.



**ವಿದ್ಯಾನಂದ ವಾಣಿ**

## ಸ್ವಾಧ್ಯಾಯದಿಂದ ಜ್ಞಾನಪ್ರಾಪ್ತಿ

**ಸ್ವಾಧ್ಯಾಯವು ಗೃಹಸ್ಥನ ಕರ್ತವ್ಯ. ವ್ರತ ಮಾಡ ಬೇಕಾದರೆ ಜ್ಞಾನಬೇಕು: ಉಪವಾಸ ಮಾಡಬೇಕಾದರೆ ಜ್ಞಾನಬೇಕು; ಜ್ಞಾನವಿಲ್ಲದೆ ನೀವು ಮಾಡುವುದು ಹೇಗೆ? ಸ್ವಾಧ್ಯಾಯದಿಂದ ಜ್ಞಾನಪ್ರಾಪ್ತಿಯಾಗುವುದು. ಬೆಳಕು ಇರುವ ಕಡೆ ಕತ್ತಲು ಇರುವಂತಿಲ್ಲ.**

# ವಿದ್ಯೆಯ ಆನಂದದ ಯಾತ್ರೆ

ಲೇಖಿಕೆಯರು: **ಸ್ವ! ಶ್ರೀಮತಿ ರಮಾರಾಣಿ ಜೈನ್, ಕಲ್ಕತ್ತ.**
(ಸ್ವ! ಸಾಹೂ ಶಾಂತಿಪ್ರಸಾದರ ಧರ್ಮಪತ್ನಿ)

ವಿದ್ಯಾನಂದರೊಂದಿಗೆ ನನ್ನ ಮೊದಲ ಭೇಟಿಯು ಅವರು ದೇಶಭೂಷಣರ ಸನ್ನಿಧಿಯಲ್ಲಿ ಧಾರ್ಮಿಕ ಪ್ರವಚನಗಳನ್ನು ನೀಡುತ್ತಿದ್ದಾಗ ಆಯಿತು. ನನ್ನ ಪತಿಗೆ ಅವರ ಪರಿಚಯವು ಮೊದಲಿನಿಂದಲೂ ಇತ್ತು. ಅವರಿಬ್ಬರ ಮಾತುಕತೆಯಲ್ಲಿ ಆತ್ಮೀಯತೆ ಇರುವುದನ್ನು ತಿಳಿದುಕೊಂಡಿದ್ದೆ. ಸಾಹುಜಿಯವರು ಮುನಿಗಳೊಡನೆ 'ತಾವು ಮುನಿ ದೀಕ್ಷೆಯನ್ನು ಧಾರಣೆ ಮಾಡದಿರುತ್ತಿದ್ದರೆ ಸಾಮಾಜಿಕ ಕಾರ್ಯಕ್ರಮಗಳನ್ನು ನೀಡುವವರಿರುತ್ತಿರಲಿಲ್ಲ. ಮತ್ತು ಸಮಾಜವು ಇಷ್ಟು ಉನ್ನತಿಯನ್ನೂ ಪಡೆಯುತ್ತಿರಲಿಲ್ಲ' ಎಂದು ಹೇಳುವುದನ್ನು ಕೇಳಿಸಿಕೊಂಡೆ. ಇದು ಉತ್ಪ್ರೇಕ್ಷೆಯ ಮಾತಲ್ಲ. ಅದಕ್ಕೆ ಮುನಿಗಳು, ನೀವು ಮಾತನ್ನು ಹೇಳುವಾಗ ನಾನು ಚಿಂತಾಕ್ರಾಂತನಾಗುತ್ತೇನೆ.' 'ಏಕೆಂದರೆ ಸಮಾಜವು ಪರಿವರ್ತನೆಯಾಗುತ್ತಾ ಇರುತ್ತದೆ. ನೀವು ಹೀಗೆ ಹೇಳಿ ನನ್ನ ಕೆಲಸವನ್ನು ಮೊಟಕುಗೊಳಿಸುತ್ತೀರಿ.' ಅಂದರೆ ನಾನು ನನ್ನ ಕೆಲಸ ಮಾಡುತ್ತಾ ಇದ್ದೇನೆ. ಇದು ಅತ್ಯಂತ ದೊಡ್ಡ ಕೆಲಸವೇನಲ್ಲ ಎಂಬ ಭಾವನೆ. ನನಗೆ ಮುನಿಗಳ ಮಾತು ಒಳ್ಳೆಯದೆನಿಸಿತು. ಆದರೆ ನನ್ನ ಮನಸ್ಸು ಕೂಡಾ ಸಾಹುಜಿಯವರ ಮಾತನ್ನೇ ಸಮರ್ಥಿಸುತ್ತಿತ್ತು.

ಸಾಮಾಜಿಕ ಶಕ್ತಿಯನ್ನು ಜಾಗೃತಗೊಳಿಸುವ ಭಾವನೆಯಲ್ಲಿ ಜೈನ ಮುನಿಗಳು ತಿಳಿಸುವ 'ಸಾಮಾಜಿಕ ಚೇತನ' ಇದರ ಅರ್ಥವು ಸಾಮಾನ್ಯ ರೂಪದಲ್ಲಿ ತುಂಬಾ ಸಂಕುಚಿತವಾಗಿದೆ ಎಂದು ನನಗೆ ಕಾಣುತ್ತಿತ್ತು ಆದರೆ ಅದರ ಅರ್ಥವು ತುಂಬಾ ವಿಶಾಲವಾದುದು. ಮುನಿಗಳಲ್ಲಿ ದೀಕ್ಷೆಯ ಪ್ರಭಾವ (ಧರ್ಮದ ಪ್ರಭಾವ) ತುಂಬಾ ಆಗಿದ್ದರೂ ಜನ ಜಾಗೃತಿಯನ್ನುಂಟುಮಾಡುವುದಕ್ಕಾಗಿ ಶೈಲಿ, ಪ್ರಭಾವ ಮತ್ತು ಭಾಷೆಗಳಲ್ಲಿ ಯಾವ ಶಕ್ತಿ ಅಡಕವಾಗಿರಬೇಕೋ ಆ ಶಕ್ತಿಗಿಂತ ಕಡಿಮೆಯಿದೆ. ಯೋಚಿಸುವಾಗ ಸಾಮಾಜಿಕ ಚೇತನವನ್ನುಂಟುಮಾಡುವ ಶಕ್ತಿ ಅವರ ಹಿಡಿತದಲ್ಲಿಲ್ಲವೆಂದು ಕಾಣಿಸುತ್ತದೆ. ಇದಕ್ಕಾಗಿ ಧ್ಯಾನ ಮತ್ತು ಸಂಯಮದಿಂದ ಆತ್ಮೋನ್ನತಿ (ಆತ್ಮ ಕಲ್ಯಾಣ) ಮಾಡಬಹುದು. ಆದರೆ ಸಾಮಾಜಿಕ ಚೇತನದ ಪ್ರಯತ್ನವು ಎಷ್ಟು ಸಫಲವಾದೀತು? ಎಂಬ ನನ್ನ ಭಾವನೆಯನ್ನು ಮುನಿಗಳ ಪ್ರವಚನವನ್ನು ಕೇಳಿದ ಮೇಲೆ ಬದಲಾಯಿಸಬೇಕಾಯಿತು.

ಮುನಿ ದೀಕ್ಷೆಯನ್ನು ಧಾರಣೆ ಮಾಡಿದ ಮೇಲೆ ಜ್ಞಾನಾರ್ಜನೆಯತ್ತ ಅವರು ಕೈ ಚಾಚಿದರು. ಓದಿದಕ್ಕಿಂತ ಜಾಸ್ತಿಯಾಗಿ ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಂಡರು. ಓದಿ ತಿಳಿದುಕೊಂಡ ವಿಷಯಗಳನ್ನು ಜನತೆಗೆ ಪ್ರಭಾವಶಾಲಿ ರೀತಿಯಲ್ಲಿ ತಲುಪಿಸುವ ಕೆಲಸವನ್ನೂ ಕೈಗೊಂಡರು. ಅದಕ್ಕಾಗಿ ಅವರು ಸ್ವತಃ ಶಿಷ್ಯನಂತೆ ಶ್ರಮಿಸಿದರು. ಭಾಷೆ ಮತ್ತು ಶೈಲಿಗಳಲ್ಲಿ ಎಷ್ಟು ಸುಧಾರಿಸಿಕೊಂಡರೆಂದರೆ ಅವರ ಮಾತು ಸಾಕ್ಷಾತ್ ಸರಸ್ವತಿಯ ಮಾತಿನಂತೆಯೇ ಆಯಿತು. ಇಂದು ಅವರ ಮಾತು

ಗಳು ಸರಳವಾಗಿದ್ದು ನೇರವಾಗಿ ಹೃದಯವನ್ನು ತಟ್ಟುತ್ತವೆ. ಶೈಲಿಯೂ ಕೂಡಾ ಅಷ್ಟೇ ಮಧುರವಾಗಿದೆ. ಅವರ ಆಳವಾದ ಜ್ಞಾನ ಹಾಗೂ ಸಾಧನೆಯು ಜನರ ಮನಸ್ಸನ್ನು ನಾಟಿದೆ.

ಮುನಿಗಳು ಅಧ್ಯಾತ್ಮ ಮತ್ತು ಸಾಧನೆಯಲ್ಲಿ ಅತೀ ದೊಡ್ಡದಾದ ಹಂತವನ್ನು ತಲುಪಿದ್ದಾರೆ. ಆದರೆ ಇತರರಿಗೆ ಸಹಾನುಭೂತಿಯನ್ನು ವ್ಯಕ್ತ ಪಡಿಸುವುದರಲ್ಲಿ ಮುಂದಾಗಿದ್ದಾರೆ. ಅಂತರಂಗ ಶುದ್ಧಿ, ಬ್ರಹ್ಮ ಶುದ್ಧಿಗಳ ಬಗ್ಗೆ ನಾನು ಕಂಡ ಎಲ್ಲಾ ಮುನಿಗಳೂ ಮಹತ್ತ್ವ ಪೂರ್ಣ ವಿಷಯಗಳೊಂದಿಗೆ ಇವುಗಳ ಬಗ್ಗೆಯೂ ತುಂಬಾ ಗಮನ ವೀಯುತ್ತಿದ್ದರು. ಗಣೇಶಪ್ರಸಾದ ವರ್ಣಿಗಳಂತಹ ಸಂತರು (ಮುನಿಗಳು) ತತ್ತ್ವದೃಷ್ಟಿಯನ್ನು ಬೋಧಿಸುವುದರೊಂದಿಗೆ ತುಂಬು ಮನಸ್ಸಿನಿಂದ ಆಶೀರ್ವಾದ ನೀಡುತ್ತಿದ್ದರು. ಅವರು ಬ್ರಹ್ಮ ಕರ್ಮಕಾಂಡದ ಪದ್ಧತಿಯನ್ನು ತುಂಬಾ ಗೌರವದಿಂದ ಕಾಣುತ್ತಿದ್ದರು ಅವರು ಬ್ರಹ್ಮ ಕರ್ಮಕಾಂಡದ ಬಗ್ಗೆ ಯಾವುದೇ ತರಹ ಚರ್ಚೆಯನ್ನು ಕೂಡಾ ಮಾಡಲಿಲ್ಲ. ಬದಲಾಗಿ ಇತರ ಧರ್ಮಗಳ ಯಾವ ಯಾವ ಗ್ರಂಥಗಳಲ್ಲಿ ಜೈನ ಧರ್ಮದ ಸಿದ್ಧಾಂತಗಳ ಬಗ್ಗೆ ಉಲ್ಲೇಖವಿದೆ ಎಂದು ತಿಳಿದಿದ್ದರು. ಹೊಸ ವಿಷಯಗಳನ್ನು ತಿಳಿಯುವುದರಲ್ಲಿ ಅವರಿಗೆ ತುಂಬಾ ಆಸಕ್ತಿಯಿತ್ತು. ಅವರು ತುಂಬಾ ಜ್ಞಾನಿಗಳಾಗಿದ್ದರು. ಅವರ ದರ್ಶನದಿಂದ ನಾನು ಪುನೀತಳಾದೆ ಎಂಬ ಭಾವನೆ ನನ್ನಲ್ಲಿ ಉದಯಿಸುತ್ತಿತ್ತು.

ಮುನಿಗಳು ಸಾಧಕರು ಮಾತ್ರವಲ್ಲದೆ ಕಲಾಕಾರರೂ ಆಗಿದ್ದರು. ಕಾವ್ಯ, ಸಂಗೀತ ಇತ್ಯಾದಿಗಳ ಬಗ್ಗೆ ಅವರಿಗೆ ಆಳವಾದ ಜ್ಞಾನವಿತ್ತು. ಅವರು ಯಾವುದೇ ಕೆಲಸ ಮಾಡಿದರೂ ಅದರಲ್ಲೇ ಮಗ್ನರಾಗಿರುತ್ತಿದ್ದರು. ಅವರ ಉದಾತ್ತ ವ್ಯಕ್ತಿತ್ತ್ವವು ಶಾಂತಿ ಸೌಹಾರ್ದತೆಗಳ ಸಂದೇಶವನ್ನು ನೀಡುತ್ತಾ ಜೀವನಕ್ಕೆ ತಿರುವನ್ನು ಕೊಡುತ್ತದೆ.



**ವಿದ್ಯಾನಂದ ವಾಣಿ**

## ಅಂತರಂಗ ಶುದ್ಧಿಗೆ ಕರ್ಮನಾಶವಾಗಬೇಕು

ಅಂತರಂಗದಲ್ಲಿರುವ ಆತ್ಮನನ್ನು ಶುದ್ಧವಾಗಿಡಬೇಕಾದರೆ, ಅನಾದಿಕಾಲದಿಂದ ಸಂಚಯವಾಗಿರುವ ಕರ್ಮಗಳನ್ನು ನಾವು ಮೊದಲು ಓಡಿಸಬೇಕು. ಇವುಗಳಿಂದ ಆತ್ಮ ಹೊಲೆಯನಾಗಿದ್ದಾನೆ. ಅಂತರಂಗದಲ್ಲಿರುವ ಕಷಾಯಗಳನ್ನು ತಿರಸ್ಕಾರ ಮಾಡಿದರೇನೇ ನೀವು ಪವಿತ್ರರಾಗುವುದಕ್ಕೆ ಶಕ್ಯವಿದೆ. ದೇವರ ಭಕ್ತಿ ಮಾಡುವಾಗ ಕಾಮ ಕ್ರೋಧಾದಿಗಳು ಹೊರಟು ಹೋಗುವುವು.

# ಮೂಡುಬಿದ್ರಿಯಲ್ಲಿ ಮುನಿಶ್ರೀಯವರ ಮಂಗಲ ವಿಹಾರ

ಲೇಖಕರು: ಶ್ರೀ ಎಂ. ಹರಿಶ್ಚಂದ್ರ ಶೆಟ್ಟಿ,
(ನಿವೃತ್ತ ಅಸಿಸ್ಟೆಂಟ್ ಕಮಿಷನರ್, ಮೂಡುಬಿದ್ರಿ)

ಈ ಪಂಚಮ ಕಾಲದಲ್ಲಿ ರಾಗ-ದ್ವೇಷ--ಕ್ರೋಧ--ಮಾಯ–ಲೋಭ ಮೊದಲಾದ ಕಷಾಯಗಳು ಮನುಷ್ಯರಲ್ಲಿ ರಕ್ತಗತವಾಗಿರುವಾಗ ಈ ದೇಹ ನಶ್ವರ; ದೇಹ ಬೇರೆ, ಆತ್ಮ ಬೇರೆ ಎಂಬ ತತ್ತ್ವವನ್ನು ಮನಗಂಡು ಸರ್ವ ತ್ಯಾಗ ಮಾಡಿ ಮುನಿದೀಕ್ಷೆಯನ್ನು ಸ್ವೀಕರಿಸಿ ತಮ್ಮ ಆತ್ಮಕಲ್ಯಾಣವನ್ನು ಮಾಡುವವರು ತುಂಬಾ ವಿರಳ.

ಯುವಕ–ಯುವತಿ–ಮಕ್ಕಳು–ಮುದುಕರು ಎಂಬ ಭೇದ-ಭಾವವಿಲ್ಲದೆ ಎಲ್ಲರೂ ಒಟ್ಟಾಗಿ ಪ. ಪೂ. ಸಿದ್ಧಾಂತ ಚಕ್ರವರ್ತಿ ಏಲಾಚಾರ್ಯ ವಿದ್ಯಾನಂದ ಮುನಿಗಳನ್ನು ಸ್ವಾಗತಿಸುವುದಕ್ಕಾಗಿ ಜಾತಿ–ಮತ ಭೇದವಿಲ್ಲದೆ ಶ್ರೀ ಮಹಾವೀರ ಕಾಲೇಜಿನಿಂದ ಒಂದು ಕಿ. ಮೀ. ವರೆಗೆ ಭಕ್ತಿಯಿಂದ ಮೂಡುಬಿದ್ರಿ ನಾಗರಿಕರು ನೆರೆದಿದ್ದರು. ಮಾರ್ಗ ಉದ್ದಗಲವೂ ತಳಿರು--ತೋರಣಗಳಿಂದ ಅಲಂಕರಿಸಲ್ಪಟ್ಟಿತ್ತು. ಮೂಡುಬಿದ್ರಿ ಮಠದ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿಯವರು ಈ ಸಡಗರದಲ್ಲಿ ಪಾಲ್ಗೊಂಡು ಎಲ್ಲರಿಗೂ ಮಾರ್ಗದರ್ಶನ ನೀಡುತ್ತಿದ್ದರು. ಶ್ರೀ ಶ್ರೀ ಶ್ರೀ ಆಚಾರ್ಯ ಮುನಿವರ್ಯರು ವೇಣೂರಿನಿಂದ ಮೂಡುಬಿದ್ರಿಗೆ ಪಾದಯಾತ್ರೆ ಮಾಡಿಕೊಂಡು ಬರುವವರಿದ್ದರು. ಅಂತಹ ಮಹಾಮುನಿಗಳ ಪಾದಯಾತ್ರೆಯಲ್ಲಿ ಪಾಲ್ಗೊಳ್ಳುವ ಸೌಭಾಗ್ಯ ದೊರೆಯುವುದು ಪೂರ್ವ ಪುಣ್ಯವೆಂದರೆ ತಪ್ಪಾಗಲಾರದು. ಅವರು ಮೂಡುಬಿದ್ರಿ ಪುರ ಪ್ರವೇಶ ಮಾಡಿ ಜೈನ ಮಠದ ವರೆಗೆ ಬರುವಾಗ ಜನರ ಜಯ ಜಯಕಾರ ದಿಗಂತ ಮುಟ್ಟಿತ್ತು. ಬಹಳ ವೈಭವದಿಂದ ಅವರನ್ನು ಮೂಡುಬಿದ್ರಿ ನಾಗರಿಕರು ಬರಮಾಡಿಕೊಂಡರು.

ಶ್ರೀ ಶ್ರೀ ಆಚಾರ್ಯ ಮುನಿಗಳವರು ಮೂಡುಬಿದ್ರಿಯಲ್ಲಿ ಸುಮಾರು ಒಂದು ತಿಂಗಳ ಕಾಲ ಇದ್ದರು. ಆಗ ಸುತ್ತಮುತ್ತಲಿನ ಹಳ್ಳಿಗಳಿಂದ ತಂಡೋಪತಂಡವಾಗಿ ಜೈನ ಬಂಧುಗಳು ಅವರ ದರ್ಶನವನ್ನು ಪಡೆಯಲು ಬರುತ್ತಿದ್ದರು. ಅವರು ಶ್ರೀ ಮಹಾವೀರ ಭವನದಲ್ಲಿ ಮಾಡುತ್ತಿದ್ದ ಧರ್ಮೋಪದೇಶಕ್ಕೆ ನಾನು ಸಾಧ್ಯವಾದಷ್ಟು ಮಟ್ಟಿಗೆ ನಿತ್ಯವೂ ಹೋಗುತ್ತಿದ್ದೆ. ಅದಕ್ಕೆ ಜೈನ–ಜೈನೇತರರು ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಿದ್ದರು. ಅವರ ವಿದ್ವತ್ ಮತ್ತು ವಾಕ್ಪಟುತ್ವಕ್ಕೆ ಎಲ್ಲರೂ ಮಾರುಹೋಗುತ್ತಿದ್ದರು. ಅವರ ಸಮಯವನ್ನು ನೋಡಿಕೊಂಡು ಅವರ ನಿತ್ಯ ದರ್ಶನ ಮಾಡುವ ಪರಿಪಾಠವನ್ನು ನಾನು ಇಟ್ಟುಕೊಂಡಿದ್ದೆ. ಅವರ ನಿತ್ಯ ದರ್ಶನದಿಂದ ಹಾಗೂ ಆಶೀರ್ವಾದದಿಂದ ಆಗುವ ಆನಂದ ಮನೋವಿಕಾಸತೆಯನ್ನು ವರ್ಣಿಸುವುದಕ್ಕಿಂತ ಅನುಭವ ಮಾಡಿದವರಿಗೇ ಗೊತ್ತು. ಆಚಾರ್ಯ ಮುನಿಗಳು ಮೂಡುಬಿದ್ರಿಯಲ್ಲಿದ್ದ ಸಮಯ 18 ಬಸದಿಗಳ ಜೀರ್ಣೋದ್ಧಾರ, ಶಾಶ್ವತ ಪೂಜಾ ವ್ಯವಸ್ಥೆಯ ರೂಪರೇಖೆಗಳನ್ನು ಹಾಕಿದ್ದರು. ಧವಲಾ ಕಾಲೇಜಿನ ಕಟ್ಟಡವು ಅವರ ಆಶೀರ್ವಾದ

ದಿಂದಲೇ ಆದದ್ದು ಎಂದರೆ ತಪ್ಪಾಗಲಾರದು. ಅವರ ಮನಸ್ಸಿನ ದೃಢತೆ ಎಷ್ಟರ ಮಟ್ಟಿಗೆ ಇತ್ತು ಎಂದರೆ ಅವರು ಮುಂದಾಗುವ ವಿಷಯವನ್ನು ಕೆಲವು ವೇಳೆ ಪೂರ್ವಭಾವಿಯಾಗಿ ಹೇಳುತ್ತಿದ್ದರು. ಒಂದು ಸಲ ಆಚಾರ್ಯ ಶ್ರೀ ಶ್ರೀ ವಿಮಲ ಸಾಗರ ಮುನಿ ಸಂಘಕ್ಕೆ ವಾರಂಗದಲ್ಲಿ ಸ್ವಲ್ಪ ಕಷ್ಟವೊದಗಿತ್ತು. ಸದ್ರಿ ವಿಷಯವು ಅವರ ಮನಸ್ಸಿಗೆ ಮುಂದಾಗಿ ಹೊಳೆದು ಅವರು ಯಾರಿಗೂ ತಿಳಿಸದೆ ಜನವನ್ನು ಅಲ್ಲಿಗೆ ಕಳುಹಿಸಿ ವಿಷಯವನ್ನು ತಿಳಿದುಕೊಂಡಿದ್ದರು. ಇಲ್ಲಿಯ ನಾಗರಿಕರು ಸದ್ರಿ ಸಂಘಕ್ಕೆ ಆದ ಉಪದ್ರವವನ್ನು ಅವರ ಮುಂದೆ ನಿವೇದಿಸಿದಾಗ, ಅವರು ತಾನು ಸದ್ರಿ ಮುಂಜಾನೆಯೇ ಜನ ಕಳುಹಿಸಿ ತಿಳಿದುಕೊಂಡ ವಿಚಾರವನ್ನು ನಾಗರಿಕರಿಗೆ ತಿಳಿಸಿದಾಗ ಎಲ್ಲರಿಗೂ ಆಶ್ಚರ್ಯವಾಯ್ತು. ಅವರ ದರ್ಶನವನ್ನು ಮಾಡಿ ಅವರ ಸಾನ್ನಿಧ್ಯದಲ್ಲಿದ್ದರೆ ಸಮಯ ಗತಿಸುವುದು ಗೊತ್ತಾಗುತ್ತಿರಲಿಲ್ಲ. ಎಷ್ಟು ಸಮಯ ವಿದ್ದರೂ ಇನ್ನಷ್ಟು ಸಮಯವಿದ್ದುಕೊಂಡು ಪುಣ್ಯಭಾಗಿಯಾಗುವ ಎಂದು ಭಾಸ ವಾಗುತ್ತಿತ್ತು. ಅವರ ವ್ರತ–ನಿಯಮಗಳು ಬಹಳ ಕಟ್ಟುನಿಟ್ಟಿನದ್ದಾಗಿದ್ದುವು. ಪ್ರತಿ-ಯೊಬ್ಬರ ಮನಸ್ಸನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳುತ್ತಿದ್ದರು. ಸಮಯಸಾಧಕರಿ-ಗೆಂದೂ ಅವರು ಪ್ರವೇಶವನ್ನು ಕೊಡುತ್ತಿರಲಿಲ್ಲ.

**ವ್ಯಕ್ತಿತ್ವ:**

ಯಾವಾಗಲೂ ಹಸನ್ಮುಖಿಯಾಗಿ ಕರ್ತವ್ಯಪ್ರಜ್ಞರಾಗಿದ್ದು, ಭಕ್ತ ವೃಂದಕ್ಕೆ ಮಾರ್ಗದರ್ಶನವನ್ನು ಮಾಡುತ್ತಿದ್ದರು. ಅಲ್ಲದೆ ಜೈನರಲ್ಲಿರುವ ಸಂಕುಚಿತ ಮನೋ-ಭಾವನೆಯನ್ನು ಹೋಗಲಾಡಿಸಿ, ಕಾಲಕ್ಕೆ ಸರಿಯಾಗಿ ಧರ್ಮಭ್ರಷ್ಟರಾಗದೆ ಜೀವನ ನಡೆಸುವರೇ ಜನರಲ್ಲಿ ಜಾಗೃತಿಯನ್ನೂ ಹೊಸ ಚೈತನ್ಯವನ್ನೂ ತುಂಬುತ್ತಿದ್ದರು.

**ದೂರದರ್ಶಿತ್ವ:**

ಜೈನ ಧರ್ಮವು ಶಿಥಿಲವಾಗುವುದನ್ನು ಮನಗಂಡು ಅದರ ಉದ್ಧಾರಕ್ಕಾಗಿ ಹಾಗೂ ಜೈನ ಬಸದಿಗಳ ಜೀರ್ಣೋದ್ಧಾರಕ್ಕಾಗಿ ಹಾಗೂ ನಿತ್ಯ ಪೂಜಾ ವ್ಯವಸ್ಥೆಗೆ ಹೋದಕಡೆ ಮಾರ್ಗದರ್ಶನ ನೀಡಿ ಭಕ್ತರಲ್ಲಿ ಹೊಸ ಚೈತನ್ಯವನ್ನು ತುಂಬುತ್ತಿದ್ದರು.

ಇಂತಹ ಪರಮ ಪೂಜ್ಯ ಏಲಾಚಾರ್ಯ ಮುನಿಶ್ರೀ ವಿದ್ಯಾನಂದ ಮಹಾ-ಸ್ವಾಮಿಗಳು ತಮ್ಮ ಪವಿತ್ರ ವಿಹಾರ ಮತ್ತು ಮಂಗಲ ಪ್ರವಚನಗಳಿಂದ ಭರತಭೂಮಿ ಯನ್ನು ಪವಿತ್ರಗೊಳಿಸಿರುವರು. ಅಂತಹ ಧರ್ಮ ಪ್ರಸಾರ ಮತ್ತು ಪ್ರಭಾವನೆಯನ್ನು ಮಾಡುತ್ತಿರುವ ಶ್ರೀ ಸ್ವಾಮಿಗಳಿಗೆ ಅರುವತ್ತು ಸಂವತ್ಸರಗಳು ಪೂರ್ಣವಾಗುವ ಈ ಪವಿತ್ರವಾದ ಷಷ್ಠ್ಯಬ್ದಿ ಸಮಾರಂಭದಲ್ಲಿ ಅವರ ದಿವ್ಯ ಚರಣಗಳಲ್ಲಿ ನಮಿಸಿ, ಪುಣ್ಯ-ದಾಯಕವಾದ ಭಕ್ತಿಯ ವಂದನೆಗಳನ್ನು ಅರ್ಪಿಸುವ ಭಾಗ್ಯವೊಂದು ಬಂದುದೊಂದು ನಮ್ಮ ಸೌಭಾಗ್ಯ. ಪೂಜ್ಯಶ್ರೀಯವರು ಶತಾಯುಷಿಗಳಾಗಿ ಶತ ಸಂವತ್ಸರಗಳನ್ನು ಕಾಣು ವಂತಾಗಲಿ. ನಮಗೆ ಅವರ ದರ್ಶನ-ಪ್ರವಚನ ಕೇಳುವ ಭಾಗ್ಯ ಬಾರಿ ಬಾರಿ ಲಭಿಸಲಿ ಎಂದು ಶ್ರೀ ಭಗವಂತನನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಶ್ರೀ ಮುನಿ ವಿದ್ಯಾನಂದ ಮಹಾರಾಜರಿಗೆ ಜಯವಾಗಲಿ.

# A Human Figure : Divine ordained

By: **Y. Umanatha Shenoy,** M.A.,
Research Organizer,
Smt. Rama Rani Jain Research Institute, Moodbidri.

A young man who has passed through fifty-nine springs, with their own indelible impacts, flashes like lightning in different parts of India on different occasions. This lightning awakens those that are in deep slumbers of lethargy, it frightens those ihat have forgotton their duty, it sheds light to those who are optimistic and are on their fight in the strife of life. Those who want to have an experience of this lightning which is so powerful, become conscious about it, the movement they approach, and keep themselves awake to know how it is, what it is like and what exactly it is.

It is in the shape of a human figure with flesh, blood and skin like others, but with something more than what most of us have and what most of us are. It is a paragon of virtues, blended with practical knowledge – the knowledge resembling that Buddha had attained, after deep meditation and analytical thinking.

Outwardly, this human figure is old since it has lived double the time that Jesus Christ, Shree Shankaracharya and Vivekananda had lived, and if age develops maturity, equity and nobility, then just think of the acheivements of those leaders of humanity and this human figure which has lived double the time! Then very easily you can understand what an amount of knowledge, deep and wide, carefully gained and systamatically ordered, this old human figure might be possessing. Indeed you will realize it, if you approach it with open eyes and open heart, with an aim to know of it and hear from if.

The figure is young, as it has not passed even its sixtieth year, which is just half of the life span of the enlightened westerners. It is young not by its features but by its nature - an unfailing dynamism found within, a calibral mind, a passion on compassion for the fellow beings. It is generally believed that in young people emotions are strong, quick, spontaneous and deep, and so they are in this young figure - Sri Elacharya Vidyanandaji Muni Maharaj.

To know him is to see him. You will be simply led by ecstacy with the very glance at Muni Maharaj, if you are capable of understanding comprehensively many sided qualities a person possesses. Only a few distinguished intellectuals have been successful in understanding him at the very first glance, though they had not learnt much about him before they met. His qualities are present in him and self evident and expressive of his innate divinity in his speech, action and activity. The profound scholarship, humanity and humility that Muni Maharaj had attained after deep and elaborate studies of the Jaina Darshanas, had actually impressed the visitors so much that, they had become dumb after overconception of the magnanimity of Muni Maharaj, and even those who had been biased of anything and were not prepared to understand things with open mind on account of their convictions, right or wrong, were simply and suddenly made conscious of the fact that an ocean of knowledge and virtues is before them and that with a small canoe of their limited perceptibility they could hardly pass through it.

But Muni Maharaj Sri Vidyanandaji can very easily be understood, his activities known, his ideals perceived, if we approach him with the feeling that he must be busy with those activities in which great teachers used

to be engaged. God himself, Hidu Dharmashastras dictate, is engaged in the work of creation, maintenance and Distruction. And cann't it be so in the case of Sri Muniji, who has come with a message and a mission?

Very often Muni Maharaj is compare to Achaya Sri Samantabhadra. Vidyananda Muniji has been seriously engaged in explaining the defferent paths of understanding Jain Darshan in the form of books. The great quantity of knowledge can not be condensed is only a small booklet and thus negatively impress that the knowledge is only that much, but it can be done only by showing different directions for the approach of the knowledge. Vidyanandji Maharaj has shown the directions by writing about 21 books, the most important among them being – Anekanta Saptabhangi Syadwada, Abhikshana Jnanopayoga, Ahimsa Vishwa Dharma, Adhyatma Sookti, Thirthankara Vardhamana, Pavanaparva Rakshabandhana, Pinchi Kamandala, Sapta vyasan, Sarvodaya Tirtha, Mantra - Moorti Syadwada, Shramana Samskriti and Deepavali, Rooparekha and Vishwadarma, Dashalakshana of Vishwadharma etc.,.

Vidyanandji Maharaj knows well, as a practical man, that only a small section of the society can read books and understand the philosophy therein, since the literacy in India is only 30 percent and for the remaining 70 percent, only oral explanation is the other alternative. Therefore, Muni Maharaj has taken to give speeches for big congregations. People prefer to attend his speeches for two reasons: by attending them they can have a glance of the magnanimous personality of Vidyanandaji, a fountain of mirth caused by Vidya and secondly to know what exactly was the message of the Divyadhwani, the Divine sound of the Thirthankaras. Very often, it is pointed out by many stalwarts, that a

speech by Muni Maharaj to an ardent congregation was just the replica of a Samavasarana of a Thirthankara. The abstract concept a Samavasarana in our mind becomes a concret evidence before our eyes in the presence of Vidyananda Muni Maharaj.

Presnt generation of youngsters has been lucky to witness a replica of Samavasarana in recent years as Muni Maharaj moved freely with the people dnring two important ceremonies in Karnataka. One was the 1000th year Anniversary of the Installation or consecration of the Bahubali Statue at Shravanabelagola in 1981 and the Installation Ceremony of the new Bahubali Statue at Dharmasthala in 1983, when Muniji had been the Guide and the Guru, giving sermons to the people in large groups. Hardly can any Muniji have such occasion within a period of 3 years when two such ceremonies will be conducted under his guidence and having achieved this Sri Vidyanandaji is looked up to as present Shrutakevali Bhadrabahu.

All such adoration for Muni Maharaj seems to have come up from the people for his varieties of services to the society, done with the sense of dedication and unending love for humanity, the two qualities that make one a leader. He was a leader, as he could command and also know the way, show the way and go the way. He talked only that he had practised and practised only that he had taught – and this made him affectionate to the people and people could find in his person a noble and a practical leader. Therefore, people not only of Jaina Dharma but also of all others prostrated before him, mostly for his nobility and humanity and not merely for his erudiction which can be acquired by others through hard efforts.

Jesus loved children. Buddha loved animals and

Thirthankaras loved even the smallest creatures with unbounded sympathy. Vidyanandaji Maharaj who had imbibed in him the gospels of all these teachers and loved all, including the young people. The young, by nature, are in receptive attitude and if noble sentiments are instilled into their mind. Vidyanadaji believed, they can go a long way in making their life bright and enabling them to lead others also on the correct path. Therefore, Vidyanandaji served in the Gurukula at Humcha, and Shanthisagar Ashram at Shedbala, both in Karnataka, before he ordained the Digambara Deeksha in 1963. Indeed both these Ashrams are lucky to have been consecrated by the stay of Vidyanandji, though for very brief periods.

A lamp that lights another lamp does not lose its brightness, but simply enhances the number of lamps and thus increases the light present. So has been Vidyanandji Maharaj who, in his initial days got enlightened by teacher's life, Sri Mahaveer Keerthiji and Sri Deshabhooshan Maharaj and later, he himself becams alight, a Dharma Jyothi to light many other lamps. In the light of all these lamps we can light our lamp and make our life bright, praying 'Lead us from darkness to light' (Tamasoma Jyotirgamaya.)



# Dazzling and Dynamic Personality of Muni Maharaj

By: **Dr. N. Padmaraja Jain,**
'Vijaya Clinic', Madras-17.

I take this opportunity to ponde over the immense dynamism evident in the Muni Maharaja's achievements. To me, he appears like a many-faceted diamond, each facet emitting a different but equally dazzling hue. The main facet is his role as a religious leader. To my knowledge, after the Great 1008 Munishri Shanthisagarji Mahamuni, there has been no Muni known to Jainism to compare with our Muni Maharaj. Another of his facetis his image as an organiser and administrator. Kumbhoja, which was blessed with the miracle of not only a cow and tiger drinking water from a pond together, but also their respective calves suckling from the other's udder, just a century or so ago on the top of the Kumbhoja Hills, but was also the scene of the miracle of the magic touch of the Mahamuni, with whose benign blessings, what was a decaying and desolate place is now vibrant with religious and cultural activities, throbbing with the fresh blood infused into it by expenditure of crores of rupees mustered by the Muni Maharaj. The splendour and glory that Kumbhoja, is today is the result of the Muni Maharaj's dazzling dynamism. The Bahubali Vidyapeet Gurukula, where 2000 students are learning is an awe-inspiring example of the Muniji's creations.

I was fortunate enough to experience the other facet of the Mahamuniji that is his aspect as a Jain. Among the ten All India Jain Pilgrimage Yatras I have performed, it was in the 1973 Yatra, that I, Dr. N. Padmaraja Jain, along with my elder brother, Neranki Guthu

Athiraj Shetty and my younger brother, Dr. Nemiraja visited Kumboja. The endearing hospitality we received at the mutt, the homely previleges thrown open to us and the moving kindness with which we were treated, all go to project the image of the Muni Maharaj as a spot-less Jain.

Another most interesting facet of the Maha Muniji is his aesthetic dynamism. This is evidenced by the grand statue of Bahubali 45 feet tall erected by him, a perfect picture of spiritual art, set in the symbolic surrounding of the holiest of holies in Jainism, namely, Sammed Shiharjee, Pavapuri, Kailash Hill, Girinar Mountian blessed by the association of Neminath Bhagwan and Champapuri.

The imagery of the Mahamuni as a many-faceted dimond will not be complete, unless I elaborate it a little more. If we can imagine the various Jain mutts such as the Moodbidri Mutt, blessed by Padmavathi Devi and Saraswathi Devi, the Sravanabelagola Mutt graced by Bahubali and Kushmandini Devi, the Humbuja Mutt of the benign Padmavathi, the Narasimharjapura Mutt, aspected by Jwalamalini, the Kolhapur Mutt and the Mutt at Chithamur as different pricelessly previous stones admoring the jewel of Jainism, the Kumbhoja Mutt of Bahubali's grace, presided over by the Muni Maharaj would be the central diamond adding lustre and brilliance to the jewel as a whole. In a similar Steller analogy, we can state that the Muni Maharaj is the Sun in the solar system of Jain Pontiffs.

I have made my mite of contribution to the Bahubali Vidyapeet through instalments. I deem it my birth-previlege to participate in all such activities, which will add glory to the cause of Jainism, for the ultimate benefit of all mankind.

# Reminiscences

By: **A. N. Chandrakeerthi,**
Deputy Director of Town Planning, Bangalore-1

I was a student of Engineering. I had been an inmate of Late Sri M.L.Vardhamanaiah's Jain Boarding at Mysore. The saint who was later to become the great Elacharya had come to Mysore in 1960. He was still an Eilak. There was a free and frank dharmik discussion. He cleared so many doubts in my mind

I went to Delhi in 1965--67 to pursue my studies in post graduate diploma in Town and Country planning at the School of planning and Architecture, New Delhi. I frequently met the Muni Sri 108 Vidyananda Maharaj. Thousands of people used to throng in for his discourses. He had a clear and simple style of pravachana. He had written a large number of books in chaste Hindi. They were simple in language, rich in content and were in addition authentic documents. These books gave a new way of looking at the Jain ways of life and the leaders and preceptors.

There were so many varieties of Bhajans and Bhakti songs. He used to compose them himself and at times encourage others to do so. One such song still rings in my ears 'Tumse Lagi Lagan'.

He used to get book marks printed with sayings of Gandhiji and the life of Bharund. His style at reaching as many as possible was thought provoking. He never made any fuss of his munihood. He used to even tell his followers that he would take food under a tree. No parafernalia is needed. He has lived upto it.

I met him in his private hours and requested him to come to Karnataka. I expressed my craving that

many of the Acharyas hailed from Karnataka, but all would drift towards North India. He ponderd over the issue and told me with the same calm, composure and smile that he would definitely come at a proper time.

The celebration of 2500th Nirvanamahotsava was engineered by him in the most effective way. He collected the different sects together and evolved a common scripture 'Samana Suttam', a common flag, a symbol and suggested 'Dharma Chakra' Srivihara. It was a thumping success. He has reenlightened the world about the lofty teachings of Lord Mahavira both at home and abroad.

Then came his 'Mahaprasthana towards South' second only to Bhadrabahu in 3rd century B.C. His departure from Delhi was a memorable event. His chaturmas at Indore, Bombay were a land mark. His reaching Sravanabelgola, the various meeting in different places enroute are a life time memory for all those who had the good fortune to be present. His stewardship in the celebrations of 1000th year of installation of Lord Bahubali and the Mastakabhisheka in 1981 is an all time record. Shravanabelagola underwent a thorough overhaul. He caused 'Gommatavani' a fort-nightly to be started. He brought a lot of development to this place. His chaturmas was a memorable occasion. The 'Janamangala Kalasa' was thought of by this great Acharya to help all the people across the country, who were not in a position to come to Sravnabelgola to pay their homage to Lord Bahubali. The amount realised has been kept in a trust and the poor and needy people around Sravanabelgola are getting the benefit of the same.

His keen interest on honouring Sastrys, Authors, poets and artists has won great regards for him in particular and Jainism in general. He has been mainly

responsible for the new crop of books, records, cassets etc. besides a number of creative institutions. His compassion to livings beings is par excellence. A 'Viswamanava'. He then installed the new gigantic Bahubali at Dharmasthala for Sri D.Veerendra Heggade, the dynamic Dharmadhikari of the place. Sri Vimalasagara Maharaj was also present.

Vidyananda muni received the appreciation of his Diksha Guru Sri. 108 Bharh Gaurav Deshabhushan Maharaj at Sravanabelgola. He then performed the chathurmas at Shanthigiri and also at Bahubali. They have created a great impact on the local people. There is a great Dharma Jagriti. He has patronised 'Virsevadal' and then revitalised Dakshina Bharath Jain Sabha. 'Vyasanamukthi' is a great slogan for which virsevadal is striving. The very mention of Elacharya, Siddanta Chakravarthi, Vidyananda muni brings pious memories of this all times great Muni. He is a living university. He is a great transformer. Thousands of people are thronged to joy when his name is mentioned in Dharmik Sabhas. Viswa Dharma Pravarthana is a great movement of this Acharya, which should be supported by one and all·

The whole nation resounded with 'Visatta Kandotta' a praise of Bahubhli in Prakrit written almost 1000 years back and which had sunk into oblivion. His efforts at 'Samayasara' are equally remarkable. He is remembered in Karnataka through 'Muni Vidyananda' published by the M. S. P. family trust of Wynad and Vidyananda Vani Part I & II published by the reception committee, at State level in Karnataka.

May the Muni live to be 100. We celebrate the 60th year with 'code of conduct' or Sravakachar as the slogen for the year. May our souls repeat 'Nigranthane Guruvu' which means Nigrantha (Nude) is the true (only) guru. I facilitate the Jnanayogi, Sri. Charukeerthy Bhattarak for publishing a souvenir on this occassion and pay my respects for his kind permission to send anarticle for publication.

## Statement about ownership and other particulars about 'VIVEKABHYUDAYA'

From IV See Rule 8

| | | |
|---|---|---|
| 1. Place of Publication | : | Moodbidri. (Dakshina Kannada) |
| 2. Periodicity of its Publication | : | Monthly. |
| 3. Printer's Name | : | M. Jayavarma Indra. |
| Nationality | : | Indian. |
| Address | : | Sri Padmamba Printers, Moodbidri. (D. K.) |
| 4. Publisher's Name | : | M. Adiraj. |
| Nationality | : | Indian. |
| Address | : | Sri Dig. Jain Math, Moodbidri. (D. K.) |
| 5. Editor's Name | : | Prof. G. Brahmappa. |
| Nationality | : | Indian. |
| Address | : | E.W.S. 248, J.T.Koppal, Mysore-9. |
| ,, | : | B. Chandrayya, |
| | : | Indian. |
| | : | 9-49, Saldana Compound, Moodbidri. (D. K.) |
| 6. Name and address of individuals who own the newspaper and partners and Shareholders holding more than one percent of the total capital | : | Nil. |

I, M. Adiraj, hereby declare that the particulars given above are true to the best of my knowledge and belief.

30-3-1985.

**M. Adiraj**,
(Signature of Publisher)

# ದ್ವಿತೀಯ ಖಂಡ

## ಪ್ರಥಮ ಭಾಗ

## ವಿದ್ಯಾನಂದ ಖಂಡ
## (ವಿದ್ಯಾನಂದ ಪ್ರವಚನಾಮೃತ)

['ವಿದ್ಯಾನಂದ ವಾಣಿ'ಯಿಂದ ಪ. ಪೂ. ಏಲಾಚಾರ್ಯರ ಲೋಕೋಪಕಾರಿ, ಜನ ಕಲ್ಯಾಣ ಪರಕ 5 ಪ್ರವಚನಗಳನ್ನು ಇಲ್ಲಿ ಉದ್ಧರಿಸಲಾಗಿದೆ]

ವಿಷಯಾನುಕ್ರಮ:



ಮೂಡುಬಿದ್ರಿಯ ಗುರುಬಸದಿಯಿಂದ ಶ್ರೀ ಸ್ವಾಮೀಜಿ, ಶ್ರೀಮತಿ ಇಂದಿರಾ ಗಾಂಧಿ, ಶ್ರೀ ದೇವರಾಜ ಅರಸು, ಶ್ರೀ ಗುಂಡೂರಾವ್ ಮುಂತಾದವರು ಇಳಿದುಬರುತ್ತಿರುವುದು.



ಶ್ರೀಮತಿ ಇಂದಿರಾ ಗಾಂಧಿಯವರಿಗೆ ಶ್ರೀ ಸ್ವಾಮೀಜಿ ಉಡುಗೊರೆಕೊಟ್ಟು ಆಶೀರ್ವದಿಸುತ್ತಿರುವುದು.
(ಹಂಪನಾ ಜೊತೆಯಲ್ಲಿ)



ಮೂಡುಬಿದ್ರಿಯ ಗುರು ಬಸದಿಯಿಂದ ಶ್ರೀಮತಿ ಇಂದಿರಾ ಗಾಂಧಿ, ಶ್ರೀ ಪ. ಪೂ. ಚಾರುಕೀರ್ತಿ ಸ್ವಾಮೀಜಿಯವರು
ಶ್ರೀಗಳಾದ ದೇವರಾಜ ಅರಸು, ವೀರೇಂದ್ರ ಹೆಗ್ಗಡೆ, ಸುಬ್ಬಯ್ಯ ಶೆಟ್ಟಿ ಮುಂತಾದವರು ಬರುತ್ತಿರುವುದು.

## स्थितप्रज्ञ श्रावक एवं समाज

१) 'श्रावक गुण संयुक्तम् ।'-
-सायण, ऋग्वेद,

२) 'पंडित भये श्रावगी पानी पीवे छानी'-
-कबीर ग्रंथावली, चाणक्यकोअंग १२

३) 'श्रावक शुद्ध समूह सिद्धान को देखी'-
-जपजी सिख धर्म ग्रंथ.

नाम-श्रावक, स्थापना-श्रावक, द्रव्य-श्रावक एवं भाव-श्रावक ।

ಪ. ಪೂ. ಏಲಾಚಾರ್ಯ ವಿದ್ಯಾನಂದರ ಅಮೂಲ್ಯ ಸ್ವಹಸ್ತ ಬರವಣಿಗೆಯ ಒಂದು ಪೃಷ್ಠ.





# 1. ನಿಂತಲ್ಲಿ – ಕುಳಿತಲ್ಲಿ ಧರ್ಮವಿರಬೇಕು.

ಜೈನಧರ್ಮ ಅತ್ಯಂತ ಸಹಜವಾದುದು. ಅದಕ್ಕೋಸ್ಕರ ಈ ಋಷಿ ಮುನಿಗಳೆಲ್ಲ ಈ ಧರ್ಮಕ್ಕೆ ಪೂಜೆಗೆ ಈ ವಿಧಿವಿಧಾನಕ್ಕೆ ಅನೇಕಾಂತವನ್ನು ಅಳವಡಿಸಿದರು. ಅನೇಕಾಂತದ ವಿಷಯ ಹೀಗಿದೆ. ನಮ್ಮ ಮನಸ್ಸು ಅನೇಕಾಂತ. ಪ್ರತಿಯೊಬ್ಬ ವ್ಯಕ್ತಿಯ ಮನಸ್ಸು ಅನೇಕಾಂತಮಯ. ಅದು ಹೇಗಪ್ಪ ಅಂದರೆ ಈಗ ಮನಸ್ಸಿನಲ್ಲಿ ಏನೋ ಒಂದು ವಿಚಾರ ಮಾಡಿದಿರಿ; ನಾವು ಬೆಟ್ಟಕ್ಕೆ ಹತ್ತಬೇಕು ಅಂತ ಹೇಳಿ. ಸ್ವಲ್ಪ ಹೊತ್ತಿನಲ್ಲಿ ಬೇಡ ಎಂಬ ವಿಚಾರ ಬಂತು. ಅಷ್ಟರಲ್ಲಿ ಮಳೆ ಬಂದಿತು. ನಮ್ಮ ವಿಚಾರ ಸರಿ, ಇಲ್ಲದಿದ್ದರೆ ಮಳೆಯಲ್ಲಿ ಸಿಕ್ಕಿಬಿಡುತ್ತಿದ್ದೆವು ಎಂಬ ತೀರ್ಮಾನಕ್ಕೆ ಬರುವೆವು. ಏನು ತಾತ್ಪರ್ಯ ಅಂದರೆ ನಮ್ಮ ಸ್ವಂತ ಮನಸ್ಸೇ ವಿವಿಧ ರೂಪದಿಂದ ಬದಲಾವಣೆಯಾಗುತ್ತದೆ. ಬದಲಾವಣೆ ಆಗಿ ವಿಚಾರ ಮಾಡಿ ಅನಂತರ ಸತ್ಯಕ್ಕೆ ಬರುತ್ತದೆ ಹೇಗೆ ಆ ಮೋಟಾರು ಗಾಡಿಗೆ ಗೇರನ್ನು ಬದಲಾವಣೆ ಮಾಡುತ್ತಿರುತ್ತಾನೆ ಇಳಿಯುವಾಗ ಹತ್ತುವಾಗ, ಹಾಗೇ ನಮ್ಮ ಅನೇಕಾಂತ ಸ್ಯಾದ್ವಾದ ಸಿದ್ಧಾಂತ ಏನಿದೆ ಮನುಷ್ಯನಿಗೆ ಸುಲಭವಾದ ಮಾರ್ಗ ನೋಡಿಸುತ್ತದೆ.

ಒಂದೇ ಒಂದು ತತ್ವಜ್ಞಾನದಲ್ಲಿ ಅನೇಕ ಧರ್ಮಾತ್ಮ ಗುಣಗಳಿವೆ. ಪ್ರತಿಯೊಂದು ವಸ್ತುವಿನಲ್ಲೂ ಒಳ್ಳೆಯದು ಗುಣವಿದೆ, ಕೆಟ್ಟದ್ದು ಗುಣವಿದೆ. ಭೇದಿ ಆದವನಿಗೆ ಹಾಲು ಕುಡಿಸಿದರೆ ಮತ್ತಷ್ಟು ಭೇದಿಯಾಗುತ್ತದೆ. ಹಾಲು ಕುಡಿಸಬಾರದು ಎಂದು ಹೇಳುತ್ತಾರೆ. ಹಾಲು ಉಪಕಾರಕ್ಕೂ ಅಹುದು, ಅಪಕಾರಕ್ಕೂ ಅಹುದು, ಸಮಸ್ತ ಪದಾರ್ಥಗಳು ಎಷ್ಟು ಸಂಸಾರದಲ್ಲಿವೆಯೋ ಅವೆಲ್ಲ ಅನೇಕಾಂತ ರೂಪದಲ್ಲಿವೆ. ಇದೇ ಸ್ಯಾದಸ್ತಿ. ಇದೇ ಸ್ಯಾದ್ವಾದ ತತ್ತ್ವ.

ನಾವು ಭಗವಂತನ ಭಕ್ತಿ ಮಾಡುತ್ತಿರುವಾಗ ನಮ್ಮ ಪರಿಣಾಮಗಳನ್ನು ನಿರ್ಮಲ ಮಾಡಿಕೊಳ್ಳುವುದು ಮಹತ್ವವಿದೆಯೇ ಹೊರತಾಗಿ, ಮೂರು ಘಂಟೆ ದೇವಸ್ಥಾನದಲ್ಲಿ ಕುಳಿತಿದ್ದೆ ಎಂಬುದು ಮುಖ್ಯವಲ್ಲ. ಪಾರಿವಾಳ, ಹಲ್ಲಿ, ಇಲಿ ಇವೆಲ್ಲ ದಿನವೆಲ್ಲ ದೇವಸ್ಥಾನದಲ್ಲೇ ಇರುತ್ತವೆ. ಅಲ್ಲೇ ನೋಡಿಕೊಂಡಿದ್ದು ಅಕ್ಕಿ ಇದ್ದರೆ ತಿನ್ನುತ್ತಿರುತ್ತವೆ. ಪಾರಿವಾಳವೂ ಏನಾದರೂ ತಿನ್ನಲು ಅಲ್ಲೇ ಇರುತ್ತದೆ. ಹಲ್ಲಿ ಹುಳು ಹಿಡಿದು ತಿನ್ನುವುದರ ಕಡೆ ಮನಸ್ಸಿಟ್ಟಿರುತ್ತದೆ. ಬೆಕ್ಕು ಅಲ್ಲಿ ಅಡಗಿ ಕುಳಿತು ಇಲಿಯನ್ನು ತಿನ್ನಲು ಹೊಂಚು ಹಾಕಿರುತ್ತದೆ. ಕೇವಲ ದೇವಸ್ಥಾನದಲ್ಲಿ ಕುಳಿತುಕೊಂಡು ಅವನನ್ನು ಮೋಸಗೊಳಿಸಬೇಕು, ಇವನನ್ನು ಮೋಸಗೊಳಿಸಬೇಕು, ಕೋರ್ಟಿನಲ್ಲಿ ನಾವು ಗೆಲ್ಲಬೇಕು, ಇಂಥ ಕೆಟ್ಟ ಕೆಟ್ಟ ವಿಚಾರಗಳನ್ನು ದೇವಸ್ಥಾನದಲ್ಲಿ ಕುಳಿತು ಮಾಡಿದರೆ ಏನು ಪ್ರಯೋಜನ? ವೀತರಾಗ ಭಗವಾನರ ದರ್ಬಾರಿಗೆ ಹೋಗಿ ಆತ್ಮ ಕಲ್ಯಾಣಕ್ಕೋಸ್ಕರ ಪೂಜೆ ಮಾಡುವುದು ಬಿಟ್ಟು ಸಂಸಾರದ ಯಾವುದೋ ಒಂದು ಸ್ವಾರ್ಥದ ವಿಷಯ ತೆಗೆದುಕೊಂಡು ಅವನು ನಾಶವಾಗಲಿ, ಅವನ ಗದ್ದೆ ಎಲ್ಲ ನನಗೆ ಸಿಗಲಿ ಇಂಥ ಭಾವನೆಗಳನ್ನಿಟ್ಟುಕೊಂಡು ದೇವಸ್ಥಾನದಲ್ಲಿ ಪೂಜೆ ಮಾಡಿದರೇನಾಗಲಿಕ್ಕುಂಟು ಹೇಳಿ ನೋಡೋಣ. ದೇವಸ್ಥಾನಕ್ಕೆ ನಾವು ಹೋದರೆ ಕೇವಲ ನನ್ನ ಹಾಗೆಯೆ ಕಲ್ಯಾಣವಾಗಲಿ ಈ ಜಗತ್ತಿನ ಎಲ್ಲ ಪ್ರಾಣಿಗಳದೂ ಎಂಬ ಭಾವನೆ ಇಟ್ಟುಕೊಂಡೇ ನಾವು ಪೂಜೆ ಮಾಡಬೇಕು.

ನಾನು ಯಾವಾಗಲೂ ತಮಗೆ ಹೇಳುತ್ತಿರುತ್ತೇನೆ, ಸಂಪೂಜಕಾನಾಂ ಪ್ರತಿಪಾಲಕಾನಾಂ ಯತೀಂದ್ರ ಸಾಮಾನ್ಯ ತಪೋಧನಾನಾಂ। ದೇಶಸ್ಯ-ರಾಷ್ಟ್ರಸ್ಯ-ಪುರಸ್ಯ-ರಾಜ್ಞಃ ಕರೋತಿ ಶಾಂತಿಂ। ಭಗವಾನ್ ಜಿನೇಂದ್ರಃ॥ ಭಗವನ್, ಯಾವನು ತಮಗೆ ಭಕ್ತಿಯಿಂದ ಪೂಜೆ ಮಾಡುತ್ತಾನೋ ಅವನಿಗೆ ಶಾಂತಿ ಸಿಗಲಿ. ಪಾಲಕರಿಗೆಲ್ಲ ರಾಷ್ಟ್ರಪಾಲಕನಾಗಲಿ, ಗ್ರಾಮ ಪಾಲಕನಾಗಲಿ ಅವರಿಗೆಲ್ಲ ಶಾಂತಿ ಸುಖ ಸಿಗಲಿ. ಅರಮನೆಯಲ್ಲಿ ಇರುವವರಿಗೂ ಸಿಗಲಿ, ದೇಶಕ್ಕೆ ಸಿಗಲಿ, ರಾಷ್ಟ್ರಕ್ಕೆ ಸಿಗಲಿ, ಎಲ್ಲರಿಗೂ ಸುಖ ಸಿಗಲಿ ಎಂದು ನಾವು ಪ್ರಾರ್ಥಿಸಬೇಕು. ಈ ಪೂಜೆಯಲ್ಲಿ ವಕ್ತಿಗತ ಸ್ವಾರ್ಥ ಇಲ್ಲ. ಸ್ವಾರ್ಥ ಬಂದ ಮೇಲೇನೆ ಪೂಜೆಯ ಹೆಸರು ಕೆಟ್ಟಿದ್ದು. ಪೂಜೆ ಮಾಡುವುದು, ಮೈತುಂಬ ಗಂಧ ಹಚ್ಚಿಕೊಳ್ಳುವುದು, ಈಚೆಗೆ ಬಂದ ಮೇಲೆ ಜನಕ್ಕೆ ಮೋಸ ಮಾಡುವುದು ಇದು ಧರ್ಮವೇ ಎಂದು ಕೇಳುತ್ತಾರೆ. ಅದಕ್ಕೋಸ್ಕರ ಈ ಧರ್ಮದ ಬಗ್ಗೆ ಜನರಿಗೆ ಆಸ್ಥೆ ಕಡಿಮೆಯಾದುದು.

ದೇವಸ್ಥಾನದಲ್ಲಿ ಕುಳಿತು ಧರ್ಮಮಾಡುವುದು, ಹೊರಗಡೆ ಬಂದು ಅಧರ್ಮ ಮಾಡುವುದು. ಹೊರಗಡೆ ಬಂದ ಮೇಲೂ ಧರ್ಮ ಇರಬೇಕು. ಧರ್ಮ ಏನಿದೆ ಪೂಜ್ಯ ಆಗುತ್ತದೆ, ಶ್ರೇಷ್ಠ ಆಗುತ್ತದೆ, ಆದರಣೀಯ ಆಗುತ್ತದೆ. ಮಹಾತ್ಮಾ ಗಾಂಧಿಯವರು ಶ್ರೀಮದ್‌ರಾಯಚಂದ ಜೈನರವರ ಬಳಿ ಎರಡು ವರ್ಷದ ವರೆಗೆ ಧರ್ಮ ಕಲಿಯಲಿಕ್ಕೆ ಹೋಗುತ್ತಿದ್ದರು. ಒಂದು ದಿವಸ ಒಬ್ಬ ವ್ಯಾಪಾರಿ ಮುತ್ತುಗಳ ಡಬ್ಬವನ್ನು ರಾಯಚಂದರಿಗೆ ಕಳುಹಿಸಿಕೊಟ್ಟರು. ಅಡಿಯಲ್ಲಿ ಭಾರಿ ಬೆಲೆಯುಳ್ಳ ಮುತ್ತು ಮೇಲೆ ಕಡಿಮೆ ಬೆಲೆ ಮುತ್ತು. ರಾಯಚಂದರು 'ನೋಡಪ್ಪ ನೀನು ತಪ್ಪು ಮಾಡಿ ಕಳಿಸಿರುವೆ, ಬೆಲೆಯುಳ್ಳ ಮುತ್ತೂ ಇವೆ' ಎಂದು ಪತ್ರ ಬರೆದರು. 'ಇಲ್ಲ ನಾವು ಸರಿಯಾಗಿ ಕಳಿಸಿದ್ದೇವೆ. ತಾವೇ ತಪ್ಪು ತಿಳಿದುಕೊಂಡಿದ್ದೀರ!' ಎಂದು ಆ ವ್ಯಾಪಾರಿ ಪತ್ರ ಬರೆ

ದನು. ರಾಯಚಂದರು ಸುಮ್ಮನಾಗದೆ ಆತನನ್ನು ಕರೆಸಿ 'ನೀವು ಕಳಿಸಿರುವ ಮುತ್ತಿಗೆ ಬೆಲೆ ಹೆಚ್ಚು. ನಾನು ಲೆಕ್ಕಾಚಾರದಂತೆ ಹಣ ಕೊಡುವೆನು. ಇಲ್ಲದಿದ್ದರೆ ನಿನ್ನ ಮುತ್ತನ್ನು ವಾಪಸ್ಸು ತೆಗೆದುಕೊಂಡುಹೋಗು' ಎಂದು ಹೇಳಿದರು. ಮಹಾತ್ಮಾಗಾಂಧಿಯವರು ರಾಯಚಂದರ ಜೀವನ ಚರಿತ್ರೆಯ ಮುನ್ನುಡಿಯಲ್ಲಿ ಬರೆದಿದ್ದಾರೆ 'ಈ ಅಂಗಡಿಯಲ್ಲೂ ಧರ್ಮವಿರುತ್ತದೆ. ನಾನು ಮೊದಲು ತಿಳಿದುಕೊಂಡಿದ್ದ ಧರ್ಮ ಇರುವುದು ಕೇವಲ ದೇವಸ್ಥಾನದಲ್ಲಿ ಎಂದು. ಶ್ರೀಮದ್‌ರಾಯಚಂದ್ರರ ಹಾಗೆ ಧರ್ಮಮಾರ್ಗಾವಲಂಬಿಗಳಾದರೆ ಎಲ್ಲಾ ಕಡೆಯೂ ಧರ್ಮವಿರುತ್ತದೆ' ಎಂದು ಬರೆದಿದ್ದಾರೆ.

ಧರ್ಮ ಎಲ್ಲಿದೆ ಎಂಬುದನ್ನು ಮೊದಲು ನೀವು ತಿಳಿದು ಕೊಳ್ಳಬೇಕು. ಉತ್ತರ ಭಾರತದಲ್ಲಿ ಗೋಪಾಲದಾಸ್ ಬರಯ್ಯ ಎಂಬ ಭಾರಿ ದೊಡ್ಡ ವಿದ್ವಾಂಸರಿದ್ದರು. ಅವರು ದಿಲ್ಲಿಯಿಂದ ಹೊರಟರು ಗಂಡು ಮಗನನ್ನು ಜೊತೆಯಲ್ಲಿ ಕರೆದುಕೊಂಡು. ಒಬ್ಬನೇ ಒಬ್ಬ ಮಗ. ದಿಲ್ಲಿಯಲ್ಲಿ ರೈಲಿನ ಟಿಕೆಟ್ ತೆಗೆಯುವಾಗ ಮಗನಿಗೆ ಹನ್ನೆರಡು ವರ್ಷ ತುಂಬಿರಲಿಲ್ಲ. ಅವನಿಗೆ ಅರ್ಧ ಟಿಕೆಟ್ ತೆಗೆದುಕೊಂಡರು. ಮಧುರೆ ರೈಲ್ವೆ ಸ್ಟೇಷನ್ ಬರುವಾಗ ನೆನಪಾಯಿತು 'ರಾತ್ರಿ ಹನ್ನೆರಡು ಘಂಟೆಗೆ ಇವನು ಹುಟ್ಟಿದ್ದು, ಇಂದಿಗೆ ಇವನಿಗೆ ಹನ್ನೆರಡು ವರ್ಷ ತುಂಬಿತು' ಎಂದು ಯೋಚಿಸಿ ಬರಯ್ಯರವರು ಮಧುರೆಯ ಸ್ಟೇಷನ್ನಿನಲ್ಲಿ ಇಳಿದರು. ಮಗನಿಗಾಗಿ ಪೂರಾ ಟಿಕೆಟ್ ತೆಗೆದುಕೊಂಡರು. ಸ್ಟೇಷನ್ ಮಾಸ್ಟರ್ ನೋಡಿದರು. 'ಇರಲಿ ಹೋಗಿ' ಎಂದರು 'ನಾನು ಭಾರತೀಯ ಸಂವಿಧಾನದ ಪ್ರಕಾರ ರೈಲಿನ ನಿಯಮಾವಳಿ ಪ್ರಕಾರ ನಡೆದು ಕೊಳ್ಳಬೇಕು. ಉಲ್ಲಂಘನೆಯಿಂದ ದೋಷ ಬರುತ್ತದೆ. ದೇವಸ್ಥಾನದಲ್ಲಿ ಮಾತ್ರ ಧರ್ಮವಲ್ಲ. ನಾನು ವಿದ್ವಾಂಸ, ನಾನು ಆಚರಿಸದೇ ಹೋದರೆ ಉಳಿದವರು ಆಚರಿಸುವರೇ?' ಎಂದು ಹೇಳಿದರು.

ಗಣೇಶ್ ಪ್ರಸಾದ್ ವರ್ಣಿಜಿಯವರು ಒಮ್ಮೆ ಎಲ್ಲೋ ಹೋಗಿದ್ದರು. ಅವರು ಮನೆ ಮುಟ್ಟುವ ವರೆಗೆ ರೈಲ್ವೆ ಟಿಕೆಟಿಗೆ ಅವರಲ್ಲಿ ದುಡ್ಡಿರಲಿಲ್ಲ. ಎಲ್ಲಿಯ ವರೆಗೆ ಹೋಗಬಹುದಾಗಿತ್ತೋ ಅಷ್ಟಕ್ಕೆ ಟಿಕೆಟ್ ತೆಗೆದುಕೊಂಡು ಹೋದರು. ಅಲ್ಲಿ ಇಳಿದರು. ದಾರಿಯಲ್ಲಿ ಕೆಲಸ ನಡೆಯುತ್ತಿತ್ತು. ಜಲ್ಲಿ ಎತ್ತಿ ಹಾಕಿದರು. ಹಣ ಉಳಿಸಿದರು. ಕಡಲೆಕಾಳು ತಿಂದು ದುಡ್ಡು ಒಟ್ಟು ಮಾಡಿ ಆ ಮೇಲೆ ಟಿಕೆಟ್ ಪಡೆದುಕೊಂಡು ಊರು ತಲುಪಿದರು. ನಮಗೆ ಒಂದು ಭ್ರಮೆ ಇದೆ. ಏನು ಅಂದರೆ ಧರ್ಮ ಇರುವುದು ದೇವಸ್ಥಾನದಲ್ಲಿ ಎಂದು. ಧರ್ಮ ದೇವಸ್ಥಾನದಲ್ಲಿಲ್ಲ, ದೇವಸ್ಥಾನ ಒಂದು ಪಾಠಶಾಲೆ ಇದ್ದ ಹಾಗೇ. ನಾವು ಅಲ್ಲಿಗೆ ಧರ್ಮ ಕಲಿತುಕೊಳ್ಳುವುದಕ್ಕೆ ಹೋಗಬೇಕು ವಿನಹ ಅಲ್ಲಿ ಧರ್ಮ ಮಾಡುವುದಕ್ಕಲ್ಲ. ಧರ್ಮ ಮಾಡುವುದು ಎಲ್ಲಿ ಅಂದರೆ ನಾವು ಎಲ್ಲಿದ್ದೇವೋ ಅಲ್ಲಿ. ಈ ಮಾತನ್ನು ನೆನಪಿನಲ್ಲಿಟ್ಟುಕೊಳ್ಳಿ.

ಭಗವಾನ್ ರಾಮನ ಚರಿತ್ರೆಯಲ್ಲಿ ಒಂದು ವಿಷಯ ಬಂದಿದೆ. ರಾಮನು ಮಲಗಿದ್ದಲ್ಲಿ, ಎದ್ದಲ್ಲಿ–ಕುಳಿತಲ್ಲಿ ಅವನ ಜೊತೆಯಲ್ಲೇ ಧರ್ಮವಿತ್ತಂತೆ. ಧರ್ಮವನ್ನು ಜೊತೆಯಲ್ಲಿ ತೆಗೆದುಕೊಂಡು ಹೋದನೇ ಹೊರತು ಅದನ್ನು ಬಿಡಲಿಲ್ಲ. ನೀವು ಧರ್ಮವನ್ನು ದೇವಸ್ಥಾನದಲ್ಲೇ ಬಿಟ್ಟು ಅಂಗಡಿ, ಗದ್ದೆ, ತೋಟ ಇವುಗಳಿಗೆ ಹೋಗುವಿರಿ. ಧರ್ಮ ಅಂದರೆ ಕರ್ತವ್ಯ, ನ್ಯಾಯ, ಸತ್ಯ ಆಚರಣೆ. ನಾವು ಎಲ್ಲರೂ

ರಾಮನ ಭಕ್ತಿ ಮಾಡುತ್ತೇವೆ, ಮಹಾವೀರನ ಭಕ್ತಿ ಮಾಡುತ್ತೇವೆ. ಅವರು ಸತ್ಯದ ಸಾಕ್ಷಾತ್ಕಾರ ಮಾಡಿದರು. ಆದರಿಂದ ಅವರ ಪೂಜೆ ಮಾಡುತ್ತೇವೆ. ನಮ್ಮ ನಿಮ್ಮ ಪೂಜೆಯನ್ನು ಜನ ಏಕೆ ಮಾಡುವುದಿಲ್ಲ? ನಾವು ಇನ್ನೂ ಧರ್ಮಮಯ ಆಗಬೇಕಾಗಿದೆ. ಅನಂತರ ನಾವು ರಾಮನ ಹೆಸರು ತೆಗೆದುಕೊಳ್ಳಲು ಅಧಿಕಾರಿ ಆಗುತ್ತೇವೆ.

ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿ ಕೋರ್ಟಿಗೆ ಹೋಗಿ ಸುಳ್ಳು ಮಾತನಾಡಿದರೆ ಧರ್ಮ ಎಲ್ಲಿ ಉಳಿಯಿತು? ಜೀವನದ ಎಲ್ಲ ರಂಗದಲ್ಲೂ ಧರ್ಮ ವ್ಯಾಪಿಸಬೇಕು- ನೀವೇ ವಿಚಾರ ಮಾಡಿ, ಚಿಂತನೆ ಮಾಡಿ. ಯುಧಿಷ್ಠಿರ ಮಹಾರಾಜ ಯುದ್ಧರಂಗದಲ್ಲಿ ಒಂದು ಸುಳ್ಳು ಹೇಳಿದ್ದು ಮಹಾಭಾರತದಲ್ಲಿ ವರ್ಣನೆ ಬಂದಿದೆ*. ಸಂದಿಗ್ಧಾತ್ಮಕ ವಚನವನ್ನು ನುಡಿದಿದ್ದರಿಂದ ಧರ್ಮರಾಯನು ನರಕವನ್ನು ಹಾದು ಹೋಗಬೇಕಾಯಿತು ಸ್ವರ್ಗಕ್ಕೆ. ಆಗ ನಾರಕಿಗಳು ಧರ್ಮರಾಜನನ್ನು ಹಿಡಿದು ಬಿಟ್ಟರಂತೆ. 'ಅಪ್ಪ, ಏಕೆ ಹಿಡಿಯುತ್ತೀರಿ?' 'ನೀವು ಇಲ್ಲಿ ಬಂದುದರಿಂದ ನಮಗೆ ಭಾರಿ ಸುಖವಾಗುತ್ತಿದೆ, ಸಂತೋಷವಾಗುತ್ತಿದೆ. ನೀವು ಇಲ್ಲೇ ಇದ್ದು ಬಿಡಿ, ನಮಗೆ ಭಾರಿ ಸುಖ-ಶಾಂತಿ ಸಿಗುತ್ತದೆ' ಎಂದರಂತೆ. ಯುಧಿಷ್ಠಿರ ಮಹಾರಾಜ ವಿಚಾರ ಮಾಡುತ್ತಾನೆ- 'ನಾನು ಇಷ್ಟು ದೊಡ್ಡ ಧಾರ್ಮಿಕ ಮನುಷ್ಯ, ನನ್ನ ಹೆಸರು ಧರ್ಮರಾಜ! ಕೇವಲ ಒಂದು ಸುಳ್ಳು ಮಾತನಾಡಿದ್ದಕ್ಕೆ ನನಗೆ ಈ ಮಾರ್ಗದಿಂದ ಬರಬೇಕಾಯಿತು! ಬಾಳೆಲ್ಲ ಸುಳ್ಳು ಮಾತನಾಡಿದವರು ಎಷ್ಟು ಒದ್ದಾಡುತ್ತಿದ್ದಾರೆ? ಧರ್ಮರಾಯನ ಕಣ್ಣಲ್ಲಿ ನೀರು ಬಂದಿತು. ಧರ್ಮರಾಯ ಪೃಥ್ವೀಮಂಡಲದಲ್ಲಿ ತಿರುಗುತ್ತಿರುವಾಗ ಜೊತೆಯಲ್ಲಿ ಒಂದು ನಾಯಿ ತೆಗೆದುಕೊಂಡು ಹೊರಡುತ್ತಿದ್ದನಂತೆ. ಜನಕ್ಕೆ ಬಹಳ ಆಶ್ಚರ್ಯವಾಯಿತು. ಹೋದಲ್ಲೆಲ್ಲ ಜನ ಕೇಳುತ್ತಿದ್ದರಂತೆ- 'ಇದೇನು ಸ್ವಾಮಿ, ನಾಯಿ ಹಿಡಿದುಕೊಂಡು ನೀವು ತಿರುಗುತ್ತಿರುವಿರಿ? ಆಕಳಾದರೂ ಆದರೆ ಅದು ಗೋರಕ್ಷಣೆ, ಸಿಂಹವಾದರೂ ಆಗಿದ್ದರೆ ಪರಾಕ್ರಮ ಪ್ರಕಟವಾಗುತ್ತಿತ್ತು! ಎಲ್ಲಾ ಪ್ರಾಣಿಗಳನ್ನು ಬಿಟ್ಟು ನಾಯಿ ಹಿಡಿದಿರಲ್ಲ! ಇದನ್ನು ಏಕೆ ತಂದಿರಿ?'

'ಇದರಲ್ಲಿ ಒಳ್ಳೆಯ ಗುಣಗಳಿರುವುವು. ಆದುದರಿಂದ ಜೊತೆಯಲ್ಲಿ ತಂದಿರುವೆನು.' 'ಇದರಲ್ಲಿ ಒಳ್ಳೆ ಗುಣ ಇರುವುದಾದರೆ ಬಯ್ಯುವಾಗಲೇ ನಾಯಿ ಎಂದು ಜನ ತುಚ್ಛವಾಗಿ ಹೇಳುವರಲ್ಲ? ಏಕೆ ಹೇಳುತ್ತಾರೆ? ನಾಯಿ ಹೆಸರು ತೆಗೆದುಕೊಂಡು ನೀನು ನಾಯಿಯ ಹಾಗೆ ಎಂದು ಬೈಗಳನ್ನು ಬಯ್ಯುತ್ತಾರಲ್ಲ? ಇದರಲ್ಲಿ ಯಾವ ಗುಣ ಒಳ್ಳೆಯದು ಕಾಣುವುದು?' 'ನೋಡಪ್ಪ ಇದರಲ್ಲಿ ಎಲ್ಲಾ ಒಳ್ಳೆಯ ಗುಣಗಳಿವೆ. ಒಂದೇ ಒಂದು ಕೆಟ್ಟ ಗುಣ. ಸ್ವಾಮಿಭಕ್ತಿಯಿದೆ. ಇನ್ನೂ ಎಷ್ಟೋ ಒಳ್ಳೆಯ ಗುಣಗಳಿವೆ. ಒಂದೇ ಒಂದು ಕೆಟ್ಟ ಗುಣ ಅಂದರೆ ಸ್ವಜಾತಿ ವಿರೋಧಿ. ಬೇರೆ ನಾಯಿಯನ್ನು ಕಂಡ ಕೂಡಲೇ ಬೊಗಳುವುದು ಅದೊಂದು ಕೆಟ್ಟ ಗುಣ ಇರುವುದರಿಂದ ಎಲ್ಲರೂ ಇದಕ್ಕೆ ಬೈಗಳನ್ನು ಬಯ್ಯುತ್ತಾರೆ' ಎಂದು ಧರ್ಮರಾಯ ಹೇಳಿದನು. 'ಸ್ವಜಾತಿ ವಿರೋಧ ಯಾರು ಮಾಡುವರೋ ಅವರು ಮುಂದಿನ ಜನ್ಮದಲ್ಲಿ ನಾಯಿಗಳಾಗಿ ಹುಟ್ಟುವರು. ಆ ಶಿಕ್ಷಣ ಕೊಡುವುದಕ್ಕಾಗಿಯೇ ಈ ನಾಯಿಯನ್ನು ಹಿಡಿದುಕೊಂಡು ತಿರುಗುತ್ತಿದ್ದೇನೆ' ಎಂದು ಮತ್ತೂ ಹೇಳಿದನು. ಇದನ್ನು ನೆನಪಿ

ನಲ್ಲಿಡಿರಿ. ಸ್ವಜಾತಿ ವಿರೋಧಿ ಆದವನು ಮುಂದಿನ ಭವದಲ್ಲಿ ನಾಯಿಯಾಗೇ ಹುಟ್ಟು ವನು. ನಾಯಿಯಾಗಿ ಹುಟ್ಟಬಾರದು ಅಂದರೆ ಸ್ವಜಾತಿ ವಿರೋಧ ಮಾಡಲು ಯಾರೂ ಹೋಗಬೇಡಿ. ನಾನಿದನ್ನು ಹೇಳುತ್ತಿಲ್ಲ. ಧರ್ಮರಾಯ ಹೇಳುತ್ತಿರುವನು.

ಧರ್ಮ ನಮ್ಮ ಜೊತೆಯಲ್ಲೇ ಇರಬೇಕೆ ಹೊರತಾಗಿ ಬೇರೆ ಕಡೆ ಇರುವಂತಿಲ್ಲ. ವಾಲ್ಮೀಕಿ ಮಹರ್ಷಿ ಹೇಳಿದ್ದಾರೆ- ರಾಮ–ಲಕ್ಷ್ಮಣ–ಹನುಮಾನ್ ಇವರು ರಾವಣನ ಶವ ಬಿದ್ದ ಕೂಡಲೇ ಆ ಶವದ ಬಳಿ ನಿಂತರು. ಅಷ್ಟರಲ್ಲೇ ಸೇನಾಧಿಕಾರಿಯೊಬ್ಬ 'ಈ ರಾವಣ ಮಾಡಿದ್ದು ಮಹಾದ್ರೋಹ, ಇವನಿಗೆ ಅಪಮಾನ ಮಾಡಬೇಕು' ಎಂದು ಒದೆಯಲು ಕಾಲು ಎತ್ತುತ್ತಿದ್ದನಂತೆ. 'ರಾವಣನು ವಿಭೀಷಣನಿಗೆ ಮಾತ್ರ ದೊಡ್ಡ ಅಣ್ಣ ಅಲ್ಲ ನಾನೂ ಕೂಡ, ನನಗೆ ದೊಡ್ಡ ಅಣ್ಣ ಎಂದು ತಿಳಿದುಕೊಳ್ಳು ತ್ತೇನೆ' ಎಂದು ಹೇಳಿ ಸೇನಾಧಿಪತಿಯನ್ನು ರಾಮನು ತಡೆದನು. 'ರಾವಣ ಬಹಳ ಬುದ್ಧಿವಾನ್, ಗುಣವಂತ! ಏನೋ ಒಂದು ತಪ್ಪು ಮಾಡಿರಬಹುದು. ಅದನ್ನು ನಾನು ಕ್ಷಮೆ ಮಾಡಿ ಬಿಡುವೆನು. ನಾವು ಮನಸ್ಸಿನಲ್ಲಿ ಇಟ್ಟುಕೊಳ್ಳುವ ಹಾಗಿಲ್ಲ. ಏಕೆಂದರೆ ನಾವು ಇಕ್ಷ್ವಾಕುವಂಶಿಗಳು. ಸತ್ತವರ ಬಗ್ಗೆ ನಾವು ವೈರವನ್ನು ಸಾಧಿ-ಸುವುದಿಲ್ಲ. ನಾವು ಮರೆತುಬಿಡುತ್ತೇವೆ' ಎಂದು ವಿಭೀಷಣಾದಿಗಳಿಗೆ ರಾಮನು ತಿಳಿಸಿದನು. 'ನಾವು ಇಕ್ಷ್ವಾಕುವಂಶಿಗಳು. ಕಾರ್ಯಸಿದ್ಧಿಯ ನಂತರ ವೈರವನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವವರಲ್ಲ' ಎಂದು ರಾಮನು ಕ್ಷಮಾಶೀಲನಾದನು.

ಈ ಮಾತನ್ನು ಕೇಳಿ ಎದುರಿಗಿದ್ದ ಮಂಡೋದರಿ ರಾಮನನ್ನು ಸ್ತುತಿಸಿದಳು. 'ನಿನ್ನ ತಾಯಿ ಧನ್ಯೆ! ನಿನ್ನ ತಂದೆ ಧನ್ಯ! ನಿನ್ನ ಇಕ್ಷ್ವಾಕು ವಂಶ ಧನ್ಯ! ಏಕೆಂದರೆ ಇಷ್ಟು ದೊಡ್ಡ ಅಪರಾಧ ಮಾಡಿದರೂ ಕೂಡ ನೀನು ಅವನನ್ನು ಕ್ಷಮಿಸಿರುವೆ. ಜೊತೆಗೆ ಅಣ್ಣ ಎಂದು ಹೇಳುತ್ತಿರುವೆ' ಎಂದು ಅವಳೂ ಕೂಡ ರಾಮ ಭಕ್ತೆಯಾದಳು. ನೀವು ಏನು ಮಾಡುತ್ತಿದ್ದಿರಿ ಹೇಳಿ? ಅರೆದು ತಿಂದು ಹಾಕಿ ಬಿಡುತ್ತಿದ್ದಿರಿ. ಪರಂತು ರಾಮ ಎಷ್ಟೊಂದು ಮಹಾನ್ ಉದಾರಿ ವಿಚಾರಿ! 'ರಾಮ, ನೀನು ಅಯೋಧ್ಯೆಗೆ ಹೋಗ ಬಾರದು. ನಿನಗೆ ಪಟ್ಟಾಭಿಷೇಕ ಮಾಡುತ್ತೇವೆ. ಸುವರ್ಣಮಯ ಲಂಕೆಯನ್ನು ನಿಮ ಗೊಪ್ಪಿಸುವೆವು, ಎಂದು ವಿಭೀಷಣ ನಮ್ರನಾಗಿ ತಿಳಿಸಿದನು.

ಕೆಟ್ಟ ವಿಚಾರಗಳನ್ನು ಮರೆತು ಒಳ್ಳೆಯ ವಿಚಾರಗಳನ್ನು ಯಾವಾಗಲು ಮನಸ್ಸಿ ನಲ್ಲಿ ಇಟ್ಟುಕೊಳ್ಳಬೇಕು. ಪೂಜೆ ಮಾಡುವುದಕ್ಕೆ ನಾವು ಹೋಗುವುದು ಏನಪ್ಪ ಅಂದರೆ ಅವನು ನಾಶವಾಗಲಿ, ಹಾಳಾಗಲಿ, ಅವನಿಗೆ ತೊಂದರೆ ಆಗಲಿ ಅಂತ ಹೋಗೋ ಹಾಗಿಲ್ಲ, ಎಲ್ಲರಿಗೂ ಕಲ್ಯಾಣವಾಗಲಿ ಎಂಬ ಭಾವನೆಯಿಂದ ಹೋಗಬೇಕು. ಅಂಥ ಪೂಜೆಯಿಂದ ಮಾತ್ರ ಫಲ ಸಿಗುತ್ತದೆ. ಇನ್ನೊಬ್ಬರಿಗೆ ಕೆಟ್ಟದಾಗಲಿ ಎಂದು ದುರ್ಭಾ ವನೆ ಇಟ್ಟುಕೊಂಡು ಪೂಜೆ ಮಾಡಿದರೆ ಪಾಪ ಸಂಚಯ ಮಾಡಿಕೊಳ್ಳುವೆವು ನಿಮ್ಮ ಅಕ್ಕಿ ಕಾಳಿಗೆ, ಹಣ್ಣು-ಹಂಪಲಿಗೆ, ಹೂವಿಗೆ ಪ್ರಸನ್ನನಾಗಿ ಆ ದೇವರು ವರ ಕೊಡುವು ದಾದರೆ ಶ್ರವಣಬೆಳಗುಳದಲ್ಲಿರುವ ಎಲ್ಲಾ ಹೂವನ್ನೂ ಕಡಿದು ದೇವರಿಗೆ ಇಟ್ಟುಬಿಡು ವೆನು, ಕೊಡಲಿ ವರವನ್ನು ಎಷ್ಟು ಕೊಡುತ್ತಾನೋ ಅವನು.

ಉತ್ತಮವಾದ ಪರಿಣಾಮವನ್ನಿಟ್ಟುಕೊಂಡು, ನಿರ್ಮಲವಾದ ಪರಿಣಾಮವನ್ನಿಟ್ಟು ಕೊಂಡು ನಾವು ದೇವರ ಭಕ್ತಿ, ಪೂಜೆಗಳನ್ನು ಮಾಡಬೇಕು. ನಮ್ಮ ಮನಸ್ಸೇ ಮಂಗಳಕ್ಕೆ ಕಾರಣ, ನಮ್ಮ ಮನಸ್ಸೇ ಮುಕ್ತಿಗೆ ಕಾರಣ. ಅದಕ್ಕೋಸ್ಕರ ನಾವು ನಮ್ಮ ಮನಸ್ಸಿನಲ್ಲಿ ಇರತಕ್ಕಂಥ ಗಂಟನ್ನು, ವಕ್ರತೆಯನ್ನು ತೆಗೆದು ಬಿಟ್ಟು ಪೂಜೆ ಮಾಡಬೇಕು. ಆಗ ಮೋಕ್ಷ ಮಾರ್ಗ ಪ್ರಶಸ್ತವಾಗುತ್ತದೆ. ಪ್ರತಿಯೊಂದಕ್ಕೂ ಮನಸ್ಸೇ ಕಾರಣ ವೆಂದು ನಮ್ಮಲ್ಲಿ ಹೇಳಿದ್ದಾರೆ.

ಧರ್ಮವನ್ನು ಅನೇಕಾಂತ ದೃಷ್ಟಿಯಿಂದ ನಾವು ನೋಡಬೇಕು. ಧರ್ಮವು ಕೇವಲ ಸಂಸಾರ ಸುಖಕ್ಕೇ ಅಲ್ಲ, ಆತ್ಮವನ್ನು ನಿರ್ಮಲ ಮಾಡುವುದಕ್ಕಾಗಿ ಇರುವುದು. ಪರಿಣಾಮವನ್ನು ನಿರ್ಮಲ ಮಾಡಿಕೊಂಡು ಮೋಕ್ಷಮಾರ್ಗದಲ್ಲಿ ಒಳ್ಳೆಯ ರೀತಿಯಿಂದ ನಡೆಯುವುದಕ್ಕೋಸ್ಕರ ನಾವು ಪ್ರಯತ್ನ ಪಡಬೇಕು. ಯಾವನು ದೇವಸ್ಥಾನದಲ್ಲಿ ಕೇವಲ ಸಾಂಸಾರಿಕ ಇಚ್ಛೆಗಳನ್ನು ಪೂರೈಸಿಕೊಳ್ಳಲು ಪ್ರಯತ್ನ ಪಡುತ್ತಾನೆ, ಸಂಸಾರ ದಿಂದ ಮುಕ್ತನಾಗಿ ನಾನೂ ಕೂಡ ಪರಮಾತ್ಮನಾಗಬೇಕು ಎಂಬ ಭಾವನೆಯನ್ನು ಇಟ್ಟುಕೊಳ್ಳಲು ಸಾಧ್ಯವಾಗಿಲ್ಲ ಅವನ ಸ್ಥಿತಿ ಹೇಗಪ್ಪ ಅಂದರೆ ಈ ಕಲ್ಲು ಏನಿರುತ್ತದೆ ಕಿಲೋಮೀಟರದು ಕಲ್ಲು ಅದಕ್ಕೇ ಸುತ್ತು ಹಾಕಿದಂತೆ. ಎಷ್ಟು ಸುತ್ತು ಹಾಕಿದರೂ ಅವನು ಮುಂದೆ ಹೋಗದೆ ಅಲ್ಲೇ ಇದ್ದಾನೆ. ಹಾಗೇನೆ ನಾವು ದೇವಸ್ಥಾನದಲ್ಲಿ ಇರುವುದೇ ಹೊರತಾಗಿ ಹೊರಗೆ ಹೋಗೋ ಹಾಗಿಲ್ಲ. ದೇವಸ್ಥಾನದಲ್ಲಿ ಮನಸ್ಸು ಹರಿದಾಡಿದರೂ ಅದರಲ್ಲಿ ಪವಿತ್ರತೆಯಿಲ್ಲ. ನಾವು ಮನೆಯಲ್ಲಿದ್ದರೂ ಮನಸ್ಸಿನಲ್ಲಿ ಪವಿತ್ರತೆಯಿರಬೇಕು. ಕುಂಬಾರ ಚಕ್ರವನ್ನು ತಿರುಗಿಸುವಾಗ ದೊಣ್ಣೆ ಹಾಕಿ ತಿರು-ಗಿಸುತ್ತಾನೆ. ದೊಣ್ಣೆ ತೆಗೆದು ಬಿಟ್ಟರೂ ಅದು ತಿರುಗುತ್ತದೆ. ದೇವಸ್ಥಾನದಲ್ಲಿ ನಮ್ಮ ಮನಸ್ಸಿನಲ್ಲಿ ಬರತಕ್ಕಂಥ ಪವಿತ್ರ ವಿಚಾರಗಳು ಇಪ್ಪತ್ತ ನಾಲ್ಕು ಗಂಟೆ ತಿರುಗುವುವು. ಇದಕ್ಕೆ ಲೋಪವಾಗಬಾರದು. ದೇವಸ್ಥಾನಕ್ಕೆ ಹೋದುದಕ್ಕೆ ಇದೇ ಲಾಭ. ಸಂಸಾರಿಕ ಸುಖ ಕ್ಷಣಿಕ. ಅನಾದಿ ಕಾಲದ ತನಕ ನಮಗೆ ಸುಖ ಕೊಡು ವುದು ಯಾವುದು ಅಂದರೆ ನಮ್ಮ ಒಳ್ಳೆ ನಿಷ್ಕಾಮ ಭಾವನೆ. ಆ ನಿಷ್ಕಾಮ ಭಾವನೆ ಗೋಸ್ಕರ ನಾವು ಭಗವಂತನ ಪೂಜೆಯನ್ನು ಭಕ್ತಿ-ಭಾವದಿಂದ ಮಾಡಬೇಕು.

ಪೂಜೆಗಳಲ್ಲಿ ದೊಡ್ಡ ದೊಡ್ಡ ವಸ್ತುಗಳನ್ನು ಏರಿಸಿದರೆ ಮಾತ್ರ ನಮ್ಮ ಭಕ್ತಿ ಪೂರ್ಣವಾಗುತ್ತದೆ ಎಂದು ತಿಳಿಯಬಾರದು. ಪರಿಣಾಮ ಶುದ್ಧವಾಗಿರಬೇಕು. ಶುದ್ಧ ಪರಿಣಾಮವೇ ಮುಕ್ತಿಗೆ ಕಾರಣ. ಸಂಸಾರದಲ್ಲಿ ಈ ಜೀವ ಅನಂತ ದುಃಖ ಗಳನ್ನು ಪ್ರತಿ ನಿತ್ಯ ಅನುಭವಿಸುತ್ತಿರುವನು. ಈ ದುಃಖಕ್ಕೆ ಅಂತ್ಯವಿಲ್ಲ. ಕೌರವ– ಪಾಂಡವರಂಥವರಿಗೂ ಒಂದು ಕ್ಷಣದ ವರೆಗೆ ಸುಖ ಸಿಗಲಿಲ್ಲ ಅಂದ ಮೇಲೆ, ರಾಮ ನಂಥ ಮಹಾಪುರುಷ ಹದಿನಾಲ್ಕು ವರ್ಷ ವನವಾಸ ಅನುಭವಿಸಬೇಕಾಯಿತು. ಅಂಥವರ ಪಾಡೇ ಹಾಗಾದ ಮೇಲೆ ನಾವು ಎಷ್ಟರವರು! ಒಂದು ಹುಲ್ಲು ಕಡ್ಡಿ ಇದ್ದ ಹಾಗೆ. ಆದಿನಾಥ ಭಗವಾನರು ಆರು ತಿಂಗಳ ವರೆಗೆ ಅನ್ನವಿಲ್ಲದೆ ಕಷ್ಟ ಪಡ-ಬೇಕಾಯಿತು. ಬಾಹುಬಲಿ ಒಂದು ವರ್ಷದ ವರೆಗೆ ಆಹಾರವಿಲ್ಲದೆ ಘೋರ ತಪಸ್ಸು

ಮಾಡುವಾಗ ಮೈ ಮೇಲೆ ಬಳ್ಳಿ ಅಡರಿತು! ನೋಡಿ, ಒಳ್ಳೆಯ ಪರಿಣಾಮ ಪಡೆದು ಕೊಂಡು ಮುಕ್ತನಾಗಬೇಕಾದರೆ ಎಷ್ಟು ಕಷ್ಟಪಡಬೇಕು !

ಇಂಜಿನಿಯರ್ ಆದರೆ ಕಾಡಿನಲ್ಲಿ ಎಲ್ಲೆಲ್ಲೋ ಸರ್ವೆ ಮಾಡುತ್ತ ತಿರುಗಬೇಕು. ಬಿಸಿಲಿರಲಿ, ಮಳೆಯಿರಲಿ, ಛಳಿಯಿರಲಿ ಕಾಡಿನಲ್ಲಿ ಎಲ್ಲಾದರೂ ಸರ್ವೆ ಮಾಡಲು ಹೋದಾಗ ಉಪವಾಸ ಬೀಳಬೇಕಾಗುವುದು. ಅದನ್ನು ಸಹನೆ ಮಾಡುತ್ತಾರೆ. ಆದರೆ ನೋಡಪ್ಪ, ನೀನು ದೇವಸ್ಥಾನದಲ್ಲಿ ಸ್ವಲ್ಪ ಹೊತ್ತು ಕುಳಿತು ಪೂಜೆ ಮಾಡು, ಉಪವಾಸ ಮಾಡು ಎಂದರೆ, ಎರಡು ಬಾರಿ ಚಾ ಕುಡಿಯುವುದಾದರೆ ಉಪವಾಸ ಕೊಟ್ಟು ಬಿಡಿ ಎನ್ನುತ್ತಾರೆ. ಕಷ್ಟಪಡಲಿಕ್ಕೆ ತಯಾರಿಲ್ಲ.

ಇಂದ್ರಿಯ ಸುಖವನ್ನು ಕಡಿಮೆ ಮಾಡಿ ಆತ್ಮಸುಖಕ್ಕೋಸ್ಕರ ಧರ್ಮವನ್ನು ತಿಳಿದುಕೊಳ್ಳಬೇಕು. ಈ ಜಗತ್ತಿನಲ್ಲಿ ಅಲ್ಪ-ಸ್ವಲ್ಪ ಸುಖ-ಶಾಂತಿ ಏನಾದರೂ ಇದ್ದರೆ ಅದು ಧರ್ಮದಿಂದ. ಎಲ್ಲರೂ ಅಧರ್ಮಿಗಳೇ ಆದರೆ ಈ ಜಗತ್ತಿನಲ್ಲಿ ಮಳೆ ಕೂಡ ಆಗಲಿಕ್ಕಿಲ್ಲ. ಈ ಸಂಸಾರವೆಲ್ಲ ಸಮಾಪ್ತಿಯಾಗಲಿಕ್ಕುಂಟು. ಧರ್ಮ ಯಾವಾಗಲೂ ಇದೆ. ನಾವು ಇದ್ದಲ್ಲಿ ಎದ್ದಲ್ಲಿ ಧರ್ಮವಿರಬೇಕು. ನಮ್ಮಲ್ಲಿ ಚಿಕ್ಕವನು ದೊಡ್ಡವನು ಈ ಬುದ್ಧಿಯನ್ನಿಟ್ಟುಕೊಳ್ಳದೆ ಪ್ರಾಣಿ ಮಾತ್ರಕ್ಕೆ ಸೇವೆ ಮಾಡುವ ಭಾವನೆ ಇಟ್ಟು-ಕೊಳ್ಳಬೇಕು. ತೀರ್ಥಂಕರರಾಗಿ ಹುಟ್ಟಬೇಕಾದರೆ ನಿಷ್ಕಾಮ ಭಾವನೆಯಿಂದ ಸೇವಾ ತತ್ಪರರಾಗಬೇಕು. ಮನುಷ್ಯ ಮನುಷ್ಯರಿಗೆ ದುಃಖವನ್ನು ದೂರ ಮಾಡಲಿಕ್ಕೆ ನಾವು ಪ್ರಯತ್ನ ಪಡಬೇಕು.

ಧರ್ಮವು ಅನಂತ ಧರ್ಮಾತ್ಮಕವಾದುದು. ಅದು ಏಕಾಂತವಲ್ಲ. ನಾವು ನಮ್ಮ ಮನಸ್ಸಿನಲ್ಲಿ ಉದಾರ ವಿಚಾರಗಳನ್ನು ಇಟ್ಟುಕೊಂಡು ಬಾಳಬೇಕು. ಕರ್ತವ್ಯ ಕರ್ಮವೂ ಧರ್ಮವೇ. ದಯೆಯು ಧರ್ಮದ ಮೂಲವೂ ಅಹುದು, ಸಮಸ್ತ ಪ್ರಾಣಿಗಳಿಗೂ ಸುಖವನ್ನುಂಟು ಮಾಡುವುದು, ಇವನು ಕಪ್ಪು, ಇವನು ಬಡವ, ಇವನು ಗುಡಿಸಲಲ್ಲಿ ಇರುವವನು ಇಂಥ ಭೇದವು ಧರ್ಮದಲ್ಲಿ ಇಲ್ಲ. ಮರ ಹೇಗೆ ನೆರಳು ಕೊಡುವುದೋ ಧರ್ಮವೂ ಸುಖವನ್ನು ಕೊಡುವುದು.

ದಾರಿಯಲ್ಲಿ ಒಂದು ಗಾಡಿ ಹೋಗುತ್ತಿರುವಾಗ ಚಕ್ರಕ್ಕೆ ಒಂದು ಕಲ್ಲು ಕೊಟ್ಟು ಕ್ಷಣ ಕಾಲ ಅಲ್ಲಿ ನಿಂತು ಗಾಡಿ ಹೊರಟಾಗ ಆ ಗುಂಡನ್ನು ಮರದ ಬುಡದ ಬಳಿ ಇಟ್ಟು ಹೋದನು. ದಾರಿಹೋಕನೊಬ್ಬ ಆ ಕಲ್ಲನ್ನು ಕಂಡು ಅದಕ್ಕ ಚಂದ್ರ ಬಳಿದು ಅದನ್ನೇ ಬ್ರಹ್ಮದೇವರೆಂದು ಪೂಜಿಸಿದನು. ಅಂದಿನಿಂದ ಅದರ ಮಹಿಮೆ ಬೆಳೆಯಿತು. ಕೆಲವು ದಿವಸದ ನಂತರ ಒಬ್ಬ ಈ ಮರವನ್ನು ಕಡಿದರೆ ಮರಮುಟ್ಟು ಆಗುವುದೆಂದು ಯೋಚಿಸಿ ಮರವನ್ನು ಕತ್ತರಿಸಲು ಕೊಡಲಿ ಸಮೇತ ಆಳುಗಳನ್ನು ಕರೆತಂದನು. ಚಂದ್ರ ಬಳಿದ ಕಲ್ಲನ್ನು ನೋಡಿ 'ಇದು ದೇವರ ಮರ, ಇದನ್ನು ಕಡಿದರೆ ನನ್ನ ಮನೆ ಹಾಳಾದೀತು, ನನಗಿರುವವನು ಒಬ್ಬನೇ ಮಗ' ಎಂದು ಹೆದರಿ ಬಿಟ್ಟು ಹೋದನು. ದೇವರ ಮಹಿಮೆ ಬೆಳೆಯಿತು.

ದೇವರಿಗೂ ಮರಕ್ಕೂ ಜಗಳ ಪ್ರಾರಂಭವಾಯಿತು. ದೇವರಾಗಿದ್ದ ಕಲ್ಲು ಮಾತನಾಡಲಿಕ್ಕೆ ಶುರುವಾಯಿತು. 'ನೋಡು, ನಾನಿದ್ದ ಎಂದು ನಿನ್ನ ರಕ್ಷಣೆ ಆಯಿತು. ಇಲ್ಲದಿದ್ದರೆ ನಿನ್ನನ್ನು ಕತ್ತರಿಸಿ ತೆಗೆದುಕೊಂಡು ಹೋಗುತ್ತಿದ್ದರು' ಎಂದಿತು ಆ ಕಲ್ಲು. 'ನೋಡು, ನಾನು ಜನರಿಗೆಲ್ಲ ನೆರಳು ಕೊಡುತ್ತೇನೆ. ನೆರಳಿನಲ್ಲಿ ಕೂಡಲು ಎಷ್ಟೋ ಜನ ಬರುತ್ತಿದ್ದರು. ಯಾರೋ ಒಬ್ಬ ಈ ಕಲ್ಲು ತಂದು ಒಗೆದ. ನನ್ನ ನೆರಳಿಲ್ಲದಿದ್ದರೆ ಯಾರೂ ಇಲ್ಲಿಗೆ ಬರುತ್ತಿರಲಿಲ್ಲ, ನಿನಗೆ ಪೂಜೆಯೂ ಆಗುತ್ತಿರಲಿಲ್ಲ' ಎಂದು ಮರ ತಾನೇ ದೊಡ್ಡವನು ಎಂದು ವಾದಿಸಿತು.

ಒಮ್ಮೆ ಆ ದಾರಿಯಲ್ಲಿ ಆ ಮರದ ಬಳಿ ಒಂದು ಕಾರು ಕೆಟ್ಟಿತು. ಮರದ ಬುಡದಲ್ಲಿದ್ದ ಕಲ್ಲನ್ನು ತೆಗೆದು ಡ್ರೈವರ್ ಕಾರಿನ ಚಕ್ರಕ್ಕೆ ಕೊಟ್ಟ. ಕಲ್ಲು ಸ್ಥಳಾಂತರವಾಯಿತು. ಆ ಮೇಲೆ ದೇವರಿಲ್ಲದ ಮರವನ್ನು ಯಾರೋ ಕತ್ತರಿಸಿ ಹಾಕಿದರು. ದಾರಿಯಲ್ಲಿ ಹೋಗುವವರು ಈ ಕಲ್ಲಿಗೆ ಎಡವಿಕೊಳ್ಳುತ್ತಿದ್ದರು. ಮರ ಮತ್ತು ದೇವರು ಒಗ್ಗಟ್ಟಿನಲ್ಲಿದ್ದಾಗ ಇಬ್ಬರಿಗೂ ರಕ್ಷಣೆಯಿತ್ತು. ಅವರಿಬ್ಬರೂ ಬೇರೆಯಾದ ಕೂಡಲೇ ಇಬ್ಬರ ನಾಶಕ್ಕೂ ಕಾರಣವಾಯಿತು, ಅಪಮಾನಕ್ಕೆ ಕಾರಣವಾಯಿತು. ಇದೇ ತರ ಸಮಾಜ ಆಗಲಿ, ಧರ್ಮ ಆಗಲಿ, ಮನೆತನವಾಗಲಿ ಎಷ್ಟರ ವರೆಗೆ ಸಂಘಟನೆ ಇರುವುದೋ ಅಷ್ಟರ ವರೆಗೆ ಅವರು ಸುಖ-ಶಾಂತಿಯಿಂದ ಬಾಳಬಹುದೇ ಹೊರತು ಅಂತಃಕಲಹದಿಂದ ಸರ್ವನಾಶವಾಗುವುದು.

ಅನೇಕಾಂತ ಧರ್ಮವು ನಮಗೆ ಸಂಘಟನೆಯನ್ನು ಕಲಿಸುವುದು. ಕಲಿಯುಗ ದಲ್ಲಿ ಸಂಘವೇ ಶಕ್ತಿ. ಆ ಸಂಘಟನೆ, ಆ ಶಕ್ತಿ ಏನಿದೆ? ಲೋಕಕಲ್ಯಾಣಕ್ಕಾಗಿ ಮಾತ್ರ; ದುರುಪಯೋಗಕ್ಕಾಗಿ ಅಲ್ಲ. ಧರ್ಮವು ಎಲ್ಲರಿಗೂ ಸುಖವುಂಟುಮಾಡು ವುದು, ಎಲ್ಲರಿಗೂ ಹಿತವುಂಟುಮಾಡುವುದು. ಅಹಿತ ಮಾಡುವುದು ಅಧರ್ಮ, ಧರ್ಮವಲ್ಲ. ಧರ್ಮಾತ್ಮ ಯಾರಿಗೂ ಅಹಿತ ಮಾಡಲಾರ. ಧರ್ಮದ ದರ್ಬಾರನಲ್ಲಿ ಯಾವುದೂ ಭೇದವಿಲ್ಲ. ಎಲ್ಲರಿಗೂ ಮೋಕ್ಷವನ್ನು ಕೊಡುವಂತಹುದು ಧರ್ಮ. ಅಂಥ ಧರ್ಮಕ್ಕೆ ನಮಸ್ಕಾರ ಮಾಡುವೆನು ಎಂದು ಪೂಜ್ಯಪಾದರು ಹೇಳಿರುವರು, ಅದಕ್ಕೆ ವೀತರಾಗ ಧರ್ಮ ಎನ್ನುತ್ತಾರೆ. ಸಾರ್ವಭೌಮ ಧರ್ಮವನ್ನುತ್ತಾರೆ. ಅದೇ ಧರ್ಮ ವಿಶಾಲ ಪ್ರಪಂಚದಲ್ಲಿ ಪ್ರಾಣಿ ಮಾತ್ರಕ್ಕೆ ಕಲ್ಯಾಣಕಾರಕವಾದುದು. ಅದೇ ಧರ್ಮ ತೀರ್ಥಂಕರರು ಕೊಟ್ಟದ್ದು. ತೀರ್ಥಂಕರರು ಯಾವ ಧರ್ಮವನ್ನು ಉಪ- ದೇಶ ಕೊಟ್ಟರಪ್ಪ ಅಂದರೆ ಜಗತ್ತಿನ ಕಲ್ಯಾಣವಾಗುವಂಥ ಧರ್ಮದ ಉಪದೇಶ ಕೊಟ್ಟರೇ ಹೊರತಾಗಿ ಲೋಕಕ್ಕೆ ಅಹಿತವಾದುದನ್ನು ಕೊಡಲಿಲ್ಲ. ಅದಕ್ಕೋಸ್ಕರ ನಾವು ಮಾಡುವ ಪೂಜೆಯೂ ಸರ್ವರ ಹಿತಕ್ಕಾಗಿ ಎಂಬ ಭಾವನೆಯನ್ನು ಇಟ್ಟು- ಕೊಳ್ಳಬೇಕು. ಇದರಿಂದ ಆತ್ಮಕಲ್ಯಾಣವೂ ಆಗುವುದು, ಲೋಕಕಲ್ಯಾಣವೂ ಆಗು ವುದು. ಲೋಕ ಹಾಳಾಗಲಿ ನನಗೊಬ್ಬನಿಗೆ ಸುಖವಾಗಲಿ ಎಂದು ಯಾರು ಪೂಜೆ ಮಾಡುತ್ತಾರೆ ಅವರಂತೂ ಸಮಾಪ್ತರಾಗುವರು. ಮತ್ತೊಬ್ಬರು ಸಮಾಪ್ತ ಆಗಲಿ ಬಿಡಲಿ, ವೀತರಾಗ ಭಗವಾನನ ಪೂಜೆ ಮಾಡುತ್ತ ನಮ್ಮ ಪರಿಣಾಮವೂ ವೀತರಾಗ ವಾಗಬೇಕು. ಈ ಭಾವನೆಯಿಂದ ಭಕ್ತಿ ಮಾಡುವವರೇ ಮುಕ್ತರಾಗುವರು.

## 2. ಸ್ವರ್ಗ – ನರಕ ಎರಡೂ ನಮ್ಮ ಕೈಯಲ್ಲೇ.

ನಮ್ಮ ಭಾರತೀಯ ಸಮಾಜ ಶಾಸ್ತ್ರದಲ್ಲಿ ಪ್ರತಿಯೊಬ್ಬ ಮನುಷ್ಯನೂ ಪ್ರಾತಃ ಕಾಲ ಎದ್ದು ಆತ್ಮಾನುಷ್ಠಾನ ಮಾಡಬೇಕು ಎಂದು ಹೇಳಿದೆ. ಎಲ್ಲ ಮಹಾನ್ ಮನುಷ್ಯರೂ ತಂತಮ್ಮ ಗ್ರಂಥದಲ್ಲಿ ಈ ಮಾತನ್ನು ಬರೆದಿರುವರು. ಪ್ರಾತಃಕಾಲದಲ್ಲಿ ದೊಡ್ಡ ದೊಡ್ಡ ಮುನಿ, ಋಷಿಗಳೂ ಅನುಷ್ಠಾನ ಮಾಡುತ್ತಿದ್ದರು. ಈ ಅನುಷ್ಠಾನ ದಿಂದ ಆತ್ಮನಲ್ಲಿ ಶಕ್ತಿ ಬೆಳೆಯುತ್ತದೆ. ಕರ್ನಲ್ ಕಾಸ್ಲೀವಾಲರು ಒಬ್ಬ ಡಾಕ್ಟರ್. ಹಿಂದೆ ಅವರು ಅಜಾದ್ ಹಿಂದು ಫೌಜ್ ಮಿಲಿಟರಿಯಲ್ಲಿದ್ದರು. ಶ್ರವಣಬೆಳಗುಳಕ್ಕೆ ಇಷ್ಟರಲ್ಲೇ ಬರುವರು. ಇವರು ಪ್ರತಿನಿತ್ಯ ಸುಭಾಷ್‌ಚಂದ್ರರ ದೇಹವನ್ನು ನೋಡು ತ್ತಿದ್ದರು. ಅನಂತರ ಸುಭಾಷ್‌ಚಂದ್ರರು ಡ್ರೆಸ್ ಹಾಕಿಕೊಂಡು ತಮ್ಮ ಡ್ಯೂಟಿಗೆ ಹೋಗುತ್ತಿದ್ದರು. ಒಂದು ದಿನ ಕಾಸ್ಲೀವಾಲರು ಮುಂಚಿತವಾಗಿ ಬಂದರು. ಸುಭಾಷ್‌ಚಂದ್ರರು ಕಣ್ಣು ಮುಚ್ಚಿ ಕುಳಿತಿದ್ದರು. 'ಇದೇನು ಮಹಾರಾಯ, ಇವನು ನಿದ್ದೆ ಮಾಡುತ್ತಿದ್ದಾನೋ, ಏನು ಮಾಡುತ್ತಿದ್ದಾನೋ ಎಂಬ ಸಂಶಯ ಆಯಿತು. ರಾತ್ರಿ ನಿದ್ದೆ ಚೆನ್ನಾಗಿ ಆಗಲಿಲ್ಲವೇನೋ, ನಿದ್ದೆ ಮಾಡ್ತಿದ್ದಾನೆ' ಎಂದುಕೊಂಡರು. ಸುಭಾಷರು ಜಪಕ್ಕೆ ಕುಳಿತಿದ್ದರು. ಅವರು ಕಣ್ಣು ಬಿಟ್ಟ ಮೇಲೆ 'ಏನು ಮಾಡುತ್ತಿ ದ್ದಿರಿ?' ಕಣ್ಣು ಮುಚ್ಚಿಕೊಂಡು ಏನು ಮಾಡುತ್ತಿದ್ದೀರಿ?' 'ನಾನು ಆ ಪರಮಾತ್ಮನ ಧ್ಯಾನ ಮಾಡುತ್ತಿದ್ದೆ'. 'ಏಕೆ ಮಾಡುತ್ತಿದ್ದಿರಿ?' 'ನೋಡಿ ಅವನ ಧ್ಯಾನ ಮಾಡು ವುದರಿಂದ ಬ್ಯಾಟ್ರಿ ಚಾರ್ಜ್ ಆದ ಹಾಗೆ ಆತ್ಮನಲ್ಲಿ ಚಾರ್ಜ್ ಆಗುತ್ತದೆ. ಒಂದು ಶಕ್ತಿ ಬರುತ್ತದೆ. ಅದಕ್ಕೆ ನಾನು ಮಾಡುತ್ತಿದ್ದೆ.' ಸುಭಾಷ್‌ಚಂದ್ರರು ಈ ರೀತಿ ಹೇಳಿದರು.

ಜನರೇಟರ್‌ನಿಂದ ಹೇಗೆ ವಿದ್ಯುತ್ ಬರುವುದೋ ಹಾಗೆ ಪರಮಾತ್ಮನ ಧ್ಯಾನ ದಿಂದ ಒಂದು ಶಕ್ತಿ ಬರುವುದು; ಒಂದು ಸಾಹಸ ಬೆಳೆಯುತ್ತದೆ. ಒಂದು ಧೈರ್ಯ ಬರುತ್ತದೆ. ಅದಕ್ಕೆ ಆ ಅನುಷ್ಠಾನ ಏನಿದೆ ಅದು ಭಾರಿ ಮಹತ್ತ್ವದ್ದು. ಮನೋ ಬಲ ಇಲ್ಲದಂಥ ಮನುಷ್ಯ ದಿನವೂ ಪ್ರಾತಃಕಾಲ ಎದ್ದು ಆತ್ಮಾನುಷ್ಠಾನ ಮಾಡಲಿ, ಆ ಭಗವಂತನ ಭಜನೆ ಮಾಡಲಿ, ನೋಡಿ ಅವನಲ್ಲಿ ಎಷ್ಟು ಧೈರ್ಯ ಬರುತ್ತದೆ; ಶಕ್ತಿ ಬರುತ್ತದೆ. ನಿರ್ಭಯ ಆಗುತ್ತಾನೆ. ಇಹ ಲೋಕ ಭಯ, ಪರಲೋಕ ಭಯ, ಆಪತ್ತಿ ಭಯ, ವೇದನಾ ಭಯ ಮುಂತಾದ ಎಲ್ಲಾ ವಿಕಲ್ಪಗಳೂ ಹೊರಟು ಹೋಗು ತ್ತವೆ. ಭಾರಿ ಶಕ್ತಿ ಬರುತ್ತದೆ. ಮಾತ್ರ ಪ್ರಾತಃಕಾಲ ಎದ್ದ ಕೂಡಲೇ, ನಿದ್ರೆ ಚೆನ್ನಾಗಿ ಆದ ಕೂಡಲೇ ಸ್ವಲ್ಪ ಕುಳಿತುಕೊಳ್ಳಿ, ಅದಕ್ಕೇನು ಬಂಧನವಿಲ್ಲ. ಆಚಾ- ರ್ಯರು ಏನೂ ಬಂಧನ ಹಾಕಲಿಲ್ಲ, ನೀವು ಒಂದು ಘಂಟೆ ಕೂರಿ ಅಂತ. ಅವರು ಒಟ್ಟಾರೆ ನಿಮ್ಮ ಬಟ್ಟೆಗೆ ಗಂಟು ಹಾಕಿ ಕೂತುಕೊಂಡು ಬಿಡಿ, ಪುನಃ ಬಿಚ್ಚುವ ವರೆಗೆ ಮನಸ್ಸಿನಲ್ಲಿ ವಿಕಲ್ಪ ಆದ ಕೂಡಲೆ ಬಿಚ್ಚಿಬಿಡಿ ಮುಗಿಯಿತು. ಇದರಿಂದ ಅಸಂಖ್ಯಾತ ಕರ್ಮ ನಾಶವಾಗುತ್ತದೆ. ಅಷ್ಟೇ ಆತ್ಮಾನುಷ್ಠಾನದಿಂದ ಶ್ರೇಯಸ್ಸಾಗುವುದು. ಅಷ್ಟೇ ಸಮಯದಲ್ಲಿ ಬಟ್ಟೆಗೆ ಒಂದು ಗಂಟು ಹಾಕಿ ಸ್ವಾಧ್ಯಾಯ ಮಾಡಿ. ಎಷ್ಟರ ವರೆಗೆ ಸ್ವಾಧ್ಯಾಯದಲ್ಲಿ ಮನಸ್ಸು ಹತ್ತಿದೆಯೋ ಓದಿ. ಮನಸ್ಸು ಚಲಿತ ಆಯಿತೋ

ಅನಂತರ ಗಂಟು ಬಿಚ್ಚಿ ಬಿಡಿ. ಸ್ವಾಧ್ಯಾಯ ಪುಸ್ತಕ ಮುಚ್ಚಿ ಹೊರಟು ಹೋಗಿ ಬಿಡಿ. ಸ್ವಾಧ್ಯಾಯದಿಂದ, ಜ್ಞಾನಾಗ್ನಿಯಿಂದ, ಅಸಂಖ್ಯಾತ ಕರ್ಮಗಳು ನಿರ್ಜರೆ ಯಾಗುತ್ತವೆ.

ಎಷ್ಟು ಆತ್ಮ ಶಕ್ತಿಯಿದೆ. 'ಬಟ್ಟೆಗೆ ಗಂಟು ಕಟ್ಟಿ ಸ್ವಾಧ್ಯಾಯ ಮಾಡಿ'. 'ಸ್ವಾಮಿ ಏನು ಮಾಡುವುದು ಆಕಳು ಹಾಲು ಕೊಡುವ ಹಾಗಿಲ್ಲ, ಬೆಳಿಗ್ಗೆ ಬೇಗ ಎದ್ದು ಎಮ್ಮೆ ಸಗಣಿ ತೆಗೆಯಬೇಕಾಗುವುದು'. ಬೆಳಿಗ್ಗೆ ಹಾಸಿಗೆಯಿಂದ ಎದ್ದ ಕೂಡಲೆ ಕಸಬರಿಕೆ ಎಲ್ಲಿದೆ ಎಂಬ ಯೋಚನೆ. ಕಸಬರಿಕೆ ಜಪ ! ಶಾಂತಿಸಾಗರ ಮಹಾರಾಜರು ಹೇಳು ತ್ತಿದ್ದರು 'ಆ ಕಸಬರಿಕೆ ಜಪ ನೀವು ಬೆಳಿಗ್ಗೆ ಸಾಯಂಕಾಲ ಯಾವಾಗಲೂ ಮಾಡು ತ್ತೀರಿ. ಸ್ವಲ್ಪ ಸಿಂಚಿ ಜಪ ಮಾಡಿ, 'ಎಲ್ಲಿದೆ ಕಸಬರಿಕೆ, ಯಾವ ಮೂಲೆಯಲ್ಲಿ ಟ್ಟಿದ್ದೀ'. ದೇವರ ಹೆಸರು ತಗೋ ಅಂದರೆ ಇಲ್ಲ. ಎದುರಿಗೇ ದೇವಸ್ಥಾನ ಇದ್ದರೂ ಕೂಡ ಕೈಮುಗಿಯಲಿಕ್ಕೆ ಪುರುಸೊತ್ತಿಲ್ಲ. ಎಷ್ಟು ಪಾಪದ ಉದಯವಿದೆ. ಅದಕ್ಕೆ ನಮ್ಮ ದೌಲತ್‌ರಾಮ್ ಹಿಂದಿ ಕವಿ 'ಎಷ್ಟರ ವರೆಗೆ ತೀವ್ರ ಪಾಪ ಕರ್ಮದ ಉದಯ ವಿದೆ, ಅಷ್ಟರ ವರೆಗೆ ಎದುರಿಗೆ ದೇವಸ್ಥಾನವಿದ್ದರೂ ಶುದ್ಧ ಕೈ ಮುಗಿಯುವ ಹಾಗಿಲ್ಲ. ಶಾಸ್ತ್ರ ಅಲ್ಲೇ ಇದ್ದರೂ ಕೂಡ ಅದನ್ನು ತೆಗೆದು ನೋಡುವ ಹಾಗಿಲ್ಲ. ಏಕೆಂದರೆ ಪಾಪ ಕರ್ಮ ತೀವ್ರ ಉದಯವಿದೆ. ಮನುಷ್ಯ ಪರ್ಯಾಯದಲ್ಲಿ, ನರಕ ಪರ್ಯಾಯ ದಲ್ಲಿ ತಿರ್ಯಕ್ ಪರ್ಯಾಯದಲ್ಲಿ, ಸ್ವರ್ಗ ಪರ್ಯಾಯದಲ್ಲಿ, ಈ ನಾಲ್ಕೂ ಪರ್ಯಾ-ಯದಲ್ಲಿ ಅನಾದಿಕಾಲದಿಂದ ಹುಟ್ಟಿ ಹುಟ್ಟಿ ಎಲ್ಲೆಲ್ಲೋ ತಿರುಗಿ ಬಂದ. ಐದು ನಿಮಿಷ ಕುಳಿತುಕೊಂಡು, ಜಪ ಮಾಡಪ್ಪ, ದೇವರ ಧ್ಯಾನ ಮಾಡಪ್ಪ ಅಂದರೆ ನನಗೆ ಪುರು ಸೊತ್ತಿಲ್ಲ ಎನ್ನುವನು. ಯಾವಾಗ ಕಾಲಲಬ್ಧಿ ಬರುತ್ತದೆ ಆಗ ಅವನು ಹತ್ತಿರದಲ್ಲಿ ದೇವಸ್ಥಾನ ಇಲ್ಲದಿದ್ದರೂ ದೂರ ಹೋಗಿ ಜಪ ತಪ ಮಾಡಿಕೊಂಡು ಭಕ್ತಿ ಮಾಡು ವನು. ನೋಡಿ ಎಲ್ಲೆಲ್ಲಿಂದಲೋ ಬರುತ್ತಿದ್ದಾರೆ. ಹತ್ತು ಹದಿನೈದು ದಿವಸ ಇಲ್ಲಿ ಏಕೆ ಇರುತ್ತಾರೆ?

ಶುಭಕರ್ಮದ ಉದಯ ಇದೆ ಎಂದು ನಮ್ಮ ಬ್ರಹ್ಮಪ್ಪನವರು ಇಲ್ಲಿ ಶಾಸ್ತ್ರ (ಪಂಪನ ಆದಿಪುರಾಣ) ಓದುತ್ತಿದ್ದಾರೆ. ಶುಭಕರ್ಮ ಮುಗಿಯಿತು ಅಂದರೆ ಇಲ್ಲಿಂದ ಬಿಟ್ಟು ಓಡುವರು ! ಶುಭಕರ್ಮ ಉದಯವಾಗಿರುವುದರಿಂದ ನಮ್ಮ ಎ. ಆರ್. ನಾಗ-ರಾಜರು ಇಲ್ಲಿ ಬಂದು ಪ್ರತಿ ಭಾನುವಾರ ಶಾಸ್ತ್ರ ಓದುತ್ತಿದ್ದಾರೆ. (ಪಂಪನ ಆದಿ ಪುರಾಣದ ವ್ಯಾಖ್ಯಾನ;) ಬೆಂಗಳೂರಿಂದ ಬಸ್ಸಿನಲ್ಲಿ ಕುಳಿತು ಇಲ್ಲಿಗೆ ಬರುವುದು. ಬೆಳಿಗ್ಗೆ ಎದ್ದು ಇವರು ಮತ್ತೆ ಬೆಂಗಳೂರಿಗೆ ಹೋಗುವುದು; ಎಷ್ಟು ಕಷ್ಟ ಪಡು ತ್ತಿದ್ದಾರೆ. ನಾವು ಪೂರ್ವ ಜನ್ಮದಲ್ಲಿ ಆತ್ಮಕ್ಕೆ ಏನಾದರೂ ಸಂಸ್ಕಾರ ಮಾಡಿಕೊಂಡು ಬಂದಿದ್ದರೆ ಅದು ಈ ಸಮಯದಲ್ಲಿ ನಮಗೆ ಬುತ್ತಿ ಕಟ್ಟಿಕೊಂಡು ಬಂದ ಹಾಗೆ ಕೆಲಸ ಕೊಡುತ್ತದೆ. ಒಂದೂರಿಂದ ಮತ್ತೊಂದು ಊರಿಗೆ ಹೋಗುವಾಗ ಏನಾದರೂ ಸಿಹಿ ತಿಂಡಿ ಕಟ್ಟಿಕೊಂಡು ಬರುತ್ತಾರಲ್ಲ, ಅದನ್ನು ತಮ್ಮ ಬಳಿ ಇಟ್ಟುಕೊಂಡು ದಾರಿ ನಡೆದು ನಡೆದು ಸೋತಾಗ ಒಂದು ಮರದಡಿ ಕುಳಿತು ತಿನ್ನುತ್ತಾರೆ. ಹಾಗೇನೆ ಈ ಜನ್ಮದಲ್ಲಿ ಮಾಡಿದಂಥ ದೇವರ ಭಕ್ತಿ, ದೇವರ ಪಾಠ, ಮತ್ತು ಸ್ವಾಧ್ಯಾಯ

ಇವು ಮುಂದಿನ ಜನ್ಮದಲ್ಲೂ ಲಾಭದಾಯಕ, ಇದೇ ಜನ್ಮದಲ್ಲೇ ಅಲ್ಲ. ಸ್ವರ್ಗ ನರಕ ಎಲ್ಲಿದೆ? ಅವು ನಮ್ಮ ಕೈಯಲ್ಲಿವೆ. ಒಳ್ಳೆ ಜೀವನ ಮಾಡಿದರೆ ನಾವು ಸ್ವರ್ಗವಂತರಾಗುತ್ತೇವೆ; ಕೆಟ್ಟ ಜೀವನ ಮಾಡಿದರೆ ನರಕವಂತರಾಗುವೆವು.

ಬೆಳಗಿನಿಂದ ಸಾಯಂಕಾಲದ ತನಕ ಗುಡಿಸುತ್ತೀರಿ, ಜಳಕ ಮಾಡುತ್ತೀರಿ, ಅಡಿಗೆ ಮಾಡುತ್ತೀರಿ ಎಷ್ಟು ಜೀವ ಹಿಂಸೆಯಾಗುವುದು. ಅದೆಲ್ಲ ದೋಷನಿವಾರಣೆ ಆಗಬೇಕು. ನೋಡಿ ಎಷ್ಟೋ ಜನರಿಗೆ ಕೈಯಿಲ್ಲ, ಕಾಲಿಲ್ಲ, ಕುರುಡರು. ಇದೆಲ್ಲ ಏಕೆ? ಪೂರ್ವ ಜನ್ಮದಲ್ಲಿ ಮಾಡಿದ ಪಾಪದ ಫಲ, ಬಾಯಿಲ್ಲ, ಮಾತನಾಡುವುದಕ್ಕೆ ಬರೋಹಾಗಿಲ್ಲ, ಕಿವಿ ಇಲ್ಲ ನಾನಾ ತರದ ಸಂಕಟವೇಕಿದೆ? ಹಿಂದಿನ ಜನ್ಮದಲ್ಲಿ ಮಾಡಿದ್ದನ್ನು ಈ ಜನ್ಮದಲ್ಲಿ ಭೋಗಿಸಬೇಕಾಗುತ್ತದೆ. ಮುಂದಿನ ಜನ್ಮದಲ್ಲಿ ಇದೆಲ್ಲ ಭೋಗಿಸಬಾರದು ಎಂಬ ಭಾವನೆ ಇರುವವರು ಇದ್ದಾರೆ. ಈ ಜನ್ಮದಲ್ಲಿ ನೀವು ಮನುಷ್ಯ ಪರ್ಯಾಯ ಪಡೆದಿರುವಿರಿ, ಒಳ್ಳೇ ಕ್ಷೇತ್ರದಲ್ಲಿ ಹುಟ್ಟಿದ್ದೀರಿ, ಒಳ್ಳೆಯದು ನಿಮಗೆ ಎಲ್ಲ ಅನುಕೂಲತೆಯಿದೆ. ಪರ ದೇಶದಲ್ಲಿ ನೋಡಿ, ಯಾವಾಗಲೂ ಯುದ್ಧಗಳು, ಜಗಳಗಳು ನಡೆಯುತ್ತವೆ. ಒಂದು ಚೂರು ಕೂಡ ದೇವರ ಧ್ಯಾನ ಮಾಡಲಿಕ್ಕೆ ಅವರಿಗೆ ಪುರುಸೊತ್ತೇ ಇಲ್ಲ.

ಇಲ್ಲಿ ಎಲ್ಲ ತರದ್ದು ಅನುಕೂಲತೆಯಿದೆ. ಎಲ್ಲರೂ ಕುಳಿತುಕೊಂಡು ಆತ್ಮಾನುಷ್ಠಾನ, ಧರ್ಮಾನುಷ್ಠಾನ ಮಾಡಬೇಕು. ಎಲ್ಲೆಲ್ಲೂ ಕಷ್ಟಪಟ್ಟು ಇಲ್ಲಿಗೆ ಬಂದು ಧರ್ಮಾನುಷ್ಠಾನ ಮಾಡುತ್ತಾರೆ, ಪಾಠ ಮಾಡುತ್ತಾರೆ. ನೀವೆಲ್ಲರೂ ಕುಳಿತುಕೊಂಡು ಬೆಳಗ್ಗೆ ಒಂದು ಸಂಕಲ್ಪ ಮಾಡಿ. ಯಾರ ಉದ್ದೇಶ ಪವಿತ್ರ ಇಲ್ಲ, ಅವರಿಂದೇನೂ ಸಾಧ್ಯವಿಲ್ಲ. ಮೊದಲು ಧ್ಯೇಯ ಒಂದು ಇರಬೇಕು. ನಾನು ಇದನ್ನು ಮಾಡೇ ತೀರುವೆನು ಎಂದು ಬೆಳಗ್ಗೆ ಎದ್ದ ಕೂಡಲೇ ದೇವರ ದರ್ಶನ ಮಾಡಿಕೊಂಡು. ಪೂಜೆ ಮಾಡಿಕೊಂಡೇ ಬಾಯಿಗೆ ನೀರು ಹಾಕುವುದು ಎಂದು ಪ್ರತಿಜ್ಞೆ ಮಾಡಿ. ನೋಡಿ ನೀವು ಚಮತ್ಕಾರ! ಪ್ರತಿಜ್ಞೆ ಇಲ್ಲ. ಮನಸ್ಸಿನಲ್ಲಿ ಸಂಕಲ್ಪ ಇಲ್ಲ ಏನೂ ಸಾಧ್ಯವಿಲ್ಲ. 'ಸಂಕಲ್ಪಂ ಕಲ್ಪವೃಕ್ಷಸ್ಯ' ಸಂಕಲ್ಪ ಮಾಡಿದರೆ ಕಲ್ಪವೃಕ್ಷ ಕೊಡುತ್ತದೆ.

ಕೇವಲ ಧರ್ಮ ಸ್ಮರಣೆ ಮಾಡಿದರೆ ಸಾಕು, ದೇವರ ಸ್ಮರಣೆ ಮಾಡಿದರೆ ಸಾಕು. ಅದಕ್ಕೋಸ್ಕರ ನೀವು ಬೆಳಗಿನ ಜಾವ ಎದ್ದು ಆತ್ಮಾನುಷ್ಠಾನ ಮಾಡಬೇಕು. ಕೈ ಕಾಲು ತೊಳೆದುಕೊಂಡು ಕುಳಿತುಕೊಂಡು ಹದಿನೈದು ನಿಮಿಷ, ಹತ್ತು ನಿಮಿಷ, ಐದು ನಿಮಿಷ ಎಷ್ಟು ಸಮಯ ಮನಸ್ಸು ಹತ್ತುತ್ತದೆ ಅಷ್ಟರ ವರೆಗೆ ಮಾತ್ರ ಜಪ ಮಾಡಿ, ಧ್ಯಾನ ಮಾಡಿ. ಧ್ಯಾನದಿಂದ, ಸ್ವಾಧ್ಯಾಯದಿಂದ ಅಸಂಖ್ಯಾತ ಕರ್ಮ ನಿರ್ಜರೆಯಾಗುವುದು. ಕುಂದಕುಂದಾಚಾರ್ಯರೂ ಹೇಳಿದ್ದಾರೆ ರಯಣಸಾರದಲ್ಲಿ ಅಧ್ಯಯನವೇ ಧ್ಯಾನವೆಂದು. ಅರ್ಥ ತಿಳಿಯದ ಸಮಯದಲ್ಲಿ ಅರ್ಥ ಮಾಡಲು ಏನು ಏಕಾಗ್ರತೆ ಬರುವುದು ಆಗ ಕರ್ಮ ನಿರ್ಜರೆಯಾಗುತ್ತದೆ, ಸಂವರ ಆಗುತ್ತದೆ. ಎಷ್ಟು ಗೂಢಾರ್ಥ ಇದೆ ಇದು ಎಂದು ಆಶ್ಚರ್ಯವಾಗುವುದು, ಬುದ್ಧಿಯ ಫಲವೇನೆಂದರೆ ಆತ್ಮ ಹಿತದಲ್ಲಿ ಪ್ರವರ್ತ ಆಗುವುದು.

ಮಹಾರಾಷ್ಟ್ರದಲ್ಲಿ ಸಂತ ಜ್ಞಾನೇಶ್ವರ ಅಂತ ಇದ್ದ, ನಿವೃತ್ತಿ ಅವನ ತಮ್ಮ, ಸೋಪಾನ ಅವನ ಇನ್ನೊಬ್ಬ ತಮ್ಮ, ಮುಕ್ತಾ ಬಾಯಿ ಅವನ ತಂಗಿ. ಈ ನಾಲ್ಕು ಜನ ಎಷ್ಟೋ

ಒಂದು ಗೋಡೆ ಮೇಲೆ ಕುಳಿತುಕೊಂಡಿದ್ದಾರೆ. ಆ ಪ್ರದೇಶದಲ್ಲಿ ಚಾಂಗ ದೇವ ಎಂಬ ಒಬ್ಬ ದೊಡ್ಡ ಸನ್ಯಾಸಿಯು ಇದ್ದ. ಇವನೇನೇನೋ ಚಮತ್ಕಾರ ಮಾಡಿ ನೋಡಿಸುತ್ತಿದ್ದು, ಜಾದು ಮಾಡಿ ನೋಡಿಸುತ್ತಿದ್ದ, ಎಲ್ಲರೂ ಓ ಎನ್ನುತ್ತಿದ್ದರು. ಅಷ್ಟರವರೆಗೆ ಜ್ಞಾನೇಶ್ವರನೆನಿಸಿದ್ದ ಸಾಧು ಪುರುಷ, ಉಚ್ಚ ಕೋಟಿ ತತ್ತ್ವಜ್ಞಾನ ಹೇಳುತ್ತಿದ್ದ ಅವನು, ಎಂಥ ತತ್ತ್ವಜ್ಞಾನ! ಧರ್ಮ ಹೇಗಿದೆ? ಹಸು ಬಂದರೆ ಗಂಗೆನೀರು ಅಮೃತವಾಗುವ ಹಾಗಿಲ್ಲ, ಸಿಂಹ ಬಂದಾಗ ಅದು ವಿಷ ಆಗುವ ಹಾಗಿಲ್ಲ, ಸಿಂಹ ಬಂದಿತು ಎಂದು ಒಳಗೆ ಹೋಗುವ ಹಾಗಿಲ್ಲ, ಆಕಳು ಬಂದಿದೆ ಎಂದು ಮೇಲೆ ಹೋಗುವ ಹಾಗಿಲ್ಲ. ತನ್ನಷ್ಟಕ್ಕೆ ಶೀತಲ ಜಲ ಹರಿದುಕೊಂಡು ಹೋಗುತ್ತಿರುತ್ತದೆ. ಯಾರೇ ಬರಲಿ ಅವರ ಬಾಯಾರಿಕೆ ದೂರ ಮಾಡುತ್ತದೆ. ಹಸು ಬಂದರೆ ಅದರ ಬಾಯಾರಿಕೆ ದೂರ ಮಾಡುತ್ತದೆ. ಸಿಂಹದಲ್ಲೂ ಆಕಳಿನಲ್ಲೂ ಯಾವ ಭೇದ ಮಾಡದೆ ಗಂಗೆ ಎರಡಕ್ಕೂ ತೃಪ್ತಿ ನೀಡುವುದು. ಹಾಗೆಯೇ ಧರ್ಮಯೇನಿದೆ ಆಚ ರಿಸಿದವನ ಆತ್ಮಕ್ಕೆ ಶಾಂತಿ ಕೊಡುವುದು' ಎಂದು ಜ್ಞಾನೇಶ್ವರ ಹೇಳಿರುವನು. ಬರು ಬರುತ್ತ ಜ್ಞಾನೇಶ್ವರನ ಬಳಿ ಸೇರಲು ಸುರು ಮಾಡಿದರು. ಆ ಮುದುಕ ಸಾಧು ಬಳಿ ಜನ ಕಡಿಮೆಯಾದರು. ಕೊನೆಗೆ ಯಾರೂ ಬರದಂತಾಯಿತು. 'ನಾನು ಮುದುಕ ಮನುಷ್ಯ, ಸಾಧು. ಅವನು ತರುಣ, ಅವನನ್ನು ಏನಾದರೂ ಮಾಡಿ ವಶಮಾಡಿ ಕೊಳ್ಳಬೇಕು. ಹೇಗೆ ವಶ ಮಾಡುವುದು ? ಒಂದು ಪತ್ರ ಬರೆದು ನೋಡುವ, ನಾನು ಆಶೀರ್ವಾದ ಬರೆದರೆ, ಅವನು ನನ್ನ ಶಿಷ್ಯನೇನೂ ಅಲ್ಲ, ನಮಸ್ಕಾರ ಮಾಡಿದರೆ ಗುರು ಆಗುವನು ! ಏನು ಮಾಡಬೇಕು ಎಂದು ಚಾಂಗದೇವ ಯೋಚಿಸಿ ಯೋಚಿಸಿ ಕೊನೆಗೆ ಬಿಳಿ ಕಾಗದ ಕಳಿಸಿ ಬಿಟ್ಟ, ರಗಳೆ ಬೇಡ ಎಂದು. 'ಚಿಟ್ಟಿ ಬಂದಿದೆ' ಚಾಂಗ ದೇವ ಮಹಾರಾಜರದು' 'ಎಲ್ಲಿದೆ ?' 'ಎಲಾ ಏನೂ ಬರದೇ ಇಲ್ಲವಲ್ಲ ! ಹೇಗೆ' ! ಎಂದುಕೊಂಡು 'ನಿವೃತ್ತಿ, ನೋಡಪ್ಪಾ ಚಿಟ್ಟಿ ಬಂದಿದೆ. ನನ್ನ ಕಣ್ಣಿಗೆ ಕಾಣುತ್ತಿಲ್ಲ, ಎಂದು ತಮ್ಮನ ಕೈಗೆ ಕೊಟ್ಟನು. ಅವನಿಗೂ ಅರ್ಥವಾಗಲಿಲ್ಲ. ಕೊನೆಗೆ ಮುಕ್ತಾ ಬಾಯಿ ನೋಡಿದಳು 'ನೋಡಿ ಕಾಗದ ಹೇಗೆ ಸ್ವಚ್ಛವಿದೆ ಹಾಗೇ ಅವನ ಹೃದಯವೂ ಸ್ವಚ್ಛವಿದೆ. ಅವನ ಆತ್ಮನ ಮೇಲೆ ಒಳ್ಳೆ ಸಂಸ್ಕಾರ ಮಾಡಬಹುದು. ಇನ್ನೂ ಅವನ ಆತ್ಮನ ಮೇಲೆ ಒಳ್ಳೆ ಸಂಸ್ಕಾರ ಆಗಿಲ್ಲ' ಎಂದು ಆಕೆ ಹೇಳಿದಳು. ಜ್ಞಾನದೇವನಿಗೆ ಆಶ್ಚರ್ಯವಾಯಿತು. ಮೂರು ಜನ ಅಣ್ಣಂದಿರಿಗೇನೂ ಗೊತ್ತಾಗಲಿಲ್ಲ, ಆದರೆ ತಂಗಿ ಪತ್ರದ ಸಂಕೇತವನ್ನು ತಿಳಿಸಿದಳು !

ಇತ್ತ ಚಾಂಗದೇವ ಕಾಡಿಗೆ ಹೋಗಿ ಒಂದು ಸಿಂಹದ ಮರಿಯನ್ನು ಹಿಡಿದು ಸಾಕಿ ಅದನ್ನು ದೊಡ್ಡದು ಮಾಡಿಬಿಟ್ಟ. ಅದನ್ನು ವಶಮಾಡಿಕೊಂಡು ತಯಾರು ಇಟ್ಟಿದ್ದ. 'ಸಿಂಹಕ್ಕೆ ಮೂಗು ದಾರ ಹಾಕಿ ನಾನು ಅದರ ಮೇಲೆ ಕುಳಿತುಕೊಂಡು ಹೋದರೆ, ಸಿಂಹದ ಮೇಲೆ ಬರುತ್ತಿದ್ದಾನಲ್ಲ ಎಂದು ಜನವೆಲ್ಲ ಭಾರಿ ಒಟ್ಟಾಗುತ್ತಾರೆ' ಎಂದು ನಿರ್ಧರಿಸಿ ಅದಕ್ಕೆ ಮೂಗುದಾರ ಹಾಕಿ ಅದರ ಮೇಲೆ ಹತ್ತಿಕೊಂಡು ಬಂದಾಗ ಹತ್ತಿಪ್ಪತ್ತುಸಾವಿರ ಜನ ಜೈಕಾರ ಹಾಕಿ ಒಟ್ಟಾದರು. 'ಏನಪ್ಪ ಸಿಂಹದ ಮೇಲೆ ಕೂರುವುದು!' ಎಲ್ಲರೂ ಆಶ್ಚರ್ಯ ಪಟ್ಟರು ಅಷ್ಟರ ವರೆಗೆ ಮುಕ್ತಾಬಾಯಿ ಹೇಳಿ ದಳು ಅವನ ಹೃದಯ ಸ್ವಚ್ಛವಿದೆ ಸಂಸ್ಕಾರ ಮಾಡಬಹುದು ಎಂದು. ಆದರೆ ಅವನ

ಹೃದಯ ಸ್ವಚ್ಛವಿಲ್ಲವೆಂದು ಜ್ಞಾನೇಶ್ವರ ಹೇಳಿದನು. ಜ್ಞಾನೇಶ್ವರೂ ಮಾಂತ್ರಿಕ ನಿದ್ದನು. ಆದರೂ ಅದನ್ನು ಪ್ರದರ್ಶನ ಮಾಡುತ್ತಿರಲಿಲ್ಲ. ಕಲ್ಲಿನ ಗೋಡೆ ಇತ್ತಲ್ಲ, ಅದರ ಮೇಲೆ ಜ್ಞಾನೇಶ್ವರ ಕುಳಿತು ಚಾಂಗದೇವರ ಸ್ವಾಗತಕ್ಕೆ ಹೋದನು. ಜನ ಈ ಸಿಂಹವನ್ನು ಬಿಟ್ಟು ಅವನ ಜೊತೆಯಲ್ಲಿ ಬೆನ್ನು ಹತ್ತಿದರು. 'ಅಲ್ಲ ಮಾರಾಯ ಸಿಂಹ ಜೀವಿತವಿದೆ ಹೇಗಾದರೂ ನಡೆಯಬಹುದು. ಇವನು ಕಲ್ಲಿನ ಗೋಡೆ ನಡೆಸಿ ಕೊಂಡು ಬಂದನಲ್ಲ!' ಎಂದು ಎಲ್ಲರೂ ಸೋಜಿಗಗೊಂಡರು ಆಗ ಚಾಂಗದೇವ ಸಿಂಹ ದಿಂದ ಇಳಿದು ಜ್ಞಾನೇಶ್ವರನ ಕಾಲಿಗೆ ಬಿದ್ದನು. 'ಏಕೆ ನಮಸ್ಕಾರ?' ಎಂದುದಕ್ಕೆ 'ಏನು ಮಾರಾಯ ನಾನು ಜೀವಿತವಿರುವ ಸಿಂಹವನ್ನು ನಡೆಸಿದರೆ ನೀನು ಜೀವರಹಿತ ಗೋಡೆಯನ್ನೇ ನಡೆಸಿಕೊಂಡು ಬಂದಿರುವೆ' ಎಂದನು.

'ಏ ಚಾಂಗದೇವ' ಕೃತ್ರಿಮ ನಕಲಿ ಏನು ಚಮತ್ಕಾರವಿದೆ ಇದು ಆತ್ಮ ಕಲ್ಯಾ ಣಕ್ಕೇನೂ ಪ್ರಯೋಜನವಿಲ್ಲ. ಜನರಿಗೆ ಮರುಳು ಮಾಡಲಿಕ್ಕೆ ಆಗಬಹುದು. ಇದ ರಿಂದೇನೂ ಲಾಭವಿಲ್ಲ. ಈ ಹೊಲಸಿನಲ್ಲೇಕೆ ಬಿದ್ದಿದ್ದೀಯ ? ಎಂದನು. ಆಗ ಚಾಂಗ ದೇವ ಕೈ ಜೋಡಿಸಿ ಕೇಳುತ್ತಾನೆ 'ನನಗೇನಾದರೂ ಉಪದೇಶ ಕೊಡಿ'. ಇವರು ಮೂರು ಮಂದಿ ಅಣ್ಣತಮ್ಮಂದಿರು, ಒಬ್ಬಳು ತಂಗಿ. ಅವನು ಉಪದೇಶ ಕೊಟ್ಟು ಬಿಟ್ಟ. ನಿವೃತ್ತಿ ಎರಡನೆ ತಮ್ಮ. 'ಯಾರ ಮಾರ್ಗ ನಿವೃತ್ತಿ ಮಾರ್ಗವಿದೆ, ಸಂಸಾರ ಪ್ರವೃತ್ತಿಯಿಲ್ಲದೆ, ಅದನ್ನು ಉಪೇಕ್ಷ ಮಾಡಿ ಬಿಟ್ಟು, ನಿವೃತ್ತಿ ಮಾರ್ಗ, ಮೋಕ್ಷ ಮಾರ್ಗದಲ್ಲಿದ್ದಾನೆ ಅರ್ಥಾತ್ ನಿವೃತ್ತಿ ಅದೇ ಸೋಪಾನ, ಯಾವನು ಜ್ಞಾನೇಶ್ವರ ನಿದ್ದಾನೆ ಅವನಿಗೆ ಮುಕ್ತಾಬಾಯಿ ಅಂದರೆ ಮೋಕ್ಷಲಕ್ಷ್ಮಿ ಸಿಕ್ಕುತ್ತಾಳೆ'.

ದಿನಾಲು ನೀವು ರತ್ನಾಕರನ ಕೃತಿಗಳನ್ನಾದರೂ ಸ್ವಾಧ್ಯಾಯ ಮಾಡಿ. ದಿನವೂ ಒಂದು ಶ್ಲೋಕ ಕಂಠಸ್ಥ ಮಾಡಿ. ನಾನೇನಾದರೂ ಸಿಟ್ಟಾಗಿ ಅಂದರೆ ನೀವು ಕೂಡಲೇ ನೆನಪು ಇಟ್ಟು ಕೊಳ್ಳುತ್ತೀರಿ. 'ಸ್ವಾಮಿಗಳು ಬಂದು ನಮಗೆ ಕಠೋರ ಶಬ್ದ ಹೇಳಿ ಹೋದರು. ಅದೇ ಸ್ವಾಮಿ, ನಮ್ಮನ್ನು ಶ್ರವಣಬೆಳಗುಳದಲ್ಲಿ ಹೀಗೆ ಅಂದು ಬಂದಿದ್ದಾರೆ'. ಶಾಸ್ತ್ರದ ವಿಷಯ ಹೇಳಿದರೆ ಮಂಟಪದ ಹೊರಗೆ ಹೋದರೆ ಮರೆತು ಹೋಗುವಿರಿ. ಈಗ ಇಲ್ಲಿ ಕುಳಿತವರಿಗೆಲ್ಲ ನಾವು ರಾವಣ ಅಂದರೆ ಮರೆ ಯುವ ಹಾಗಿಲ್ಲ. ನಾವೇನು ರಾವಣ ಮಾಡಿರುವುದು ಎಂದು ಕಣ್ಣು ಕೆಂಪು ಮಾಡುತ್ತಾರೆ. ನೀವೆಲ್ಲ ರಾಮರು ಎಂದರೆ ಮರೆತು ಹೋಗುತ್ತಾರೆ. ರಾವಣ ಅಂದ ಕೂಡಲೆ ಕಣ್ಣು ಕೆಂಪು ಮಾಡಿಕೊಳ್ಳುತ್ತಾರೆ.

ಪ್ರತಿನಿತ್ಯ ಪ್ರಾತಃಕಾಲ ತಾವು ಆತ್ಮಾನುಷ್ಠಾನ, ಜಪ ತಪ, ಪರೋಪಕಾರ ಇವನ್ನು ಮಾಡಬೇಕು. ಪರೋಪಕಾರವು ನಮ್ಮ ನಿತ್ಯ ನೇಮವಾಗಬೇಕು. ಯಾರ ಮೇಲಾದರು ಎಳ್ಳಷ್ಟಾದರು ಉಪಕಾರ ಮಾಡಬೇಕು. ಉಪಕಾರಕ್ಕೆ ದುಡ್ಡೇ ಕೊಡಬೇಕೆಂದು ಅರ್ಥವಲ್ಲ. ಒಳ್ಳೆ ಮಾತು ಹೇಳಿ ಉಪಕಾರ ಮಾಡಬಹುದು. ಹಣ ಕೊಟ್ಟು ಉಪಕಾರ ಮಾಡಬಹುದು. ಯಾವ ಯಾವ ಶಕ್ತಿ ಇದೆ ಆ ಉಪಕಾರ ಮಾಡಬಹುದು. ಆ ಭಾವನೆ ಬರಬೇಕಾದರೆ ಧರ್ಮದಿಂದ ಬರಲು ಶಕ್ಯವಿದೆ. ಅದ ರಿಂದ ಈದಿನ ಹೆಚ್ಚು ಹೇಳುವುದಿಲ್ಲ. ಆದಿತ್ಯವಾರ ರಾತ್ರಿ ಎ ಆರ್.ನಾಗರಾಜುರವರು

ಆದಿಪುರಾಣ ಸುಂದರವಾಗಿ ಹೇಳುವರು. ಪೂರ್ವ ಸುಕೃತದಿಂದ ಸುಂದರವಾದ ಕಂಠ ತೆಗೆದುಕೊಂಡು ಬಂದಿದ್ದಾರೆ. ಒಬ್ಬರು ಯಾರಾದರು ಬಾವಿ ತೆಗೆದರೆ ಸಾವಿರಾರು ಜನ ನೀರು ಕುಡಿಯುತ್ತಾರೆ. ಸಾವಿರಾರು ಜನ ತಾವೆಲ್ಲ ಕುಳಿತುಕೊಂಡು ಕೇಳುತ್ತೀರಿ. ಶ್ರವಣಬೆಳಗುಳದ ಭೂಮಿಗೆ ಪುಣ್ಯದ ಉದಯಕಾಲ ಬಂದಿದೆ. ಧರ್ಮದ್ದು ಎಲ್ಲ ನಡೆಯುತ್ತಿದೆ. ನಾಳೆಯೇ ಸಾಯಂಕಾಲ ೪ ಘಂಟೆಗೆ ಜನಮಂಗಳ ಮಹಾ ಕಲಶ ಶ್ರವಣಬೆಳಗುಳದ ಕಡೆ ಹೊರಡುವುದು. ಬಹಳ ಪರಿಶ್ರಮ ಪಟ್ಟಿದ್ದಾರೆ. ದಿಲ್ಲಿಯಲ್ಲಿ ಅದರದು ಉದ್ಘಾಟನೆ ಪ್ರಧಾನ ಮಂತ್ರಿಯವರ ಕಡೆಯಿಂದ ಆಗುತ್ತದೆ. 110 ನಗರಗಳಲ್ಲಿ ಅದು ಭ್ರಮಣ ಮಾಡಿ ಬರುವುದು. ಸ್ವಾಮಿಗಳು ನೋಡಿ ಎಷ್ಟು ಕಷ್ಟಪಟ್ಟು ವಿಷ್ಣುಕುಮಾರ ಮುನಿಗಳ ಹಾಗೆ ಒಂದು ಕಾಲು ದಿಲ್ಲಿಯಲ್ಲಿ, ಒಂದು ಕಾಲು ಶ್ರವಣಬೆಳಗುಳದಲ್ಲಿ! ವಿಷ್ಣುಕುಮಾರ ಮುನಿ ಒಂದು ಕಾಲು ಸುಮೇರು ಪರ್ವತದ ಮೇಲೆ. ಪಾಪ ಸ್ವಾಮಿಗಳು ಎಷ್ಟು ಕಷ್ಟ ಪಡುತ್ತಿದ್ದಾರೆ. ಎಲ್ಲರೂ ಒಟ್ಟಾಗಿ ಮಹಾಮಸ್ತಕಾಭಿಷೇಕವನ್ನು ಯಶಸ್ವಿಗೊಳಿಸಬೇಕು. ಎಚ್. ಎಸ್. ರಾಜೇಂದ್ರ, ಎಸ್. ಎಂ. ಮಹಾವೀರರಿಗೆ ತತ್ವಾರ್ಥ ಸೂತ್ರ ಕಂಠಸ್ಥ ಮಾಡಬೇಕು ಅಂತ ನಾನು ಹೇಳಿದೆ. ಆದುದರಿಂದ ಅವರು ಬರುವುದನ್ನೇ ಬಂದ್‌ಮಾಡಿ ಬಿಟ್ಟರು.

ಇನ್ನು ನಾನು ಯಾರಿಗೂ ಹೇಳಲಿಕ್ಕೆ ಹೋಗುವ ಹಾಗಿಲ್ಲ. ಎಷ್ಟೋ ಜನ ದಿನಾಲು ಬರುತ್ತಿದ್ದರು. ಒಬ್ಬರು ಮುನಿಗಳು ಪ್ರತಿಯೊಬ್ಬರಿಗೂ ವ್ರತ ಕೊಟ್ಟೇ ತೀರುತ್ತಿದ್ದರು. ನೀನು ಬೀಡಿ ಬಿಡು, ನೀನು ಚುಟ್ಟ ಬಿಡು ಎಂದು ಹೇಳುತ್ತಿದ್ದರು. ಎಲ್ಲರೂ ಏನಾದರೊಂದು ವ್ರತ ತಗೊಂಡು ಹೋಗುತ್ತಿದ್ದರು. ಅದು ಮಾಡುವುದಿಲ್ಲ, ಇದು ಮಾಡುವುದಿಲ್ಲ, ಸತ್ಯ ಮಾತಾಡುತ್ತೇನೆ, ಈ ರೀತಿಯೇನೋ ಒಂದು. ಒಬ್ಬ ತುಂಟ ಮನುಷ್ಯ ಗಂಟು ಬಿದ್ದ. ಇದನ್ನು ಬಿಡು, ಅದನ್ನು ಬಿಡು ಎಂದು ಒಂದು ಗಂಟೆ ಹೇಳಿದರೂ, ‘ಇಲ್ಲವೇ ಇಲ್ಲ’ ಅಂತ ಹೇಳಿದ. ಈ ಹೊತ್ತು ನೀನು ಯಾವುದಾದರೂ ಒಂದು ಬಿಟ್ಟೇ ಹೋಗಬೇಕು, ನೀನು ತ್ಯಾಗ ಮಾಡೇ ಹೋಗಬೇಕು’ ಎಂದು ಸ್ವಾಮಿಗಳು ಹೇಳಿದರು. ‘ಆಗಲಿ ಸ್ವಾಮಿ, ಒಂದು ತ್ಯಾಗ ಮಾಡುತ್ತೇನೆ.’ ‘ಏನು?’ ‘ಈ ಹೊತ್ತಿನಿಂದ ನಿಮ್ಮ ಹತ್ತಿರಕ್ಕೆ ಬರುವುದನ್ನೇ ತ್ಯಾಗ ಮಾಡುತ್ತೇನೆ’ ಎಂದನು. ‘ಹಾಗೇ ಅವರಿಗೆ ನಾನು ಒಂದೇ ದಿವಸ ಹೇಳಿದ್ದು. ನೀವು ಸ್ವಲ್ಪ ಸ್ವಾಧ್ಯಾಯ ಮಾಡಿ ಅಂದಕೂಡಲೆ, ಮತ್ತೆ ಹೋದರೆ ಸ್ವಾಮಿಗಳೇನು ಬಿಡಿಸುತ್ತಾರೋ, ಏನು ಹೇಳುತ್ತಾರೋ ಎಂದು ಬರುವುದನ್ನೇ ಬಿಟ್ಟು ಬಿಟ್ಟರು.

ನೋಡಿ ಈ ಕಥೆ ಶ್ರವಣಬೆಳಗುಳದ್ದು. ಕಥೆ ನೋಡಿದಿರಾ ಇದನ್ನು! ಅದಕ್ಕೆ ನಾನು ಇನ್ನೇನು ಹೇಳಲಿಕ್ಕೆ ಹೋಗೋ ಹಾಗಿಲ್ಲ ಈಗ ಇಬ್ಬರು ಜನ ಕಳೆದುಕೊಂಡ ಹಾಗೆ ಆಗಿದೆ ನಮಗೆ. ಮತ್ತೆ ಇದ್ದವರನ್ನೂ ಕಳೆದುಕೊಳ್ಳುವುದು ಬೇಡ. ಬಹಳ ಸಂತೋಷವಾಯಿತು. ರಾತ್ರಿ ನೀವೆಲ್ಲ ಇಲ್ಲಿ ಸೇರಿಕೊಂಡು ಜ್ಞಾನಾರ್ಜನೆ ಮಾಡಿ. ಇದು ಆತ್ಮ ಕಲ್ಯಾಣಕ್ಕೆ ಕಾರಣವಿದೆ. ಜ್ಞಾನವನ್ನು ನಾಗರಾಜರ ಹತ್ತಿರ ತಗೊಳ್ಳಿ, ಸ್ವಾಮಿಗಳ ಹತ್ತಿರ ತಗೊಳ್ಳಿ, ಬ್ರಹ್ಮಪ್ಪನವರ ಹತ್ತಿರ ತಗೊಳ್ಳಿ, ಸ್ತ್ರೀಯರಿಂದ ತಗೊಳ್ಳಿ, ಒಳ್ಳೆ ಮಾತು ಎಲ್ಲಿಂದ ಸಿಗುತ್ತೋ ಅಲ್ಲಿಂದ ತಗೊಳ್ಳಿ. ನಾಚಿಕೆ ಮಾಡಿದರೆ ವಿದ್ಯೆ

ಬರುವ ಹಾಗಿಲ್ಲ. ಜ್ಞಾನ ಎಲ್ಲಿಂದ ಸಿಗುತ್ತದೆ ಅಲ್ಲಿಂದ ತಗೊಂಡು ನಮ್ಮ ಆತ್ಮ ಕಲ್ಯಾಣ ಮಾಡಿಕೊಳ್ಳಬೇಕು. ಯಾವ ಅಂಗಡಿಯಲ್ಲಿ ಒಳ್ಳೆ ಸಾಮಾನು ಸಿಗುತ್ತದೆ. ಬೇಳೆ ಅದು ಇದು, ಎಣ್ಣೆ, ಉಪ್ಪು ಅಲ್ಲಿ ಹೋಗಿ ನೀವು ಕರೀದಿ ಮಾಡುವಿರಿ, ಅಂದ ಮೇಲೆ ಜ್ಞಾನಾರ್ಜನೆ ಎಲ್ಲಿ ಒಳ್ಳೆಯದಿದೆ ಅದನ್ನು ತೆಗೆದುಕೊಳ್ಳುವುದಕ್ಕೆ ನೀವು ಸಿದ್ಧ ರಾಗಬೇಕು. ಇಪ್ಪತ್ತನಾಲ್ಕು ಘಂಟೆ ಪ್ರಪಂಚ ಇದ್ದೇ ಇದೆ, ತಿನ್ನುವುದು ಉಡುವುದು. ಹೆಂಗಸರ ತಕರಾರು ಏನಪ್ಪ ಅಂದರೆ ನಮಗೆ ಬೆಳಿಗ್ಗೆ ಎದ್ದು ನೀರು ಹಿಡಿಯಬೇಕಾಗು ತ್ತದೆ ಎಂಬುದು. ಬೆಳಿಗ್ಗೆ ಎದ್ದು ನೀರು ನೀರು ಎಂದು ಜಪ ಮಾಡಬೇಡಿ ,ಅರಹಂತ, ಅರಹಂತ ಎಂದು ನೀವು ಜಪ ಮಾಡಿ'.

## 3. ಗುರು ಪರಂಪರೆ.

ನಮ್ಮ ಭಾರತದ ತತ್ವಜ್ಞಾನದಲ್ಲಿ ದೇವ–ಗುರು–ಶಾಸ್ತ್ರದ ಚರ್ಚೆಗಳು ಸರ್ವತ್ರ ಗ್ರಂಥಗಳಲ್ಲೂ ಬಂದಿವೆ. ಯಾವ ಸಂಪ್ರದಾಯವಿದ್ದರೂ ಎಲ್ಲ ಕಡೆಯೂ ದೇವರಲ್ಲಿ ನಂಬಿಕೆಯಿದೆ, ಗುರುಭಕ್ತಿಯಿದೆ, ಶಾಸ್ತ್ರದಲ್ಲಿ ನಂಬಿಕೆಯಿದೆ. ಶಾಸ್ತ್ರ ಅಚೇತನ, ದೇವರು ಚೈತನ್ಯವಿದ್ದರೂ ಅವನ ಪ್ರತೀಕವಾಗಿ ನಾವು ದೇವಸ್ಥಾನದಲ್ಲಿ ಮೂರ್ತಿಯನ್ನು ಸ್ಥಾಪಿಸಿರುವೆವು. ಈ ಎಲ್ಲಾ ಧರ್ಮಕಾರ್ಯಗಳಿಗೇನೊಂದು ಗುರುಪರಂಪರೆಯಿದೆ ಅದನ್ನು ಆದಿನಾಥರು ಸ್ಥಾಪನೆಮಾಡಿದರು. ಆ ಕೃಷಿಯಿಂದಲೇ ಈ ಹೊತ್ತಿಗೂ ಕೂಡ ಗುರುಪರಂಪರೆ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ.

ಈ ಗುರುಗಳ ಸಂಗತಿಯಿಂದ ಭಾರಿ ದೊಡ್ಡ ಲಾಭವೆಂದು ಪದ್ಮನಂದಿ ಪಂಚ ವಿಂಶತಿಯಲ್ಲಿ ಆಚಾರ್ಯರು ಹೇಳಿದ್ದಾರೆ. ಗೃಹಸ್ಥರ ಕರ್ತವ್ಯವೇನು ಎಂಬುದನ್ನು ಕುಂದಕುಂದಾಚಾರ್ಯರು ಹೇಳಿದ್ದಾರೆ. ಈ ಎರಡು ವಿಷಯವನ್ನೂ ನಾನು ಹೇಳು ವೆನು. ತಾವು ಚೆನ್ನಾಗಿ ತಿಳಿದುಕೊಳ್ಳಬೇಕು. ಗುರುಗಳೆಂದರೆ ಅವರ ಮುಂದೇನಾ ದರು ಇಟ್ಟು ಕಾಲಿಗೆಬಿದ್ದು ಹೋಗುವುದಲ್ಲ, ಗುರುಗಳ ಬಗ್ಗೆ ಕರ್ತವ್ಯ ಏನಿದೆ? ಒಂದು ಶಾಸ್ತ್ರೀಯ ಶಬ್ದವಿದೆ. ನಮ್ಮ ತ್ಯಾಗಿಗಳಿಗೂ ಆ ಶಬ್ದ ಗೊತ್ತಿರಲಿಕ್ಕಿಲ್ಲ, 'ಉಪಸಂಪದ' ಎಂದು. ನೋಡಿ ಹೇಳುತಾರೆ, ಗುರುಗಳ ಚರಣ ಮೂಲದಲ್ಲಿ ತನ್ನ ಆತ್ಮ ಸಮರ್ಪಣೆ ಮಾಡಿಕೊಳ್ಳುವುದು, ಭಕ್ತಿಯಿಂದ ನಡೆದುಕೊಳ್ಳುವುದು. ಇದಕ್ಕೆ ಉಪಸಂಪದ ಎಂದು ಹೆಸರು. ಆತ್ಮ ಸಮರ್ಪಣೆ ಅಂದರೆ ಹೇಗೆ ಸುಖದಲ್ಲಿರಲಿ, ದುಃಖದಲ್ಲಿರಲಿ, ಉಪಸರ್ಗದಲ್ಲಿರಲಿ, ಹಾಗೇನೆ ಇರಲಿ ಆ ಗುರುಗಳ ಸಮೀಪದಲ್ಲಿ ಹೋಗಿ ಅವರಿಗೆ ವಸ್ತಿಕಾದಾನವನ್ನು ಕೊಡಬೇಕು. ಇದು ಗೃಹಸ್ಥರ ಕರ್ತವ್ಯ. ಎರಡನೆಯದು ಆಹಾರದಾನ ಕೊಡಬೇಕು. ದಾನಶಾಸನ ಗ್ರಂಥದಲ್ಲಿ ಆಹಾರದಾನದ ಬಗ್ಗೆ ವಿಸ್ತಾರವಾಗಿ ವರ್ಣನೆಮಾಡಿದ್ದಾರೆ. ಒಂದೇ ಒಂದು ಗ್ರಾಸ ಆಹಾರವನ್ನು ಭಕ್ತಿಯಿಂದ ಕೊಡುವುದರಿಂದ ಎಷ್ಟೋ ಆಗುವ ಫಲವನ್ನು ಕುರಿತು ಕಥೆಗಳಿವೆ.

ಒಬ್ಬ ಬಡವೆ, ಅವಳ ಮನೆಯಲ್ಲೇನೂ ಇದ್ದಿದ್ದಿಲ್ಲ. ಸಾಸಿವೆ ಸ್ವಲ್ಪ ಇತ್ತು, ಯಾರೋ ಒಬ್ಬ ಮುನಿಗಳು ಬಂದರು. ಅದನ್ನೇ ಅರೆದು ಅವರ ಕೈಗೆ ಹಾಕಿಬಿಟ್ಟಳು.

ಆಗ ಪಂಚಾಶ್ಚರ್ಯವೃಷ್ಟಿಯಾಯಿತಂತೆ. ನಾಳೆ ನೀವೂ ಸಾಸಿವೆ ಅರೆದು ಪಂಚಾಶ್ಚರ್ಯ ವೃಷ್ಟಿಯಾಗಲೆಂದು ಸ್ವಾಮಿಗಳಿಗೆ ಕೊಟ್ಟುಬಿಡಿ ಪಕ್ಕದವರು ಆ ಮುದುಕಿಯನ್ನು 'ನೀನು ಮುನಿಗಳಿಗೇನು ಹಾಕಿದೆ, ಪಂಚಾಶ್ಚರ್ಯವೃಷ್ಟಿ ಆಯಿತಲ್ಲ!' ಎಂದು ಕೇಳಿದರು. 'ಸಾಸಿವೆ ಅರೆದು ಹಾಕಿದೆ' ಅಂದಳು. ಪಕ್ಕದ ಮನೆಯವಳು ಸಾಸಿವೆ ಅರೆದು ಹಾಕಿದಳು. ಮುನಿಗಳಿಗೆ ಹೊಟ್ಟೆನೋವು ಆಗಿ ಪಾಪ ಸತ್ತುಹೋದರು.

**ವಸ್ತಿಕಾದಾನ—** ನೋಡಿ ರಾಣಿ 'ನೂರ್' ಎನ್ನುವವಳು ಏಳುನೂರ ಇಪ್ಪತ್ತು ಗುಹೆಗಳನ್ನು ಕಟ್ಟಿಸಿರುವಳು. ಪರ್ವತದಲ್ಲಿ ಕೆತ್ತಿಸಿ ಎರಡೆರಡು ಅಂತಸ್ತಿನ ಗುಹೆಗಳು. ರಾಣಿ ನೂರ್ ಸಾಮ್ರಾಟ್ ಖಾರವೇಲನ ಪತ್ನಿ. ಇಲ್ಲಿ ನಮ್ಮ ಬ್ರಹ್ಮಪ್ಪನವರು ಯಾವಾಗಲೂ ಅತ್ತಿಮಬ್ಬೆ ಹೆಸರು ಹೇಳುವುದು ಹೊರತಾಗಿ ತಮ್ಮ ಭಾಷಣದಲ್ಲಿ ರಾಣಿ ನೂರಳ ಹೆಸರು ಹೇಳುವುದಿಲ್ಲ. ನೋಡಿ ಕನ್ನಡದಲ್ಲೇ ಅವಳ ಹೆಸರಿದೆ. ರಾಣಿ ನೂರ್, ನೂರು ಕೆಲಸ ಮಾಡಿದಳು ಅವಳು. ಜನ ರಾಣಿ ನೂರ್ ಎಂದು ಅವಳಿಗೆ ಹೆಸರಿಟ್ಟರು. ವಸ್ತಿಕಾ ದಾನದಲ್ಲಿ ಈ ಕಲಿಯುಗದಲ್ಲಿ ರಾಣಿ ನೂರ್ ಬಿಟ್ಟರೆ ಇಷ್ಟು ದೊಡ್ಡ ಪ್ರಮಾಣದಲ್ಲಿ ವಸ್ತಿಕಾದಾನವನ್ನು ಯಾರೂ ಮಾಡಿಲ್ಲ ಅಂತ ನನ್ನ ಅಂದಾಜು. ಏಕೆಂದರೆ ನಾನು ಸ್ವತಃ ಗುಹೆಗಳನ್ನು ನೋಡಿದ್ದೇನೆ. ಗುಹೆಗಳನ್ನು ಕಟ್ಟಿದ್ದಾರೆ, ಏನು ಹೇಳುವುದು ? ತಲೆದಿಂಬನ್ನೂ ಕಲ್ಲಿನಲ್ಲಿ ಕೆತ್ತಿಸಿಬಿಟ್ಟಿದ್ದಾರೆ. ಹೀಗೆ ಮುನಿಗಳಿಗೆ ಆರಾಮವಾಗಿ ಸುಖವಾಗಿ ತಪಶ್ಚರ್ಯ ಮಾಡಲಿ ಎಂದು ಸಹಯೋಗ ಕೊಡಬೇಕು.

**ಆಹಾರದಾನ—** ಆಹಾರ ದಾನವನ್ನೂ ನವದಾ ಭಕ್ತಿಯಿಂದ ಗುರುಗಳಿಗೆ ಕೊಡಬೇಕು. ಗುರುಗಳ ಸಂಸ್ಥೆ ಸರಿಯಾಗಿರಬೇಕಾದರೆ ಗೃಹಸ್ಥರ ಕರ್ತವ್ಯವೂ ನಡೆಯಬೇಕು. ಅವರು ಎಲ್ಲಿ ಹೋಗಬೇಕು? ಎಷ್ಟೋ ಜನ ಸನ್ಯಾಸಿಗಳು ಹೋಟೆಲಿನಲ್ಲಿ ತಿನ್ನುವುದುಂಟು. ಜೈನ ಮುನಿಗಳು, ಜೈನತ್ಯಾಗಿಗಳು ಊಟ ಮಾಡಲಿಕ್ಕೆ ಒಂದು ಬಂಧನವಿದೆ. ಸದಾಚಾರಿಯಾಗಿ ಯಾವನು ನಿರ್ವ್ಯಸನಿಯಾಗಿರುವನು ಅವನಲ್ಲೇ ಆಹಾರ ತೆಗೆದುಕೊಳ್ಳಬೇಕು ಎಂದು ಬಂಧನ ಹಾಕಿದ್ದಾರೆ. ಮತ್ತೆ ನಿಮಗೇನು ಬಂಧನ ಅಂದರೆ ಯಾವನು ವ್ರತೀ ಇದ್ದಾನೆ, ಮಹಾವ್ರತಿ ಇದ್ದಾನೆ, ಕ್ಷುಲ್ಲಕ, ಐಲಕ, ಬ್ರಹ್ಮಚಾರಿ ಇವರಿಗೆಲ್ಲ ಆಹಾರ ದಾನ ಮಾಡಬೇಕೆಂದು ನಿಮಗೂ ಬಂಧನವಿದೆ. ಈ ಎರಡೂ ಪರಂಪರೆಗಳು ಎಷ್ಟರ ವರೆಗೆ ನಡೆದುಕೊಂಡು ಹೋಗುತ್ತವೆ ಅಷ್ಟರ ವರೆಗೆ ಗುರು ಪರಂಪರೆ ನಡೆಯುತ್ತದೆ, ಧರ್ಮ ಪರಂಪರೆಯೂ ನಡೆಯುತ್ತದೆ.

ಶ್ರಾವಕ ತನ್ನ ಕರ್ತವ್ಯವನ್ನು ಮರೆಯಬಾರದು. ಅವನು ಶ್ರಾವಕ ಅನ್ನಿಸಿಕೊಳ್ಳಬೇಕಾದರೆ, ಅವನು ಜೈನ ಅನ್ನಿಸಿಕೊಳ್ಳಬೇಕಾದರೆ, ಅವನು ಸದ್ಗೃಹಸ್ಥ ಅನ್ನಿಸಿಕೊಳ್ಳಬೇಕಾದರೆ 'ದಾನಂ ಪೂಜಾಮೊಖ್ಯಂ' ಇದನ್ನು ಶ್ರಾವಕ ಮರೆಯಬಾರದು. ದಾನ ಮತ್ತು ಪೂಜೆ ಇವೆರಡಿರದಿದ್ದರೆ ಮನುಷ್ಯರಾಗಿದ್ದು ವ್ಯರ್ಥವಾಗುವುದು. ರಾಮನು ವನವಾಸದಲ್ಲಿ ಇರುವಾಗ ಇಬ್ಬರು ಚಾರಣ ಋದ್ಧಿ ಮುನಿಗಳು ಬಂದರು. ಕೂಡಲೆ ರಾಮ ಸೀತೆ ಇಬ್ಬರೂ ಮರದಡಿಯಲ್ಲಿ ಅವರಿಗೆ ಆಹಾರ ದಾನ ಕೊಟ್ಟರು. ಅಲ್ಲೇ ಮರದ ಮೇಲೆ ಎರಡು ಪಕ್ಷಿಗಳು ಕುಳಿತಿದ್ದವು. ಅವೂ ನೋಡಿದವು 'ಅಯ್ಯೋ ನಾವು

ಕೂಡ ಮನುಷ್ಯರಾಗಿದ್ದರೆ ಆಹಾರ ದಾನ ಕೊಡಬಹುದಿತ್ತಲ್ಲ. ನಾವು ಪಕ್ಷಿ ಪರ್ಯಾಯದಲ್ಲಿ ಹುಟ್ಟಿ ನಾವೇನೂ ದಾನ ಮಾಡುವ ಹಾಗಿಲ್ಲ' ಎಂದು ನೊಂದುಕೊಂಡು ಅತ್ಯಂತ ಆಸಕ್ತಿಯಿಂದ ಅನುಮೋದನೆಕೊಟ್ಟು ಅಲ್ಲೇ ಉರಿಯುತ್ತಿದ್ದ ಬೆಂಕಿಯಲ್ಲಿ ಬಿದ್ದು ಸತ್ತು ಹೋದವು! ಬೇಕಂತಲೇ ಆತ್ಮಹತ್ಯೆ ಅಲ್ಲ, ಮೂರ್ಛೆ ಬಂದು ಬಿದ್ದು ಸತ್ತು ಹೋದವು. ಅವು ಎರಡೂ ಜೀವಗಳು ಮುಂದಿನ ಭವದಲ್ಲಿ ಒಳ್ಳೆ ರಾಜಕುಮಾರಿ, ರಾಜಕುಮಾರರಾಗಿ ಹುಟ್ಟಿದರು.

ಔಷಧ ದಾನವೂ ಕೂಡ ಎಷ್ಟು ಒಳ್ಳೆಯದಿದೆ–ಔಷಧ ದಾನದಂಥ ದಾನವೇ ಇಲ್ಲ. ಪೂಜ್ಯಪಾದರು ಆರೋಗ್ಯ ಶಾಸ್ತ್ರವನ್ನೂ ಬರೆದಿದ್ದಾರೆ. 'ಆರೋಗ್ಯ ಶಾಸ್ತ್ರ ಮಿದಂ' ಪೂಜ್ಯಪಾದರು ಕಲ್ಯಾಣಕಾರಕವೆಂಬ ವೈದ್ಯ ಗ್ರಂಥದಲ್ಲಿ 'ಒಳ್ಳೆ ನಿರೋಗವಾದ ಶರೀರವಿದ್ದರೆ ತಪಶ್ಚರಣೆ ಮಾಡಬಹುದು. ಆ ತಪಶ್ಚರಣೆಗೆ ಒಳ್ಳೆ ಯೋಗದಾನ ಮಾಡಿದಂತಾಗುವುದು. ಔಷಧ ದಾನ ಮಾಡಿದವನು ನಿರೋಗಿಯಾಗುವನು. ಕ್ಷುಧಾ ರೋಗ ನಿವಾರಣೆಯಾಗಬೇಕಾದರೆ ವಸ್ತಿಕಾದಾನದಿಂದ ಸಿಗುವುದು. ಹಿಂದಿನ ಜನ್ಮದಲ್ಲಿ ದಾನ ಮಾಡಿದಂಥ ಮನುಷ್ಯರಿಗೆ ಮಾತ್ರ ಪುಣ್ಯಸಿಗುವುದು' ಎಂದಿದ್ದಾರೆ.

ನಮ್ಮ ಕುಂಥುಸಾಗರ ಆಚಾರ್ಯರು ಬರೆದಿದ್ದಾರೆ. ಒಬ್ಬನ ಗುಡಿಸಲನ್ನು ಕಿತ್ತುಹಾಕಿದ್ದಕ್ಕೆ ಅದರ ಫಲವೇನಪ್ಪ ಅಂದರೆ ಮುಂದಿನ ಭವದಲ್ಲಿ ಮನೆಯಿಲ್ಲದೆ ಅಲೆಯಬೇಕಾಗುವುದು. ಮನೆಯನ್ನು ಕಟ್ಟಲಿಕ್ಕೆ ಅವನಿಗೆ ಅನುಕೂಲತೆ ಆಗುವಹಾಗಿಲ್ಲ. ವಸ್ತಿಕಾ ದಾನವನ್ನು ತಪಸ್ವಿಗಳಿಗೆ ಕೊಟ್ಟರೆ ಆ ಸ್ವರ್ಗದಲ್ಲಾಗಲಿ, ಇಲ್ಲಾಗಲಿ ಒಳ್ಳೆ ಮನೆ ಸಿಗುವುದಲ್ಲದೆ ಕಾಲಕ್ರಮೇಣ ಮುಕ್ತಿಗೂ ಹೋಗಬಹುದು. ಹಿಂದಿನ ಜನ್ಮದಲ್ಲಿ ಬಾಹುಬಲಿ ಆಹಾರ ದಾನದ ಅನುಮೋದನೆ ಕೊಟ್ಟಿದ್ದ. ಈ ಜನ್ಮದಲ್ಲಿ ಆಹಾರ ಮಾಡದೇ ಮುಕ್ತಿಗೆ ಹೋಗಿಬಿಟ್ಟನು. ಆಹಾರವನ್ನೇ ತೆಗೆದುಕೊಳ್ಳಬೇಕಾಗಲಿಲ್ಲ, ಕ್ಷುದ್ಬಾಧೆ ನಿವಾರಣೆಯಾಗಿತ್ತು. ಇದು ಸಾಮಾನ್ಯ ಅಲ್ಲ, ಒಂದು ವರ್ಷದವರೆಗೆ ಅನ್ನ ನೀರನ್ನು ಬಿಟ್ಟು ಬಿಟ್ಟರು. ಒಂದು ವರ್ಷದವರೆಗೆ ಹೇಗೆ ಶಕ್ಯವಿದೆಯಪ್ಪ ಅಂದರೆ, ಉತ್ತರ ಸೈಬೀರಿಯಾದಲ್ಲಿ ಕರಡಿಗಳಿವೆ, ಬಿಳಿಕರಡಿ ಅವು ಆರು ತಿಂಗವರೆಗೆ ಊಟ ಮಾಡುವ ಹಾಗಿಲ್ಲ, ಆರು ತಿಂಗಳು ಅಲ್ಲಿ ಭಾರಿ ಬರ್ಫ್ (ಮಂಜು) ಬೀಳುತ್ತದೆ. ಬರ್ಫ್ ಬಂದಾದ (ನಿಂತ) ಕೂಡಲೇ (ಮಂಜು ನಿಂತ ಮೇಲೆ) ಅವು ತಿರುಗಾಡಿಕೊಂಡು ಊಟ ಮಾಡುವವು. ಆರು ತಿಂಗಳವರೆಗೆ ಮಲಗೇ ಇರುತ್ತವೆ, ಕಣ್ಣು ತೆರೆಯುವುದಿಲ್ಲ. ಆರು ತಿಂಗಳ ನಂತರ ಕಣ್ಣು ತೆರೆಯುವುದು! ಹಾಗೇ ಆದಿನಾಥರು ಕೂಡ ಆರು ತಿಂಗಳು ಕಣ್ಣುಮುಚ್ಚಿ ಕುಳಿತಾಗ ಅವರಿಗೆ ಆಹಾರದ ನೆನಪೇ ಆಗಲಿಲ್ಲ, ಹಸಿವೇ ಆಗಲಿಲ್ಲ. ತಮ್ಮ ಆತ್ಮನಲ್ಲಿ ಮಗ್ನರಾದರು.

ಮಕ್ಕಳು ನೋಡಿ ಸ್ಕೂಲ್‌ಗೆ ಹೋಗುವಾಗ ಕಡಿಮೆ ಊಟ ಮಾಡುತ್ತವೆ ಎಂದು ಆದಿತ್ಯವಾರವಿರುತ್ತದೆ ಸ್ಕೂಲ್ ಇರುವುದಿಲ್ಲ, ಅಲ್ಲಿ ಕೈಹಾಕು, ಇಲ್ಲಿ ಕೈಹಾಕು, ಏನಾದರೂ ಮಾಡಲಿಕ್ಕೆ ಬಂದರೆ, ಅಮ್ಮ ನನಗೆ ಅದು ತಿನ್ನಲಿಕ್ಕೆಬೇಕು, ಇದು ತಿನ್ನಲಿಕ್ಕೆ ಬೇಕು, ಎಂದು ಕಾಟ ಕೊಡುವವು. ಹಾಗೇ ಕೆಲಸ ಇಲ್ಲದವರಿಗೆ ಹೆಚ್ಚಾಗಿ ಹಸಿವೆಯಾಗುತ್ತದೆ. ಕೆಲಸವಿದ್ದವನಿಗೆ ಊಟದ ಮೇಲೆ ಲಕ್ಷ್ಯ ಇರುವ ಹಾಗಿಲ್ಲ,

ನೋಡಿ ಇದಕ್ಕೇನು ಪ್ರಮಾಣ? ಎಲ್ಲಾದರು ಮನೆಯಲ್ಲಿ ಮಗಳ ಮದುವೆಯಲ್ಲಿ ತಾಯಿಯೂ ಊಟ ಮಾಡುವಹಾಗಿಲ್ಲ, ತಂದೆಯೂ ಊಟ ಮಾಡುವಹಾಗಿಲ್ಲ. ಎಲ್ಲರಿಗೂ ಊಟ ಮಾಡಿಸುತ್ತಾರೆ. ಒಂದು ಸಲ ನಿರ್ವಿಘ್ನವಾಗಿ ಎಲ್ಲರೂ ಸಂತೋಷ ಪಟ್ಟು ಹೋದರೆ ಸಾಕಪ್ಪ ಎನ್ನುವರು. ಲಗ್ನ ನಿರ್ವಿಘ್ನವಾಗಿ ಎಲ್ಲರೂ ಊಟ ಮಾಡಿ ಯಾರಿಗೂ ತೊಂದರೆ ಆಗಬಾರದು ಎಂದು ಅವರು ಊಟವನ್ನೇ ಮಾಡುವಹಾಗಿಲ್ಲ ಹಾ ತಿಂಡಿ! ಒಂದು ತುತ್ತು ತಿಂದಕೂಡಲೇ ಹೊಟ್ಟೆ ತುಂಬಿದಂತೆ ಆಗುತ್ತದೇಕೆ? ಇಲ್ಲ ಆನಂದ ಇರಬೇಕು, ಇಲ್ಲ ಸಂತೋಷ ಇರಬೇಕು. ಈ ರೀತಿ ಇದ್ದರೆ ಮಾತ್ರ ಅವರಿಗೆ ಹಸಿವು ಕಾಣುವುದಿಲ್ಲ, ಆಹಾರ ದಾನವೇನಿದೆ ಮಹತ್ವಪೂರ್ಣದ್ದು.

ಮುಂದೇನಪ್ಪ ಅಂದರೆ ಶಾಸ್ತ್ರದಾನ. ಕೈಯಿಂದ ಬರೆಸುವುದಾಗಲಿ, ಪ್ರಿಂಟ್ ಮಾಡಿಸುವುದಾಗಲಿ, ಬೇರೆಯವರಿಗೆ ಕಲಿಸುವುದಾಗಲಿ, ಶಾಸ್ತ್ರದಾನವಾಗುವುದು. ತೀರ್ಥಂಕರರಿಗೆ 'ಣಮೋ ಅರಹಂತಾಣಂ' ಎಂದು ನಾವೇಕೆ ಕೈಮುಗಿಯುವೆವು? ಯಾರು ಮತ್ತೊಬ್ಬರಿಗೆ ಜ್ಞಾನ ದಾನ ಕೊಡುತ್ತಾರೆ, ಕಲಿಸುತ್ತಾರೆ ಅವರು ಪುಣ್ಯ ಶಾಲಿಗಳಾಗುತ್ತಾರೆ. ಒಂದು ವರ್ಣನೆಯಿದೆ. ಹಿಂದಿನ ಮೂರು ದಾನಗಳೂ ಇಲ್ಲೇ ಬಿಟ್ಟುಬಿಡಬಹುದು. ಅವುಗಳದು ಒಂದು ಕಾಲಾವಧಿಯಿದೆ. ಜ್ಞಾನದಾನ ಮಾತ್ರ ಜನ್ಮ ಜನ್ಮಾಂತರ ಜೊತೆಯಲ್ಲಿ ಬರುತ್ತದೆ. ಆಹಾರ ದಾನ ಕ್ಷುಧಾಮುಗಿದ ಕೂಡಲೆ ಮುಗಿಯಿತು. ವಸ್ತಿಕಾ ದಾನ ಸ್ವಲ್ಪದಿನ ನಿಂತರು ಹೊರಟು ಹೋದರು, ಶಾಸ್ತ್ರ ದಾನವೇನಿದೆ ಭವಭವಾಂತರದಲ್ಲಿ ಬಂದು ಮುಕ್ತಿಗೆ ಕಾರಣವಾತ್ತದೆ. ಈ ನಾಲ್ಕು ದಾನಗಳನ್ನು ವರ್ಣನೆ ಮಾಡಿ ಹೇಳಿದ್ದಾರೆ.

ನೋಡಿ 'ಸುಖ ದುಃಖದಲ್ಲಾಗಲಿ ವಸ್ತಿಕಾ. ಆಹಾರದಾನ, ಔಷಧದಾನ, ಶಾಸ್ತ್ರ ದಾನಾದಿ, ಅದಿ ಶಬ್ದದಿಂದ ಪಿಂಛಿ ಕಮಂಡಲ ಬರೆಯಲಿಕ್ಕೆ ಪೆನ್ಸಿಲ್ ಇತ್ಯಾದಿ ಹುಲ್ಲುಚಾಪೆ, ಇವನ್ನು ದಾನ ಕೊಡಬೇಕು. ಇಷ್ಟೇ ಅಲ್ಲ ಯಾರು ಸನ್ಯಾಸಿ ಆಗಿ ದ್ದರೆ ಅವರ ಇದಿರು ಯಾವ ಶಬ್ದಗಳನ್ನು ಪ್ರಯೋಗ ಮಾಡಬೇಕು 'ಹೇ ಗುರುಗಳೇ ನಾನು ನಿಮ್ಮವನೇ, ನಿಮ್ಮ ಪಾದಸೇವಕ, ತಮಗೇನು ಅನುಕೂಲ ಬೇಕು ಹೇಳಿ ನಾನು ಮಾಡಿಕೊಡುತ್ತೇನೆ' ಎಂದು ಈ ತೆರನಾಗಿ ಪ್ರಾರ್ಥಿಸಬೇಕು. 'ನಾನು ತಮ್ಮವನೇ, ನನ್ನನ್ನು ಬೇರೆಯವನು ಎಂದು ತಿಳಿದುಕೊಳ್ಳಬೇಡಿ' ಎಂದು ಈ ತೆರದಿಂದ ಆತ್ಮ ಸಮರ್ಪಣೆ ಮಾಡಬೇಕು, ಸುಖದಲ್ಲಿ, ದುಃಖದಲ್ಲಿ. ಸುಖದಲ್ಲಿ ಎಷ್ಟೋ ಜನ ಬಟ್ಟಾ ಗುವವರು ಇದ್ದಾರೆ. ಯಾವನಾದರೂ ಒಬ್ಬ ಶ್ರೀಮಂತನಾಗಲಿ ಅವನು ನಮ್ಮ ನಂಟ ಅಂತ ಹೇಳುವರು. ದುಃಖದಲ್ಲಾದರೆ ಭಾರಿ ಕಷ್ಟವಿದೆ. ಆ ದುಃಖದಲ್ಲಿ ಯಾರು ಸೇವೆ ಮಾಡುತ್ತಾರೋ ಅವರೇ ವಾಸ್ತವಿಕವಾಗಿ ಗುರುಭಕ್ತರು.

ದೇವ, ಗುರು, ಶಾಸ್ತ್ರದಿಂದಲೇ ನಮ್ಮ ಸಂಸ್ಕೃತಿ ಬೆಳೆಯುತ್ತದೆ, ಸಂರಕ್ಷಣೆಯಾಗು ತ್ತದೆ. ಗುರುಗಳ ಸನ್ನಿಧಿಯಲ್ಲಿರುವಾಗ ಕೆಟ್ಟ ವಿಚಾರಗಳು ಬರುವಹಾಗಿಲ್ಲ. ಒಳ್ಳೊ ಳ್ಳೆಯ ವಿಚಾರಗಳು ಬರುತ್ತವೆ. ಒಬ್ಬ ಶಿಷ್ಯ ಹೋದ 'ಅಲ್ಲ ಸ್ವಾಮಿ, ಇಪ್ಪತ್ತನಾಲ್ಕು ಗಂಟೆಯಲ್ಲಿ ನಾವು ಆರ್ತರೌದ್ರಧ್ಯಾನ ಮಾಡುತ್ತೇವೆ ಮನೆಯಲ್ಲಿದ್ದು, ಒಂದು ಚೂರು ಕೂಡ ದೇವರ ಹೆಸರು ಬರುವ ಹಾಗಿಲ್ಲ, ಒಳ್ಳೆ ಪರಿಣಾಮ ಆಗುವ ಹಾಗಿಲ್ಲ, ನೀವು

ಹೇಗೆ ಕಾಡಿನಲ್ಲಿ ಕುಳಿತುಕೊಂಡಾಗಲಿ, ಎಲ್ಲೇ ಕುಳಿತುಕೊಂಡಾಗಲಿ ನೀವು ದೇವರ ಹೆಸರನ್ನು ತೆಗೆದುಕೊಳ್ಳುತ್ತಿರಲ್ಲ! ಇದು ನನಗೇನು ಸಂಭವ ಅನ್ನಿಸುತ್ತಿಲ್ಲ ಈ ಶಂಕೆ ಬರುತ್ತಿದೆ, 'ಸಂಶಯಾತ್ಮವಿನಶ್ಯತಿ, ಇದು ಭವ್ಯ ಜೀವವಾಗಿ ಕಾಣುತ್ತದೆ. ಇವನ ಕೈ ನೋಡಿದರು 'ಹೋ ಮಹಾರಾಯ ನಿನ್ನ ಕೈಯಲ್ಲಿ ಭಾರಿ ಹಾನಿ ಇದೆ!' ಅಂದರು. 'ಏನು?' ಎಂದು ಶಿಷ್ಯ ಗಾಬರಿಯಾದನು.

'ಏಳು ದಿವಸವನಂತರ ನೀನು ಸತ್ತು ಹೋಗುತ್ತೀಯ' ಅಂದರು.

'ಇನ್ನೇನು ಮಾಡಲಿ?'

'ದೇವರ ಹೆಸರು ತಗೋ ಬೇರೆ ಉಪಾಯವಿಲ್ಲ' ಎಂದರು.

ಅವನು ಹಾಸಿಗೆ ಹಾಕಿ ೨೪ ಗಂಟೆಯೂ ದೇವರ ಹೆಸರು ತೆಗೆದುಕೊಳ್ಳುತ್ತಿದ್ದ. ಸ್ವಲ್ಪ ಹೊತ್ತು ಕುಳಿತಿರುತ್ತಿದ್ದ, ದೇವರ ಹೆಸರು ತೆಗೆದುಕೊಳ್ಳುತ್ತಿದ್ದ. ಏಳು ದಿವಸ ದನಂತರ ಇವನು ಸಾಯುವ ಟೈಂ ಬಂತಲ್ಲ, ಆಗ ಏಕನಾಥ ಗುರುಗಳು ಅಲ್ಲಿಗೆ ಬಂದರು.

'ಮಹಾರಾಯ ಏನಾಯ್ತು?'

'ಇನ್ನೇನು ಒಂದು ಘಂಟೆ ಉಳಿದಿದೆ. ಸತ್ತುಹೋಗುತ್ತೇನೆ!'

'ನಾನು ಸುಮ್ಮನೆ ಈ ಶಂಕೆ ನಿವಾರಣೆ ಮಾಡುವುದಕ್ಕೆ ಹೇಳಿದ್ದೆ. ಈಗ ಏಳು ದಿವಸ ನಿನ್ನ ಪರಿಣಾಮ ಹೇಗೆ ಉಳಿಯಿತು?

ದೇವರನ್ನು ಬಿಟ್ಟು ಬೇರೇನನ್ನೂ ನೆನೆಸಲಿಲ್ಲ'

'ಏಕೆ ನೆನಸಲಿಲ್ಲ?' 'ಸಾಯ್ತೀನಲ್ಲ ಅಂತ ಬೇರೇನನ್ನೂ ನೆನಸಲಿಲ್ಲ.'

'ಹಾಗೇನೆ ಪ್ರತಿಯೊಂದು ಕ್ಷಣದಲ್ಲಿ ಸಾವು ಬಂದು ಯಾವಾಗ ನುಂಗುತ್ತದೆ ಗೊತ್ತಿಲ್ಲ ಎಂದು ನಾವು ಯಾವಾಗಲೂ ದೇವರನ್ನು ನೆನೆಸುತ್ತಾ ಇರುತ್ತೇವೆ. ನಾವು ಮರೆಯುವ ಹಾಗಿಲ್ಲ' ಎಂದು ಏಕನಾಥರು ಹೇಳಿದರು.

'ಓಹೋ ಈಗ ತಿಳಿಯಿತು ನನಗೆ. ಆರ್ತರೌದ್ರಧ್ಯಾನ ಮಾಡದೆ ಧರ್ಮ-ಧ್ಯಾನವನ್ನು ಹೇಗೆ ಮಾಡುವುದೆಂದು ಈಗ ತಿಳಿಯಿತು' ಎಂದನು.

ಪಾಪದ ಭಯ ಯಾರಿಗಿದೆ, ಮಿಥ್ಯಾ ಭಯ ಯಾರಿಗಿದೆ, ಸಂಸಾರ ದುಃಖಮಯ ವಿದೆ ಎಂದು ಭಯ ಯಾರಿಗಿದೆ, ಅವನೇ ಧರ್ಮ ಮಾರ್ಗದಲ್ಲಿ ನಡೆಯುತ್ತಾನೆ. ಯಾರಿಗೆ ಧರ್ಮ–ಕರ್ಮವೇನೂ ಇಲ್ಲ ಅವನು ಸ್ವಚ್ಛಂದವಾಗಿರುತ್ತಾನೆ. ಆಚಾರ್ಯರು ಪದ್ಮನಂದಿ ಪಂಚವಿಂಶತಿಯಲ್ಲಿ ಸ್ಪಷ್ಟೀಕರಣ ಮಾಡುವಾಗೇನೊಂದು ಸುಂದರ ಮಾತು ಹೇಳುತ್ತಾರೆ! ಗುರುಗಳು ಅಂತ ಅಂದರೆ ಬಾಲಬ್ರಹ್ಮಚಾರಿಗಳು ಅಥವಾ ಆತ್ಮಕಲ್ಯಾಣ ಮಾಡುವುದಕ್ಕೋಸ್ಕರ ಅವರು ಯಾವಾಗಲೂ ಧರ್ಮಧ್ಯಾನ ಮಾಡತಕ್ಕಂಥವರು.

'ದೇಹೇ ನಿರ್ಮಮತಾ, ಗುಣ ವಿನಯತಾ, ಶ್ರುತಾಭ್ಯಾಸತಾ,
ಚಾರಿತ್ರೋಜ್ವಲತಾ, ಮಹೋಪಶಮತಾ, ಸಂಸಾರ ನಿರ್ವೇಗತಾ

ಅಂತರ್ಬಾಹ್ಯ ಪರಿಗ್ರಹತ್ಯ ಜನತಃ, ಧರ್ಮಜ್ಞ ತಾ ಸಾಧುಣ

ಸಾಧೋಃ ಸಾಧು ಜನಸ್ಯ ರಕ್ಷಣಮಿದಂ ಸಂಸಾರ ವಿಚ್ಛೇದನಂ'

ಸಂಸಾರ ದುಃಖವನ್ನು ವಿಚ್ಛೇದ ಮಾಡಿ ಮುಕ್ತಿ ಕೊಡತಕ್ಕವರು ಯಾರಪ್ಪ? ಗುರುಗಳ ಲಕ್ಷಣವನ್ನು ತಿಳಿದುಕೊಳ್ಳಬೇಕು. ಬಿಜ್ಜಳ ಚರಿತ್ರೆಯಲ್ಲಿ ಬರೆದಿದ್ದಾನೆ— 'ಗುರುವಿಗೆ ಹೆಂಡರು ತನಗು ಹೆಂಡರು, ಗುರುವಿಗೆ ಸುತರು ತನಗು ಸುತರು, ಆದರೆ ಗುರುವಿನಲ್ಲೂ ಶಿಷ್ಯನಲ್ಲೂ ಅಂತರವೇನು? ಗುರು ಅಂದರೆ ಅವರು ತಪಶ್ಚರ್ಯ ಮಾಡಿ ಮನೆ, ಪರಿಗ್ರಹ ಯಾವುದೂ ಇರದೆ ಇಪ್ಪತ್ತ ನಾಲ್ಕು ಗಂಟೆಯೂ ಧರ್ಮ-ಧ್ಯಾನದಲ್ಲಿ ಇರತಕ್ಕವರು, ಅಹಿಂಸಾ ಸತ್ಯ ಮಹಾವ್ರತಗಳನ್ನು ಪಾಲಿಸತಕ್ಕವರು, ಅವರೇ ಗುರುಗಳು. ಗುರುಗಳು ಅಂದರೆ ಕೇವಲ ಒಂದೇನೋ ವೇಷಧಾರಣೆ ಅಲ್ಲ. ವೇಷಧಾರಣೆ ಮಾಡುತ್ತಿರುವುದರಿಂದ ಗುರುಗಳಾಗುವ ಹಾಗಿಲ್ಲ.'

ಆದಕ್ಕೋಸ್ಕರ ಗುರುಗಳದು ನಮ್ಮಲ್ಲಿ ಭಾರಿ ಮಹತ್ತ್ವವಿದೆ. ಹಿಂದೊಮ್ಮೆ ತಮಗೆ ನಾನು ಹೇಳಿದ್ದೆ. ಭದ್ರಬಾಹು ಶ್ರುತಕೇವಲಿಗಳು ಉಜ್ಜೈನಿಯಿಂದ ಹೊರಟರು, ದಕ್ಷಿಣಕ್ಕೆ ಹೋಗುತ್ತೇನೆ ಎಂದು ಹೇಳಿ. ದೊಡ್ಡ ದೊಡ್ಡ ಶ್ರೇಷ್ಠಿಗಳು ಶ್ರೀಮಂತರು ಎಲ್ಲರೂ ಸೇರಿಕೊಂಡರು 'ಸ್ವಾಮಿ ನಮ್ಮಲ್ಲಿ ಬೇಕಾದಷ್ಟು ಅನ್ನಧಾನ್ಯವಿದೆ' ಎಂದು ಆದರ ಮಾಡಿ ಅಡ್ಡ ಬಿದ್ದರು. 'ಹೋಗಲೇ ಬೇಕು, ಮತ್ತೆ ನೋಡುವ ಈ ಅಕಾಲ ಮುಗಿದ ಮೇಲೆ ನಾವು ಬರಬಹುದು' ಎಂದು ಹೇಳಿದಾಗ ಅವರು ಕಣ್ಣಲ್ಲಿ ನೀರು ದುರಿಸಿ ಏನು ಹೇಳುತ್ತಾರೆ ಗುರುಂವಿನಾಸರ್ವೇ ಭವಂತಿ ಪಶು ಸನ್ನಿಭಃ! ಶ್ರುತ ಕೇವಲಿ ಭದ್ರಬಾಹುಚರಿತದಲ್ಲಿದೆ ಈ ವಾಕ್ಯ. 'ನಾವೆಲ್ಲ ಪಶುಗಳಾಗುವೆವು, ತಾವು ಹೋಗಿ ಬಿಟ್ಟರೆ ನಮಗಾರು ಸಂರಕ್ಷಕರಿಲ್ಲ. ದನ ಕಾಯುವವನು ಇಲ್ಲದಿದ್ದರೆ ಆ ದನ ಗಳೆಲ್ಲ ಎಲ್ಲೆಲ್ಲೊ ಹೊಕ್ಕು ಗದ್ದೆಯ ಬೆಳೆಯನ್ನೆಲ್ಲ ತಿಂದು ಹಾಳು ಮಾಡಿ ಬಿಡುತ್ತವೆ. ನಮ್ಮ ಜೀವನವೆಲ್ಲ ಹಾಳಾಗಿಹೋಗುತ್ತವೆ. ತಾವು ಇದ್ದೇ ತೀರಬೇಕು ಎಂದು ಆಗ್ರಹ ಮಾಡಿದರು.

ಹೇಳುವ ತಾತ್ಪರ್ಯವೇನಪ್ಪ ಅಂದರೆ ಗುರುವಿನ ಸತ್ಸಂಗತಿಯಲ್ಲಿ ಪಾದಮೂಲ ದಲ್ಲಿ ಕುಳಿತುಕೊಂಡರೆ ಮೊದಲು ಜ್ಞಾನ ಸಿಗುತ್ತದೆ. ಕಿವಿಗೆ ಒಳ್ಳೆ ನಾಲ್ಕು ಮಾತು ಸಿಗುತ್ತದೆ. ಅದು ಸಾಮಾನ್ಯ ಅಲ್ಲ. ಕೆಟ್ಟ ಕೆಟ್ಟ ಮಾತುಗಳು ಮನೆಯಲ್ಲೂ ಇವೆ, ಕೆಟ್ಟ ಕೆಟ್ಟ ವಿಚಾರಗಳಿವೆ, ನಾನಾ ತರದ ಭಯಗಳುಂಟು. ಆದರೂ ಕೂಡ ಗುರು ಗಳ ಬಳಿ ಕುಳಿತುಕೊಂಡ ಮೇಲೆ ಒಳ್ಳೆ ಒಳ್ಳೆ ಮಾತು ಕೇಳಿ ಕಿವಿ ಪವಿತ್ರ ಆಗು ತ್ತದೆ. ಆತ್ಮ ಪವಿತ್ರ ಆಗುತ್ತಾನೆ. ಮೊಟ್ಟಮೊದಲೇನು ಲಾಭ ಅಂದರೆ ಜ್ಞಾನಾ-ರ್ಜನೆಯಾಗುತ್ತದೆ. ವಿವೇಕ ಸಿಗುತ್ತದೆ. ವಿವೇಕದಿಂದ ಪರಮ ವಿವೇಕ ಸಂಪನ್ನ ರಾಗುವುದರಿಂದ ದುಃಖ ದೂರವಾಗುತ್ತದೆ. ಆದ್ಯ ಶಂಕರಾಚಾರ್ಯರು ಹೇಳಿದ್ದಾರೆ- ಕ್ಷಣಮಪಿ ಸಜ್ಜನಸಂಗತಿರೇಕ ಭವತಿ ಭವಾರ್ಣವಕರಣೇ ನೌಕಾ. ಹೇಳಿದ್ದಾರೆ ಒಂದು ಕ್ಷಣ ಗುರುವಿನ ಬಳಿ ಕುಳಿತುಕೊಂಡು ಬಿಟ್ಟರೆ ದೋಣಿ ಹೇಗೆ ಈ ಬದಿಯಿಂದ ಆ ಬದಿಗೆ ಪಾರು ಮಾಡುತ್ತದೆ, ಸಂಸಾರಸಾಗರವನ್ನು ಪಾರುಮಾಡುವುದಕ್ಕೆ ಯಾರು ಸಹಾಯಕರು ಅಂದರೆ ಗುರುಗಳು.

ಪಂಚವಿಂಶತಿಯಲ್ಲಿ ಆಚಾರ್ಯರು ಏನು ಹೇಳುತ್ತಾರೆ ನೋಡಿ. 'ಪಾತಃಕಾಲ ಕರ್ತವ್ಯಂ ದೇವತಾ ಗುರುದರ್ಶನಂ, ಭಕ್ತ್ಯಾತದ್ವಂ ದನಾಕಾರ್ಯಾತ್ ಧರ್ಮಶ್ರುತಿ ಉಪಾಸಕೇ। ಪಶ್ಯಾತ್ ಅನ್ಯಾ ಕಾರ್ಯಾನಿ ಧರ್ಮಾರ್ಥ ಕಾಮೋಕ್ಷಣಾಂ ಧರ್ಮ ಪ್ರಕೀರ್ತಿತಃ'॥ ಧರ್ಮಶಾಸ್ತ್ರ ಉಪಾಸನೆ ಶ್ರಾವಕರಿಗೆ ಬೇಕು. ಪ್ರಾತಃಕಾಲ ಎದ್ದು ದೇವರದರ್ಶನ, ಗುರುದರ್ಶನ ಮಾಡೇ ತೀರಬೇಕು. ಈ ಭಕ್ತಿ ಪೂರ್ವಕವಾದಂಥ ವಂದನೆ ಮಾಡಿದರೆ, ಅನಂತರದಲ್ಲಿ ಸ್ವಾಧ್ಯಾಯ ಮಾಡಿದರೆ, ನಾಲ್ಕು ಪೂರುಷಾರ್ಥ ವನ್ನು ಸಿದ್ಧಿ ಪಡೆಯುತ್ತಾನೆ. ಧರ್ಮ ಅರ್ಥ ಕಾಮ ಮೋಕ್ಷ ಈ ಎಲ್ಲ ಸುಖ ಗಳನ್ನೂ ಪಡೆಯಲಿಕ್ಕೆ ಸಂಭವವಿದೆ. ಅದಕ್ಕೆ ಹೇಳಿದ್ದಾರೆ 'ಓಂಕಾರಂ ಬಿಂದು ಸಂಯು-ಕ್ತಂ ನಿತ್ಯಂ ಧ್ಯಾಯಂತಿ ಯೋಗಿನಃ, ಕಾಮದಂ ಮೋಕ್ಷದಂ ಚೈವ ಓಂಕಾರಾಯ ನಮೋನಮಃ' ಈ ನಾಲ್ಕು ಪುರುಷಾರ್ಥ ಸಿದ್ಧಿ ಆಗಬೇಕಾದರೆ ಓಂಕಾರ ಶಬ್ದ ಓಂ ಅಂದರೆ ಪ್ರಣವ. ಇದು ಯಾವಾಗಲೂ ತಾಜ ಇರುತ್ತದೆ ಹೊಸ ಹೊಸದು ಇರು ತ್ತದೆ. ನವೋನ್ಮೇಶನಾಗಿರುತ್ತಾನೆ ಅವನು ಆ ಓಂಕಾರದಿಂದ. ಅದಕ್ಕೆ ಇಲ್ಲಿ ಗುರು ಗಳ ದರ್ಶನ ಪ್ರತಿನಿತ್ಯ ಮಾಡುವುದು, ಭಕ್ತಿ ಮಾಡುವುದು, ಅವರಿಂದ ನಾಲ್ಕು ಧರ್ಮ ಶಾಸ್ತ್ರದ ವಾಕ್ಯಗಳನ್ನು ಕೇಳುವುದು ಇದು ಯಾವನು ಸಂಸಾರ ದುಃಖದಿಂದ ಪಾರಾ ಗುವನು ಅವನಿಗೆ ಸಂಭವವಿದೆ.

ಅಜ್ಞಾನಿ ಜೀವಿಗಳೇನಿವೆ ಅವು ಒಳ್ಳೆಯ ಮಾತುಗಳನ್ನು ಕೇಳುವ ಹಾಗಿಲ್ಲ. ಈಗೊಂದು ಸಿನಿಮಾ ಇದೆ, ನಾಟಕವಿದೆ, ತಮಾಷೆ ಇವೆ, ಸರ್ಕಸ್ಸಿದೆ, ಅಲ್ಲಿ ಹೋಗಿ ಕೂತುಕೊಳ್ಳುವುದು. ಇದರಿಂದ ಪಾಪ ಬುದ್ಧಿಯಲ್ಲಿ ಅವರ ಮನಸ್ಸು ಹೋಗುತ್ತದೆ. ಪುಣ್ಯ ಬುದ್ಧಿಯಲ್ಲಿ ಮನಸ್ಸು ಹೋಗುವಹಾಗಿಲ್ಲ ಹಿಂದಿನ ಜನ್ಮದಲ್ಲಿ ಕಟ್ಟಿ ಕೊಂಡಂಥ ಪಾಪ, ನರಕ ಬಂಧನವಾಗಿದ್ದರೆ ಮನಸ್ಸು ಹೋಗುವುದಿಲ್ಲ. ನರಕ, ದುರ್ಗತಿ ಇತ್ಯಾದಿಗಳಿಗೆ ಪ್ರಮಾಣವೇನಪ್ಪ ಅಂದರೆ ಕುಷ್ಟರೋಗಿಯಾಗಿ ನಾನಾ ತರದ ದುಃಖದಲ್ಲಿ ಒದ್ದಾಡುತ್ತಾನೆ. ರೈಲ್ವೆ ಸ್ಟೇಷನ್ನಿನಲ್ಲಿ, ಬಸ್‌ಸ್ಟ್ಯಾಂಡಿನಲ್ಲಿ ಅಯ್ಯೋ! ನನಗೆ ದುಡ್ಡು ಕೊಡಿ, ಬೆಳಗಿನಿಂದಲೂ ಊಟವಿಲ್ಲ ಎಂದು ಭಿಕ್ಷೆ ಬೇಡುತ್ತಾನೆ. ಕೈ ಕಡಿದಿದೆ, ಮಹಾರೋಗದಿಂದ ಕೈಯೆಲ್ಲ ಉದುರುತ್ತಿದೆ. ಇದು ಯಾವುದರ ಫಲ ಹೇಳಿ ನೋಡೋಣ? ಪಾಪದ ಫಲ!

ಅದಕ್ಕೋಸ್ಕರ ಶಾವೆಲ್ಲರೂ ದೇವ ಗುರು ಶಾಸ್ತ್ರಗಳ ಭಕ್ತಿ ಮಾಡಿ. ಒಳ್ಳೆ ಒಳ್ಳೆ ಧರ್ಮಶಾಸ್ತ್ರಗಳನ್ನು ಕೇಳಿಕೊಂಡು ಆ ಮಾತಿನಿಂದ ನಿಮ್ಮ ಜಡ ಬುದ್ಧಿಯನ್ನು ದೂರ ಮಾಡಿಕೊಳ್ಳಬೇಕು ಎಂದು ಪದ್ಮನಂದಿ ಪಂಚವಿಂಶತಿಯಲ್ಲಿ ಹೇಳಿದೆ. ಪುನಃ 'ಗುರೇರಿವ ಪ್ರಾಸಾದೇನ ಲಭ್ಯತೇ ಜ್ಞಾನಲೋಚನಂ' ಸೂರ್ಯನ ಪ್ರಕಾಶ ಇರಲಿ ಕ್ಕಾಗಿ ಗೂಬೆಗೆ, ಅಂಧನಿಗೆ ಬೆಳಕು ಕಾಣಿಸುವ ಹಾಗಿಲ್ಲ. ಈ ಅಜ್ಞಾನಿ ಜೀವಿಗಳಿಗೆ ಧರ್ಮ ದೇವ ಗುರು ಶಾಸ್ತ್ರಗಳು ಕಾಣಿಸುವ ಹಾಗಿಲ್ಲ. 'ಏನು ಮಾರಾಯ ಎಷ್ಟು ಬೆಳಕಿದೆ' 'ಏನು ಬೆಳಕು ಎಲ್ಲ ಕತ್ತಲಿದೆ' ಎಂದು ಅವನು ಹೇಳುವುದು. ಜನ್ಮಾಂಧ ನಿಗೆ ಹೇಗೆ ಎಲ್ಲ ಕತ್ತಲಿದೆ ಹಾಗೇ ಆ ಮಿಥ್ಯಾ ಜೀವಿಗಳಿಗೆ ಧರ್ಮ, ದೇವ, ಗುರು, ಶಾಸ್ತ್ರ ಇವಾವು ಹಿಡಿಸುವ ಹಾಗಿಲ್ಲ. ಪಾಪದ ಕೆಲಸ ಆಣಿವಾ, ಜಗಳವಾಗಲಿ ಕೂಡಲೆ

ಅಲ್ಲಿಗೆ ಹೋಗುತ್ತಾರೆ. ಒಳ್ಳೆ ಕೆಲಸ ನೋಡಪ್ಪ ಅಂದರೆ ನಮಗೆ ಸಮಯವಿಲ್ಲ ಎಂದು ಹೇಳುತ್ತಾರೆ.

ತಾತ್ಪರ್ಯವೇನಪ್ಪ ಅಂದರೆ ಗುರುಗಳ ಆಶೀರ್ವಾದದಿಂದ ಅವರ ಪ್ರಸಾದದಿಂದ ಜ್ಞಾನನೇತ್ರ ಅರಳುತ್ತದೆ, ಆಮೇಲೆ ಅವನಿಗೆ ಧರ್ಮಜ್ಞಾನ ಆಗುತ್ತದೆ, ಒಳ್ಳೆ ಬುದ್ಧಿ ಬರುತ್ತದೆ. ಅನಂತರ ಅದರಿಂದಲೇ ಸಮಸ್ತ ಪದಾರ್ಥಗಳ ಹಸ್ತರೇಖಾವತ್ ಜ್ಞಾನ ವಾಗುವುದು. ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಇವುಗಳನ್ನು ಪರ್ಯಾಯ ಸಹಿತ ಉತ್ಪಾದ ವ್ಯಯ ಧ್ರುವ್ಯಯುಕ್ತವಾಗಿ ತಿಳಿದುಕೊಳ್ಳುವನು. ಜೀವ ಯಾರು? ಪುದ್ಗಲವೇನು? ಧರ್ಮವೇನು? ಆರು ದ್ರವ್ಯಗಳನ್ನು ಯಥಾರ್ಥ ತಿಳಿದು ಕೊಳ್ಳುವ ಜ್ಞಾನ ಅವನಿಗೆ ಪ್ರಾಪ್ತಿಯಾಗುತ್ತದೆ. ಸಮ್ಯಗ್‌ದೃಷ್ಟಿ ಆಗುತ್ತಾನೆ.

ಯಾವನು ಗುರುಗಳಿಗೆ ಪೂಜಿಸುವ ಹಾಗಿಲ್ಲ, ದೇವರನ್ನು ಪೂಜಿಸುವ ಹಾಗಿಲ್ಲ, ಉಪಾಸನೆ ಮಾಡುವ ಹಾಗಿಲ್ಲ, ಹೇಗೆ ಸೂರ್ಯ ಪ್ರಕಾಶದಲ್ಲಿ ಗೂಬೆಗೆ ಬೆಳಕು ಕಾಣುವ ಹಾಗಿಲ್ಲ, ಕತ್ತಲಲ್ಲಿ ಕಾಣಿಸುವುದುಂಟು, ಹಾಗೇನೆ ಪಾಪದಲ್ಲಿ ಅವರಿಗೆ ರುಚಿ ಇರುತ್ತದೆ, ಪುಣ್ಯದಲ್ಲಿ ರುಚಿ ಬರುವ ಹಾಗಿಲ್ಲ, ಅದಕ್ಕೋಸ್ಕರ ದೇವ ಗುರು ಶಾಸ್ತ್ರವೇ ನಮ್ಮ ಕರಣ ಕಾರಣವಿದೆ. ನಿರಾಕಾರ ನಿರಂಜನ ಪರಮಾತ್ಮನನ್ನೂ ಒಂದು ಕ್ಷಣ ನಾವು ಧ್ಯಾನ ಮಾಡಿದರೆ ಅಸಂಖ್ಯಾತ ಕರ್ಮ ಕ್ಷಯ ಆಗುತ್ತವೆ. ಮತ್ತು ಜ್ಞಾನ, ಧ್ಯಾನ, ಸ್ವಾಧ್ಯಾಯಕ್ಕೋಸ್ಕರ ಸತ್ಸಂಗದಲ್ಲಿ ಕುಳಿತುಕೊಂಡು ಒಳ್ಳೆ ಧರ್ಮವನ್ನು ನಾವು ಕೇಳಿದರೆ ಎಷ್ಟೋ ಲಾಭವಾಗುತ್ತದೆ.

ವಕೀಲನಿಗೆ ಹತ್ತು ಸಾವಿರ ಕೊಡುವಿರಿ. ಅವನು ಒಂದು ಪಾಯಿಂಟು ಹೇಳಿ ದರೆ, ಕೇಸು ಗೆದ್ದ ಮೇಲೆ ವಕೀಲನನ್ನು ನೀವು ಹೊಗಳುತ್ತೀರಿ. ಏನು ವಕೀಲ! ಭಾರಿ ಬುದ್ಧಿವಾನ! ಒಂದು ಪಾಯಿಂಟು ಹೇಳಿಬಿಟ್ಟ ಈ ಕೇಸು ಗೆದ್ದುಬಿಟ್ಟೆ ನಾನು! ಎಂದು ಕುಷಿ ಮಾಡುತ್ತೀರಿ. ಆನಂದ ಪಡೆಯುತ್ತೀರಿ. ಯಾವನು ಆತ್ಮಕಲ್ಯಾಣ ಮಾಡಿಕೊಂಡು ಆ ಕರ್ಮಕ್ಷಯ ಮಾಡುವಂಥ ಪಾಯಿಂಟನ್ನು ಹೇಳಿಕೊಟ್ಟರೆ 'ನೋಡಪ್ಪ, ಈ ಪಾಯಿಂಟಿನಿಂದಲೆ ನಿನ್ನ ಆತ್ಮ ಪರಮಾತ್ಮ ಆಗುತ್ತಾನೆ. ಇದರಿಂದ ನಿನ್ನ ಕರ್ಮಕ್ಷಯ ಆಗುತ್ತದೆ. ಪಾಪಕ್ಷಯ ಆಗುತ್ತದೆ' ಎಂದು ಯಾರಾದರೂ ಹೇಳಿದರೆ ಎಷ್ಟು ಉಪಕಾರ ಆಗುವುದು ಹೇಳಿ.

ಶ್ರೀರಾಮ ಅಯೋಧ್ಯೆಗೆ ಬಂದ ಮೇಲೆ ಯಾರು ಯಾರು ಸಹಾಯ ಮಾಡಿ ದ್ದರು ಅವರಿಗೆಲ್ಲ ಯಾರಿಗೆ ಗದ್ದೆ, ಯಾರಿಗೆ ರಾಜ್ಯ, ಯಾರಿಗೇನುಬೇಕು ಅದನ್ನೆಲ್ಲ ಕೊಟ್ಟನು. ಹನುಮಾನ್ ಅಲ್ಲಿ ಕುಳಿತಿದ್ದ, ಲೀಸ್ಟನಲ್ಲಿ ನನ್ನಮ ಹೆಸರಿದೆಯೋ ಇಲ್ಲವೋ ಎಂದು ನೋಡಿದ ಎದ್ದು ಬಿಟ್ಟ ಅವನು! ಹನುಮಾನ್ ಎದ್ದೇ ನಿಂತುಬಿಟ್ಟ! ನನ್ನ ಹೆಸರೇಕಿಲ್ಲ ಅಂತ ಕೇಳಿದ ರಾಮನನ್ನು ಧೈರ್ಯದಿಂದ ಕೇಳಿಬಿಟ್ಟ. ಸಾವಿ ರಾರು ಜನರಿಗೆಲ್ಲ ಏನೇನೋ ಕೊಟ್ಟಿರಿ. ಲಂಕೆಯಲ್ಲಿ ಇದ್ದಾಳೆ ಎಂದು ಹೇಳಿ ಸೀತೆಯ ಸಮಾಚಾರ ಕೊಟ್ಟವನು ನಾನು. ಸೇತುವೆ ಕಟ್ಟಿದ್ದೇನೆ. ನಾನು ಎಷ್ಟು ದೊಡ್ಡ ಸಹಾಯ ಮಾಡಿದ್ದೇನೆ. ಈಗಲೂ ಪಾದಚರಣದಲ್ಲಿ ಕುಳಿತು ಇದ್ದೇನೆ! ಉಳಿದವರಿ ಗೆಲ್ಲ ಏನೇನೋ ದಾನಕೊಟ್ಟಿರಿ! ನನಗೇನೂ ಕೊಡಲಿಲ್ಲ! ನನ್ನ ಹೆಸರೇ ಇಲ್ಲವಲ್ಲ!

ಎರಡನೆಯ ಲೀಸ್ಟಿನಲ್ಲಿ ನನ್ನ ಹೆಸರು ಬರುತ್ತದೆಯೇನು ? ಎಂದು ಕೇಳಿದ. ಲಿಸ್ಟಿನಲ್ಲಿ ನಿನ್ನ ಹೆಸರಿಲ್ಲ ಎಂದು ಹೇಳಿ ಬಿಟ್ಟ ರಾಮ. 'ಅಯ್ಯೋ! ಮಹಾರಾಯ ಎರಡನೆಯ ಲಿಸ್ಟಿನಲ್ಲೂ ನನ್ನ ಹೆಸರಿಲ್ಲವೆ' ವಾಲ್ಮೀಕಿ ಬಹಳ ಸುಂದರ ಬರೆದಿದ್ದಾರೆ. ಭಗವಾನ್ ರಾಮ ಹನುಮಾನನಿಗೆ ಹೇಳುತ್ತಾರೆ 'ಹೇ ಹನುಮಾನ್ ನೀನೇನು ನನ್ನ ಮೇಲೆ ಉಪಕಾರ ಮಾಡಿದ್ದೀ ಅದು ನಾನು ಮರೆಯಲಾರೆ. ಮತ್ತು ನಿನಗೆ ನಾನು ವಾಪಸ್ಸು ಕೊಡಲಾರೆ' ಎಂದು ಹೇಳಿಬಿಟ್ಟ. 'ಎಲ್ಲರಿಗೂ ಕೊಡುತ್ತಿರುವಿರಿ! ನನಗೇಕೆ ಇಲ್ಲ?'

'ಎಲ್ಲಾದರೂ ನಾನು ನಿನ್ನ ಉಪಕಾರವನ್ನು ವಾಪಸ್ಸು ಕೊಡಬೇಕು ಎಂದು ಮನಸ್ಸಿನಲ್ಲಿ ಇಟ್ಟುಕೊಂಡರೆ, ಸೀತಾ ವಿರಹದಿಂದ ನನಗೆ ಹೇಗೆ ಹದಿನಾಲ್ಕು ವರ್ಷ ದುಃಖ ಬಂದಿತು, ನಿನಗೂ ಕೂಡ ದುಃಖ ಬರಲಿ, ಕಷ್ಟ ಬರಲಿ ಆಮೇಲೆ ಸಹಾಯ ಮಾಡುವ ಎಂಬ ಮನಸ್ಸಾಗುವುದು. ನಾನು ಒಂದೇ ಮನಸ್ಸಿನಲ್ಲಿಟ್ಟುಕೊಂಡಿರುವೆನು. ಏನಪ್ಪ ಅಂದರೆ ಯಾವ ಭವದಲ್ಲೂ ನಿನಗೆ ದುಃಖ ಬರಬಾರದು ಎಂದು ಆಶೀರ್ವಾದ ಕೊಡುತ್ತೇನೆ' ಎಂದರು. ಆಗ ಹನುಮಾನ್ ಕುಣಿಯಲಿಕ್ಕೆ ಶುರುಮಾಡಿದ. ಆದರೆ ನಿನ್ನ ಉಪಕಾರ ನನ್ನಲ್ಲೇ ಜೀರ್ಣವಾಗಲಿ. ಇದು ನಿನ್ನ ಮುಕ್ತಿಗೆ ಕಾರಣವಾಗಲಿ ಅಂತ ಹೇಳಿ ಆಶೀರ್ವಾದ ಕೊಡುತ್ತೇನೆ' ಎಂದು ಶ್ರೀರಾಮ ಹೇಳಿದನು. ಆಗ ಹನುಮಾನ್ ಎಲ್ಲರಿಗೂ ಹೇಳಿದನು. ನಿಮ್ಮೆಲ್ಲರಿಗೂ ಮನೆ, ಮಠ, ಹಣವೇನೇನೋ ಸಿಕ್ಕಿತು. ನನಗೆ ಆಶೀರ್ವಾದ ಸಿಕ್ಕಿತು! ನಿಮಗಾರಿಗೂ ಆಶೀರ್ವಾದ ಸಿಗಲಿಲ್ಲ!' 'ಸ್ವಾಮಿ, ನಮಗೂ ಆಶೀರ್ವಾದ ಕೊಡಬೇಕು' ಅಂತ ಉಳಿದವರು ಕೇಳಿದರು. ನೀವು ತೆಗೆದುಕೊಂಡು ಬಿಟ್ಟಿರುವಿರಿ! ನಿಮಗೇನೂ ಆಶೀರ್ವಾದವಿಲ್ಲ' ಏನು ತಾತ್ಪರ್ಯ ಅಂದರೆ ಆ ಹನುಮಾನ್ ಇಷ್ಟು ಭಕ್ತ, ಇಂಡಿಯಾದ ಮೂಲೆಮೂಲೆಯಲ್ಲಿ, ಗ್ರಾಮ ಗ್ರಾಮ ದಲ್ಲಿ ಅವನ ದೇವಸ್ಥಾನವಿದೆ. ನೋಡಿ ಅವನು ರಾಮ ಭಕ್ತ. ರಾಮನ ದೇವಸ್ಥಾನ ವಿಲ್ಲ. ಭಕ್ತನ ದೇವಸ್ಥಾನಗಳಿವೆ. ಅದಕ್ಕೆ ಮೊದಲು ನೀವು ಭಕ್ತರಾಗಬೇಕು. ಒಂದೇ ಸಲ ಭಗವಾನ್ ಆಗಲಿಕ್ಕೆ ಹೊರಟಿದ್ದಾರೆ ಎಲ್ಲರೂ. ಜನ ಸ್ವಲ್ಪ ಓದಿದ ಕೂಡಲೇ ಸ್ವಲ್ಪ ಧರ್ಮ ಕಲಿತಕೂಡಲೆ ಸ್ವಾಮಿಗಳ ತಲೆ ಮೇಲೆ ಹತ್ತಿ ಹೊಡೆಯುವುದು ನಾವು ದೊಡ್ಡವರಾದೆವು ಅಂತ ಹೇಳಿ.

ಅದಕ್ಕೆ ನಾನು ಹೇಳುವುದೇನಪ್ಪ ಅಂದರೆ ವೀತರಾಗ ಗುರು ಸಂಸ್ಥೆಯಿಂದಲೇ ನಮ್ಮ ದೇಶ ಉತ್ಥಾನವಾಗಿದೆ. ಮಧ್ಯೆ ನಮ್ಮ ಗುರುಗಳ ಸನ್ನಿಧಿಯಲ್ಲಿ ಇರತಕ್ಕಂಥ ಪ್ರತಿಯೊಬ್ಬ ಗೃಹಸ್ಥರೂ ಗುರುಗಳ ಹಾಗೇನೆ ಈ ದೇಶದಲ್ಲಿದ್ದರು. ಇದಕ್ಕೆ ಪ್ರಮಾಣ ವೇನಪ್ಪ ಅಂದರೆ ರವೀಂದ್ರನಾಥ ಠಾಗೂರರವರೂ ಚೀನದೇಶಕ್ಕೆ ಹೋಗಿದ್ದರು. ಅವರ ಗಡ್ಡ ಇದೆಲ್ಲ ನೋಡಿ ಅವರ ವೇಷ ಭೂಷಣದಲ್ಲಿ ಚೀನದವರು ಅವರ ಪಾದ ಮುಟ್ಟ ಲಿಕ್ಕೆ ಶುರು ಮಾಡಿದ ಕೂಡಲೇ ನನ್ನ ಕಾಲು ಮುಟ್ಟಬೇಡಿ ಅಂತ ಹೇಳಿದರು ರವೀಂದ್ರ ನಾಥ ಠಾಗೂರರು. 'ಏಕೆ ಕಾಲು ಮುಟ್ಟಬೇಡಿ!' 'ನಾನು ಸಾಧುವಲ್ಲ ನಾನೂ ನಿಮ್ಮ ಹಾಗೇನೆ' 'ಇಲ್ಲ ಪ್ರತಿಯೊಬ್ಬ ಭಾರತೀಯನನ್ನೂ ಸನ್ಯಾಸಿ ಅಂತ ತಿಳಿದು ಕೊಳ್ಳುತ್ತೇವೆ'. ಅದಕ್ಕೆ ರವೀಂದ್ರನಾಥ ಠಾಕೂರರು ಅಳಲಿಕ್ಕೆ ಶುರು ಮಾಡಿದರು! ಕಣ್ಣಲ್ಲಿ ನೀರು ಬರಲಿಕ್ಕೆ ಶುರುವಾಯಿತು. ಏನುಸ್ವಾಮಿ, ನನಗೆ ದುಃಖ ಆಗುತ್ತದೆ.

ಈಗ ನಮ್ಮ ದೇಶದ ಪ್ರತಿಯೊಬ್ಬ ಮನುಷ್ಯನನ್ನೂ, ಗೃಹಸ್ಥನನ್ನೂ ನೀವು ಗುರುಗಳ ಹಾಗೆ ತಿಳಿದು ಕೊಳ್ಳುತ್ತೀರಿ ಅಂದ ಮೇಲೆ ಈ ನಮ್ಮ ದೇಶದಲ್ಲಿ ಆ ತರದ ಆಚರಣೆ ಮಾಡತಕ್ಕಂಥ ಒಳ್ಳೆಯ ಜನ ಇಲ್ಲವಲ್ಲ, ನಮ್ಮ ದೇಶದಸ್ಥಿತಿ ಈ ತರ ಉಳಿ ವಿಲ್ಲ ಅಂತ ಹೇಳಿ ನನ್ನ ಕಣ್ಣಲ್ಲಿ ನೀರು ಬರುತ್ತದೆ ಎಂದು ಹೇಳಿದರು.

ಹೇಳುವ ತಾತ್ಪರ್ಯವೆಂದರೆ ಈ ದೇಶದಲ್ಲಿ ಇರತಕ್ಕಂಥ ಪ್ರತಿಯೊಬ್ಬ ಗ್ರಹಸ್ಥನೂ ಹಿಂದೆ ಒಳ್ಳೆಯ ವಿಚಾರವಂತ, ಒಳ್ಳೆ ನೀತಿವಂತ, ಒಳ್ಳೆ ನ್ಯಾಯವಂತನಾಗಿದ್ದ. ಈಗ ಕಲಿಯುಗದಲ್ಲಿ ಸ್ವಾತಂತ್ರ್ಯ ಸಿಕ್ಕಿದ ಮೇಲೆ ಎಷ್ಟೋ ಆಚಾರ ವಿಚಾರ ನಷ್ಟವಾಗಿದೆ. ಅದಕ್ಕೆ ನಾನು ಹೇಳುವುದೇನಪ್ಪ ಅಂದರೆ ತಾವು ಒಳ್ಳೆ ಆಚಾರ ವಿಚಾರ ಇಟ್ಟುಕೊಳ್ಳ ಬೇಕು. ಆಚಾರ ವಿಚಾರದಿಂದಲೇ ನಮ್ಮ ದೇಶದ ಸಂಸ್ಕೃತಿ ಧರ್ಮ ಎಲ್ಲ ಉತ್ಥಾನಕ್ಕೆ ಬರುತ್ತದೆ. ಸುಖ-ಶಾಂತಿ ಇದ್ದರೆ ಕೇವಲ ಒಳ್ಳೆ ಆಚಾರದಿಂದ ಇದೆ. ಹೆಚ್ಚು ಹೇಳದೆ ಇವೇ ಅಪೇಕ್ಷೆ ಪಡುತ್ತೇನೆ. ಈಗ ತಾವು ಕುಳಿತಂಥ ಸ್ತ್ರೀ-ಪುರುಷರೆಲ್ಲ ಆಚರಣೆ ಇಟ್ಟುಕೊಂಡು ದೇವ ಗುರು ಶಾಸ್ತ್ರ ಭಕ್ತಿಮಾಡಿ ಧರ್ಮ ಧ್ಯಾನವನ್ನು ಮಾಡಬೇಕು. ಸತ್ತ ಕೂಡಲೆ ಯಾವುದು ವಸ್ತು ನಮ್ಮ ಜೊತೆಯಲ್ಲಿ ಬರುವ ಹಾಗಿಲ್ಲ. ಈ ದೇಹ ವನ್ನು ಹೂಳಿಬಿಡುವರು. ಈ ಸುಂದರ ಒಡವೆ, ವಸ್ತ್ರ ಇಲ್ಲೇ ಕಿತ್ತುಕೊಂಡು ಬಿಡು ತ್ತಾರೆ. ಶರೀರವನ್ನು ಸುಟ್ಟುಬಿಡುತ್ತಾರೆ. ಇಂಥ ನಿರುಪಯೋಗಿಯಾದ ಹಾಗೂ ಕೊಳಕಾದ ದೇಹವನ್ನು ರಾತ್ರಿ-ಹಗಲು ನಾವು ಪ್ರೀತಿ ಮಾಡಿ ದೇವ ಗುರು ಶಾಸ್ತ್ರ ಇವನ್ನು ಮರೆತು ಬಿಟ್ಟರೆ ನಮಗೆ ದುರ್ಗತಿಯೇ ನಿಶ್ಚಿತ.

## 4. ಸ್ವಾಧ್ಯಾಯವೂ ಒಂದು ತಪಸ್ಸು.

ಔಷಧಿ ಸೇವನೆಯಿಂದ ನಮ್ಮ ರೋಗ ವಾಸಿಯಾಗುವುದು. ಹಾಗೇನೆ ಶಾಸ್ತ್ರ ಗಳನ್ನು ಓದುತ್ತಿರುವುದರಿಂದ ಕೇಳುತ್ತಿರುವುದರಿಂದ ನಮ್ಮ ಮನಸ್ಸು ಜ್ಞಾನಮಯ ವಾಗುವುದು, ಇದರಿಂದ ಆತ್ಮ ಶಾಂತಿಯೂ ಆಗುವುದು. ಪ್ರತಿನಿತ್ಯ ಸ್ವಾಧ್ಯಾಯ ಮಾಡುವುದರಿಂದ ಏನು ಲಾಭವಿದೆ? ಏಕೆ ಮಾಡಬೇಕು ಎಂಬುದಕ್ಕೆ ಆಚಾರ್ಯರು ಒಂದು ಮಾತು ಹೇಳುತ್ತಾರೆ. ಅದರಿಂದ ಏನೇನು ಲಾಭಗಳಿವೆ ಅದನ್ನು ನಾನು ನಿಮಗೆ ತಿಳಿಸುತ್ತೇನೆ. ನೋಡಿ ಕುಂದಕುಂದಾಚಾರ್ಯರು ಹೇಳಿದ್ದಾರೆ– 'ಸುತ್ತಂ ಜಾಣಮಾಣು.'

ಸೂತ್ರಗಳನ್ನು ಶಾಸ್ತ್ರದ ವಾಕ್ಯಗಳನ್ನು ನಾವು ಚೆನ್ನಾಗಿ ಅರಗಿಸಿಕೊಂಡರೆ, ತಿಳಿದುಕೊಂಡುಬಿಟ್ಟರೆ ಭವಭವಾಂತರದ ದುಃಖಗಳೆಲ್ಲ ದೂರವಾಗಲಿಕ್ಕುಂಟು. ಹೇಗೆ ಸೂಜಿ ಚಿಕ್ಕದಿರುತ್ತದೆ. ಅದು ಕಳೆದುಹೋದರೆ ಸಿಗುವುದು ಕಷ್ಟ, ಅದಕ್ಕೆ ಸೂತ್ರ ಪೋಣಿಸಿದ್ದರೆ ಅದು ಕೂಡಲೆ ಸಿಗುತ್ತದೆ. ಹಾಗೇ ಆತ್ಮ ಸಂಸಾರದಲ್ಲಿ ಕಳೆದು ಹೋಗ ಬಾರದು ಎನ್ನುವುದಾದರೆ ಪ್ರತಿನಿತ್ಯ ಏನೇ ಆಗಲಿ ಸ್ವಾಧ್ಯಾಯವನ್ನು ಪ್ರಾತಃಕಾಲ ಎದ್ದ ಕೂಡಲೇ ಮಾಡುತ್ತೀರಬೇಕು. ಸ್ವಾಧ್ಯಾಯ ಮಾಡದಿದ್ದರೆ ಮನುಷ್ಯನಿಗೆ ಜೀವನ ದಲ್ಲಿ ಈ ಧರ್ಮದ ಯಥಾರ್ಥವಾದ ಜ್ಞಾನ ಆಗುವ ಹಾಗಿಲ್ಲ. ಕೇವಲ ಒಂದು

ದೇವರ ಪೂಜೆ ಮತ್ತು ದರ್ಶನ ಮಾಡಿಕೊಂಡರೇನೆ ಕರ್ಮಕ್ಷಯ ಆಗುವುದಿಲ್ಲ. 'ಸ್ವಾಧ್ಯಾಯಂ ಯದಿ ನಿರಂತರಂ ಕರೋತಿ.' ಪ್ರತಿ ನಿತ್ಯ ನಿರಂತರ ಸ್ವಾಧ್ಯಾಯ ಮಾಡಿದರೆ ಕರ್ಮಕ್ಷಯ ಆಗುವುದೆಂದು ಹೇಳುತ್ತಾರೆ. ಸ್ವಾಧ್ಯಾಯದಿಂದ ಕರ್ಮಕ್ಷಯ ಆಗುವುದು ಮಾತ್ರವಲ್ಲದೆ ಜಿನೇಂದ್ರರ ಸೂತ್ರಗಳು ಸಮ್ಯಗ್ದರ್ಶನಕ್ಕೆ ಕಾರಣವಾಗುವುವು.

ಸ್ವಾಧ್ಯಾಯದಿಂದ ಅಂತರಂಗದಲ್ಲಿರುವ ದರ್ಶನಮೋಹನೀಯ, ಮಿಥ್ಯಾತ್ವಾದಿಗಳು ಕ್ಷಯವಾಗುವುವು, ಕ್ಷಯೋಪಶಮವಾಗುವುವು. ಮತ್ತು ಬಹಿರಂಗದಲ್ಲಿ ಈ ಜಿನೇಂದ್ರ ಭಗವಾನರ ವಾಣಿಯಿಂದ ನಮಗೆ ಹೇಗೆ ಔಷಧಿಯಿಂದ ನಮ್ಮ ರೋಗಗಳು ಶಾಂತವಾಗುತ್ತವೆ ಹಾಗೆ ಜಿನವಾಣಿಯ ಸೇವನೆಯಿಂದ ನಮ್ಮ ಮನಸ್ಸೂ ಶಾಂತವಾಗುವುದು. ಚಂದನದ ಎಣ್ಣೆ ಹಚ್ಚಿಕೊಂಡರೆ ಶರೀರಕ್ಕೆ ಶೀತಲತೆ ಸಿಗುತ್ತದೆ ಅಂದಮೇಲೆ ಈ ಭಗವಂತನ ವಾಣಿಯನ್ನು ಸೇವನೆ ಮಾಡಿದ ಮೇಲೆ ನಮ್ಮ ಆತ್ಮನಿಗೆ ಏಕೆ ಶಾಂತಿ ಸಿಗುವುದಿಲ್ಲ?

ಉಪವಾಸ ಏಕೆ ಮಾಡಬೇಕು, ಯಾವ ವಿಧಿಯಿಂದ ಮಾಡಬೇಕು, ಯಾವ ಕ್ರಮದಿಂದ ಮಾಡಬೇಕು, ಯಾವ ವಸ್ತುಗಳನ್ನು ತಿನ್ನಬಾರದು. ಈ ಜ್ಞಾನಕ್ಕೆ ಮೂಲ ಕಾರಣ ಸ್ವಾಧ್ಯಾಯ ತಾನೆ? ಶಾಸ್ತ್ರ ಓದುವುದರಿಂದ ತಾನೆ? ಪೂಜೆ ಮಾಡಬೇಕಾದರೂ ಈ ಪೂಜೆ ನಾವು ಹೇಗೆ ಮಾಡಬೇಕು, ದೇವರಿದಿರು ಹೇಗೆ ಕುಳಿತುಕೊಳ್ಳಬೇಕು, ಹೋಗಿ ಎರಡು ಅಕ್ಕಿಕಾಳು ಏರಿಸ ಬರುವುದಕ್ಕೂ ಒಂದು ವಿಧಿ ಇದೆ. ತಾವು ಎಲ್ಲಾದರೂ ನೆಂಟರ ಮನೆಗೆ ಹೋದರೆ, ನಾವು ಹೋಗಲಿಕ್ಕಿದೆ ಹೋಗಿ ಬರುತ್ತೇವೆ ಎಂದು ಪ್ರಣಾಮ ಮಾಡುತ್ತೀರಿ. ಆಗಲಿ ಆಗಲಿ ಹೋಗಿ ಬನ್ನಿ ಅನ್ನುತ್ತಾರೆ. ಭಗವಂತನ ದರ್ಶನಕ್ಕೆ ಹೋದಾಗಲೂ ಕೂಡ 'ಹೇ ಭಗವಾನ್ ನಾನು ಈಗ ದರ್ಶನ ಮಾಡಿದೆ, ನನಗೆ ಮೋಹಕ್ಷಯವಾಗಲಿ, ನೀನೂ ಮೋಹಕ್ಷಯ ಮಾಡಿರುವೆ. ನಿನ್ನಿಂದಲೇ ನನಗೆ ಸನ್ಮಾರ್ಗ ಸಿಕ್ಕಿದೆ. ನಿನ್ನಿಂದಲೇ ನನಗೆ ಚಂದ್ರನ ಕಿರಣಗಳ ಶೀತಲತೆ ಪ್ರಾಪ್ತವಾಗಿದೆ. ನಿನ್ನ ಅಪ್ಪಣೆ ತೆಗೆದುಕೊಳ್ಳುತ್ತೇನೆ'. *ದೇವರದೂ ಅಪ್ಪಣೆ ತೆಗೆದುಕೊಳ್ಳಬೇಕು. ಗುರುಗಳದು ಅಪ್ಪಣೆ ತೆಗೆದುಕೊಳ್ಳುವರು. ನೆಂಟರ ಮನೆಯಲ್ಲೂ ನಾವು ಹೊರಟಾಗ ಆಗಲಿ ಹೋಗಿ ಬನ್ನಿ, ಮತ್ತೆ ಬೇಗ ಬರಬೇಕು ಅನ್ನುತ್ತಾರೆ. ದೇವರು ಮಾತನಾಡುವ ಹಾಗಿಲ್ಲ. ಎರಡೂ ಭಾಷೆ ನಾವೇ ಮಾತನಾಡುವುದು. ಹೋಗುತ್ತೇವೆ ಎಂದು ನಾವೇ ಹೇಳುವುದು, ಪುನಃ ಬರುತ್ತೇವೆ ಎಂದು ನಾವೇ ಹೇಳುವುದು, ಇದನ್ನು ಪ್ರತಿಷ್ಠಾತಿಲಕ ಪಂಚಕಲ್ಯಾಣದಲ್ಲಿ ನೇಮಿಚಂದ್ರರು ಬರೆದಿದ್ದಾರೆ. ಇದನ್ನು ಪ್ರತಿ ನಿತ್ಯ ಅನ್ನುವುದುಂಟು.

---

*ಮೋಹಧ್ವಾಂತ ವಿದಾರಣಂ ವಿಶದ ವಿಶ್ವೋದ್ಭಾಸಿ ದೀಪ್ತಿಶ್ರಿಯಂ ।
ಸನ್ಮಾರ್ಗ ಪ್ರತಿಭಾಸಕಂ ವಿಬುಧಸಂದೋಹಾಮೃತಾ ಪಾದಕಮ್ ॥
ಶ್ರೀಪಾದಂ ಜಿನಚಂದ್ರ ಶಾಂತಿ ಶರಣಂ ಸದ್ಭಕ್ತಿಮಾನೌಮಿತೇ ।
ಭೂಯಾಸ್ತಾಪಹರಸ್ಯದೇವ! ಭವತೋ ಭೂಯಾತ್ ಪುನರ್ದರ್ಶನಂ ॥
—ಪ್ರತಿಷ್ಠಾತಿಲಕ 1–6 ಪು. 24

ದೇವರ ದರ್ಶನ ಮಾಡುವುದಕ್ಕೂ ಒಂದು ವಿಧಿಯಿದೆ. ಕ್ರಮ ತಿಳಿದುಕೊಂಡು ಮಾಡಬೇಕು. ಹೋದ, ಕೈಕಾಲು ಬಿದ್ದು ಬಂದುಬಿಟ್ಟ. ದೇವರಿಗೆ ಯಾವ ರೀತಿ ನಮಸ್ಕಾರ ಮಾಡಬೇಕು, ಪಂಚಾಂಗ ನಮಸ್ಕಾರ ಇವೆಲ್ಲ ಇವೆ. ಅಂಚೇಮಿ ಅಂದರೆ ಕಮಲದ ಹೂವಿನ ಹಾಗೆ ಕೈ ಮಾಡಬೇಕು, ಪೂಜೇಮಿ ಅಂದರೆ ಅತ್ಯಂತ ಪೂಜ್ಯ ಭಾವನೆಯಿಟ್ಟುಕೊಂಡು ಭಗವಂತನಿಗೆ ನಮಸ್ಕಾರ ಮಾಡಬೇಕು. ವಂದಾಮಿ ಅಂದರೆ ತಲೆ ಬಗ್ಗಿಸಬೇಕು, ನಮಸ್ಸಾಮಿ ಅಂದರೆ ಪಂಚಾಂಗ ನಮಸ್ಕಾರ ಮಾಡಬೇಕು. ಕುಂದ ಕುಂದಾಚಾರ್ಯರು ಎಷ್ಟು ಸುಂದರವಾದ ಮಾತುಗಳನ್ನು ಹೇಳಿದರು. ಒಂದೊಂದು ಶಬ್ದದಲ್ಲೂ ಎಷ್ಟು ಗೂಢಾರ್ಥವಿದೆ. ಅಂಚಧಾತು ವ್ಯಾಕರಣದಲ್ಲಿ ಪೂಜಾರ್ಥದಲ್ಲಿದೆ. ಕಮಲದ ಹೂವಿನ ಹಾಗೆ ಕೈಮಾಡಿ, ಪೂಜೇಮಿ ಅತ್ಯಂತ ಪೂಜ್ಯ ಭಾವನೆಯನ್ನು ಆ ಭಗವಂತನ ಬಗ್ಗೆ ಇಟ್ಟುಕೊಳ್ಳಬೇಕು. ವಂದಾಮಿ ಚೆನ್ನಾಗಿ ತಲೆ ಬಾಗಿಸಬೇಕು. ನಮಸ್ಸಾಮಿ ಪಂಚಾಂಗ ನಮಸ್ಕಾರ ಮಾಡಬೇಕು. ಅಂಗಗಳನ್ನು ನೆಲಕ್ಕೆ ಸ್ಪರ್ಶಮಾಡಿ ನಾವು ದೇವರಿಗೆ ನಮಸ್ಕಾರ ಮಾಡಬೇಕು. ಈ ಪರಿಜ್ಞಾನ ಎಲ್ಲಿಂದ ಆಗುವುದು ಅಂದರೆ ಸ್ವಾಧ್ಯಾಯದಿಂದ.

ಯಾವುದಾದರೂ ಒಂದು ಗ್ರಂಥವನ್ನಿಟ್ಟುಕೊಂಡು ಪರಿಪೂರ್ಣವಾಗಿ ಅದರ ಸ್ವಾಧ್ಯಾಯ ಮಾಡಬೇಕು. ಆಚಾರ್ಯರೇನು ಹೇಳುತ್ತಾರೆ ಅಂದರೆ ಸಮಸ್ತ ವ್ರತಗಳ ಮೂಲವ್ರತ ಸ್ವಾಧ್ಯಾಯ. ಎಷ್ಟು ವ್ರತಗಳಿವೆ ಅವುಗಳಲ್ಲಿ ಮುಖ್ಯ ವ್ರತ ಸ್ವಾಧ್ಯಾಯ. ನೀವು ನೂರಾರು ವ್ರತ ಮಾಡಿದಿರಿ, ನೋಂಪಿ ಮಾಡಿದಿರಿ, ಎಲ್ಲ ಮಾಡಿದಿರಿ, ಸ್ವಾಧ್ಯಾಯ ಮಾಡದೆ ಇದ್ದರೆ ಅವುಗಳಿಂದೇನೂ ಲಾಭವಿಲ್ಲ. ಅವುಗಳನ್ನು ಹೇಗೆ ಮಾಡುವುದು ಎಂಬ ಪರಿಜ್ಞಾನಬೇಕು. ಕ್ರಿಯಾಕಾಂಡವನ್ನು ನಾವು ವಿಧಿವತ್ ಮಾಡದಿದ್ದರೆ ಪ್ರಯೋಜನವೇನು? ಗಿಡವನ್ನು ನೆಡುವಾಗ ಬೇರು ಮೇಲೆ ಮಾಡಿ ನೆಟ್ಟರೇನಾಗುತ್ತದೆ ಹೇಳಿ? ಒಕ್ಕಲಿಗ ತನ್ನ ಮಗನಿಗೆ ಗಿಡವನ್ನು ಹೀಗೇ ಹಾಕಬೇಕು ಎಂಬುದನ್ನು ಕಲಿಸುತ್ತಾನೆ. ವಿಧಿ ವಿಧಾನಗಳನ್ನು ಕಲಿಯದೆ ಮಾಡಿದರೆ ಲಾಭ ಆಗುವ ಹಾಗಿಲ್ಲ. ಅನುಭವ ಪ್ರಾಪ್ತಿಯಾಗಬೇಕಾದರೆ ಸ್ವಾಧ್ಯಾಯಬೇಕು.

ಚೀಣಾ ದೇಶಕ್ಕೆ ಮಣ್ಣಿನ ಪಾತ್ರೆ ಮಾಡುವುದನ್ನು ಕಲಿಯಲು ಒಬ್ಬ ಹೋದನು. ಹನ್ನೆರಡು ವರ್ಷ ನಿಂತನು. ಅದನ್ನು ಹೇಗೆ ಮಾಡಬೇಕು? ಪರಿಪಕ್ವ ಮಾಡಬೇಕು. ಅದನ್ನು ಬೇಯಿಸಬೇಕು, ಅಗ್ನಿಯಲ್ಲಿ ಸಂಸ್ಕಾರ ಮಾಡಬೇಕು. ಇದನ್ನೆಲ್ಲ ಕಲಿತುಕೊಂಡು ಬಂದನು. ಅನಂತರ ಪಾತ್ರೆ ಮಾಡಿದನು ಎಷ್ಟು ಪಾತ್ರೆ ಮಾಡಿದನೋ ಅವೆಲ್ಲ ಸೀಳಿಬಿಟ್ಟವು ಒಂದೂ ಸರಿಯಾಗಿ ಉಳಿಯಲಿಲ್ಲ. ಇನ್ನೇನು ಮಾಡಬೇಕು? ಮತ್ತೆ ಮಾಡಿದ ಅವೂ ಸೀಳಿಹೋದವು. ಇವನು ಮತ್ತೆ ಚೀಣಾಕ್ಕೆ ಹೋದನು. 'ಹನ್ನೆರಡು ವರ್ಷ ಕಲಿತೆ. ನಾನು ಮಾಡಿದ ಪಾತ್ರೆಗಳು ಸುಂದರ ವಾಗಿವೆ. ಆದರೂ ಕೂಡ ಸೀಳಿಹೋದವಲ್ಲ!' ಎಂದು ವಿಚಾರಿಸಿದನು. ಪಾತ್ರೆ ಯನ್ನು ಅಗ್ನಿಯಿಂದ ತೆಗೆದ ಮೇಲೆ ಬೂದಿ ಇರುತ್ತದೆ. ಆ ಬೂದಿಯನ್ನು ಬಾಯಿಂದ ಊದಿದೆಯೇನು? ಎಂದು ಕೇಳಿದರು 'ಹೌದು ನಾನು ಆಫ್ ಅಂತ ಊದಿದೆ' 'ಆ ಗಾಳಿ ತಾಕಿದ ಕೂಡಲೆ ಸೀಳುವುವು' 'ಹಾಗಾದರೆ ನಾನೇನು ಮಾಡಬೇಕು?' 'ಒಳ್ಳೆ

ಬಟ್ಟೆಯಿಂದ ಬೂದಿ ತೆಗಿಯಬೇಕೇ ಹೊರತಾಗಿ ಊದಬಾರದು' ಅಂತ ಹೇಳಿದರು. 'ಅಯ್ಯೋ ಮಾರಾಯ! ಇಷ್ಟು ತಿಳಿಯದೆ ನಾನು ಮತ್ತೆ ಇಷ್ಟು ದೂರ ಬರಬೇಕಾಯಿತೆ!' ಎಂದನು.

ಇದೇ ರೀತಿ ಸ್ವಾಧ್ಯಾಯ ನಮಗೆ ಮೂಲ. ಸಿದ್ಧಾಂತ ಸಾರದಲ್ಲಿ ನರೇಂದ್ರ ಸೇನಾಚಾರ್ಯರು 'ವ್ರತಗಳಲ್ಲಿ ಮೂಲ ವ್ರತ ಸ್ವಾಧ್ಯಾಯ. ಇದು ಪರಮ ತಪ.'* ಎಂದು ಹೇಳಿರುವರು. ಯಾವ ಪ್ರಕಾರ ಪೂಜೆ ಮಾಡಬೇಕು, ಉಪವಾಸ ಮಾಡಬೇಕು ಇದೆಲ್ಲ ತಿಳಿಯಲು ಸ್ವಾಧ್ಯಾಯವೇ ಕಾರಣ. ಪ್ರತಿ ನಿತ್ಯ ಒಂದು ವಾಕ್ಯವನ್ನಾಗಲಿ ನಾವು ಸ್ವಾಧ್ಯಾಯ ಮಾಡೇ ತೀರಬೇಕು. ಅದನ್ನು ಮಾಡದಿದ್ದರೆ ನಮ್ಮದು ನಿರರ್ಥಕ ಜೀವನವಾಗುವುದು. 'ಸ್ವಾಧ್ಯಾಯದಿಂದ ಜ್ಞಾನ ಪ್ರಕಟವಾಗುವುದು. ಜೀವ ಪದಾರ್ಥಗಳ ಯಥಾರ್ಥ ಜ್ಞಾನವಾಗಿ ಅದು ಸಂಗ್ರಹವಾಗುತ್ತದೆ. ಆದರಿಂದ ತತ್ತ್ವ ಮತ್ತು ಅರ್ಥದ ಪರಿಜ್ಞಾನವಾಗುವುದರಿಂದ ನಮಗೆ ಶ್ರದ್ಧೆ ಹುಟ್ಟುತ್ತದೆ. ನಮಗೆ ಸಮ್ಯಗ್ದರ್ಶನದ ಬೀಜಕ್ಕೆ ಕಾರಣವಾಗುತ್ತದೆ.'‡ 'ಜ್ಞಾನಾರಾಧನೆಯ ಲಕ್ಷಣ ಸ್ವಾಧ್ಯಾಯ. ದೇವರ ಆರಾಧನೆ ಮಾಡುತ್ತೀರಿ. ಗುರುಗಳ ಆರಾಧನೆ, ಎಲ್ಲ ಆರಾಧನೆ ಮಾಡಿದರೂ ಕೂಡ, ಜ್ಞಾನಾರಾಧನೆ ಸರ್ವೋಚ್ಚವಾದುದು. ಜ್ಞಾನಾರಾಧನೆ ಮಾಡಬೇಕಾದರೆ ಶಾಸ್ತ್ರ ಕೇಳಬೇಕು, ಮನಃಪೂರ್ವಕ ಓದಬೇಕು. ಪರಿಣಾಮ ಶುದ್ಧಿಗೆ ಸ್ವಾಧ್ಯಾಯ ಮೂಲ ಕಾರಣ. ಸ್ವಾಧ್ಯಾಯ ಮಾಡುವಾಗ ಅಷ್ಟು ಕ್ಷಣದ ವರೆಗೆ ಮನಸ್ಸು ಅಲ್ಲಿ ಹೋಗುತ್ತದೆ. ವಚನವೂ ಅಲ್ಲೇ ಏಕಾಗ್ರವಾಗುತ್ತದೆ. ಇಂಥ ಸಮಯದಲ್ಲಿ ಮನಸ್ಸು ಎಷ್ಟು ಏಕಾಗ್ರವಾಗುವುದೋ ಇನ್ನಾವುದರಲ್ಲೂ ಇಷ್ಟು ಏಕಾಗ್ರವಾಗುವ ಹಾಗಿಲ್ಲ. ಏನಾದರೂ ಅರ್ಥವಾಗದಿದ್ದಲ್ಲಿ ಅದನ್ನು ಗೂಢವಾಗಿ ತಿಳಿಯಲು ಮನಸ್ಸು ಪ್ರಯತ್ನ ಪಡುತ್ತದೆ. ಸುಮ್ಮನೆ ಕುಳಿತು ಮನನ ಮಾಡುವಾಗ ಏಕಾಗ್ರವಾಗುವುದು. ಆ ಏಕಾಗ್ರವೂ ಕೂಡ ಕರ್ಮ ನಿರ್ಜರೆಗೆ ಕಾರಣವಿದೆ.

ಭಗವಂತನ ಪೂಜೆಯಲ್ಲಿ ಮತ್ತು ಸ್ವಾಧ್ಯಾಯದಲ್ಲೇನೂ ವ್ಯತ್ಯಾಸವಿಲ್ಲ. ಅದು ಕರ್ಮಕ್ಷಯಕ್ಕೆ ಕಾರಣವಿದೆ. ಇದೂ ಕರ್ಮಕ್ಷಯಕ್ಕೆ ಕಾರಣವಿದೆ. ದೇವಸ್ಥಾನದಲ್ಲಾಗಲಿ ಮನೆಯಲ್ಲಾಗಲಿ ಕುಳಿತು ನಾಲ್ಕು ವಾಕ್ಯಗಳನ್ನು, ಚಿಕ್ಕದಾಗಲಿ ದೊಡ್ಡದಾಗಲಿ ತಿಳಿದುಕೊಳ್ಳಲು ನಾವು ಪ್ರತಿ ನಿತ್ಯ ಸ್ವಾಧ್ಯಾಯವನ್ನು ಇಟ್ಟುಕೊಳ್ಳಬೇಕು. ಮತ್ತು ಅತ್ಯಂತ ಅನಾದಿಯಾದ ಸಂಚಿತ ಪಾಪ ಕರ್ಮಗಳು ಸ್ವಾಧ್ಯಾಯದಿಂದ ಕ್ಷಯವಾಗುವುವು. ಮತ್ತೇನಾಗುತ್ತದೆ? 'ಸಂವೇಗೋ ಜಾಯತೆ ಮೋಹಾಂಧಕಾರ ನಾಶಕಃ' ಸ್ವಾಧ್ಯಾಯದಿಂದ ಮೋಹಾಂಧಕಾರ ನಾಶವಾಗುವುದು. ಸಂವೇಗವೆಂದರೆ ದುಃಖಮಯ ಸಂಸಾರದ ಬಗ್ಗೆ ಭಯ ಉತ್ಪನ್ನವಾಗುವುದು. 'ಓ ಮಹಾರಾಯ ದುರ್ಗತಿ ಪ್ರಾಪ್ತ

---

*ಸ್ವಾಧ್ಯಾಯಂ ಪರಮ ತಪಃ

‡ಅಧ್ಯಯನಂಗಳಂ ವ್ರತಚಿಂತನೆಯಿಂ ಸ್ತುತಿಯಿಂ ಪ್ರಬೋಧೆಯಿಂ ।
ಸಾಧ್ಯ ಮನಸ್ಕನಾಗಿ ನಿಜರೂಪರಪ್ಪಿದಪಂಗೆ ಜೇರೆ ಮ ॥
ತ್ತಧ್ಯಯ ನಾದಿಗಳ್ ಪೆರೆಯಪಾವ ವಿಕಲ್ಪಮುಮಿಲ್ಲ ಲೋಕ ಕಾ ।
ರಾಧ್ಯನಪಂಗೆ ಪೂಜ್ಯ ಗುಣರಿಲ್ಲ ಸಲಾ ಅಪರಾಜಿತೇಶ್ವರಾ ॥ –114

ಆಗುತ್ತದೆ, ಅದಕ್ಕೆ ಸಂಸಾರವನ್ನು ಕಡಿಮೆ ಮಾಡಿಕೊಳ್ಳಬೇಕೆ ಹೊರತು ಅದನ್ನು ವಿಸ್ತಾರ ಮಾಡಬಾರದು' ಎಂಬ ಭಾವನೆ ಬರುವುದು. ಇದೇ ರೀತಿಯಿಂದ ಮೋಹ ಕ್ಷಯವಾಗಿ ಸದ್ಗತಿ ಸಿಗುವುದು.

ಸ್ವಾಧ್ಯಾಯಕ್ಕೆ ಸಮಾನವಾದುದು ಈ ಜಗತ್ತಿನಲ್ಲಿ ಮತ್ತಾವುದೂ ಇಲ್ಲ ಎನ್ನುವರು. 'ಕರ್ಮಕ್ಷಯ ಮಾಡಲು ಸ್ವಾಧ್ಯಾಯಕ್ಕೆ ಸಮಾನವಾದುದು ಮತ್ತಾವುದೂ ಇಲ್ಲ. ಉಳಿದ ಸಾಧನೆಗಳೆಲ್ಲ ಚಿಕ್ಕವು. ಸ್ವಾಧ್ಯಾಯವೂ ದೊಡ್ಡ ಸಾಧನೆ.' ಸೋಡಿ ಮುಳ್ಳಿದೆ ಅದು ಅಷ್ಟು ಕೆಲಸಕ್ಕೆ ಬರುವುದಿಲ್ಲ. ಅದಕ್ಕಿಂತ ದೊಡ್ಡದು ಕೆಲಸಕ್ಕೆ ಬರುವುದು. ಹೀಗೇನೆ ದೊಡ್ಡ ಶಸ್ತ್ರವು ಪರ್ವತವನ್ನೇ ಛೇದಿಸುವುದು. ವಜ್ರಾಯುಧದಿಂದ ಪರ್ವತವು ಚೂರು ಚೂರಾಗುವುದು.

'ನಾನು ಮೊದಲು ಅಭದ್ರ ಮನುಷ್ಯನಾಗಿದ್ದೆ. ಈಗ ನನ್ನನ್ನು ಸಮಂತಭದ್ರ ಎನ್ನುವರು, ಇದರಿಂದ ಭದ್ರ ಪರಿಣಾಮಿ ಎಂದು ಅರ್ಥವಾಗುವುದು. ಆಕಾಶದಂತೆ ನಾನು ಜೀವನದಲ್ಲಿ ಪೂರ್ಣ ಭದ್ರ ಪರಿಣಾಮಿ, ಮುಕ್ತಿಗಾಮಿ ಎಂದು ಅರ್ಥ. ಜಿನವಾಣಿಯ ಕೃಪೆಯಿಂದ ನಾನು ಸಮಂತ ಭದ್ರನಾದೆ' ಎಂದು ಸಮಂತಭದ್ರರು ಹೇಳಿಕೊಂಡಿರುವರು.* ಎಷ್ಟು ಸುಂದರವಾಗಿ ಹೇಳಿಕೊಂಡಿರುವರು. ಜಿನವಾಣಿ ಬಗ್ಗೆ ಅವರು ಎಷ್ಟೊಂದು ಆತ್ಮ ಸಮರ್ಪಣೆ ಮಾಡಿರುವರು ನೋಡಿ. ಸ್ವಾಧ್ಯಾಯದಿಂದ ಮನುಷ್ಯನು ಕರ್ಮಕ್ಷಯ ಮಾಡಿಕೊಂಡು ಮುಕ್ತಿಯನ್ನೂ ಪಡೆಯಬಹುದು. ಕರ್ಮಕ್ಷಯದ ಮಾರ್ಗವನ್ನು ತಿಳಿದುಕೊಳ್ಳಬೇಕಾದರೂ ಸ್ವಾಧ್ವಾಯ ಮಾಡಬೇಕು. ವಿದ್ವಾಂಸನಾಗಬೇಕಾದರೂ ಸ್ವಾಧ್ಯಾಯ ಮಾಡಬೇಕು.

ಪ್ರತಿ ನಿತ್ಯ ಒಂದೊಂದು ವಾಕ್ಯವನ್ನು ಸ್ವಾಧ್ಯಾಯ ಮಾಡಿಕೊಂಡರೆ ಎಷ್ಟೋ ಜ್ಞಾನ ಆಗುವುದು. ಆ ಜ್ಞಾನದಿಂದ ಮೋಕ್ಷಮಾರ್ಗ ಪ್ರಶಸ್ತವಾಗುತ್ತದೆ. ಶಾಸ್ತ್ರದಲ್ಲಿ ವರ್ಣನೆ ಮಾಡುವಾಗ ಆಚಾರ್ಯರು ಎಷ್ಟೋ ಕಠೋರ ಶಬ್ದಗಳನ್ನು ವರ್ಣನೆ ಮಾಡಿರುವರು. 'ಅಭವ್ಯ', 'ಅಸಂಜ್ಞೀ' ಇವೆಲ್ಲ ಕಠೋರ ಶಬ್ದಗಳು. 'ಮಿಥ್ಯಾದೃಷ್ಟಿ' ಅಂದರೆ ಸಿಟ್ಟಿಗೇಳುವರು. ಅಭವ್ಯ ಅಂದರೆ ನಿನಗೆ ಮುಕ್ತಿಯೇ ಇಲ್ಲ ಅಂದ ಹಾಗೆ. ಇಂಥ ಶಬ್ದಗಳನ್ನೆಲ್ಲ ಪ್ರಯೋಗ ಮಾಡಿದ್ದಾರೆ. ಇದಕ್ಕೆ ಆತ್ಮಾನುಶಾಸನದಲ್ಲಿ 'ಸೂರ್ಯ ಕಿರಣಗಳು ತೀಕ್ಷ್ಣವಾಗಿ ಇಲ್ಲದಿದ್ದರೆ ಕಮಲ ಅರಳುವ ಹಾಗಿಲ್ಲ. ನಿನ್ನ ಹೃದಯ ಕಮಲ ಅರಳಬೇಕಾದರೆ ಈ ಕಠೋರ ಶಬ್ದಗಳ ಪ್ರಯೋಗ ಮಾಡಬೇಕಾಯಿತು' ಎಂದು ಹೇಳಿರುವರು. 'ಮನುಷ್ಯ ಸ್ಥೂಲ ಸೂಕ್ಷ್ಮ ಪದಾರ್ಥಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದರೆ, ಕರ್ಮಕ್ಷಯವಾಗಬೇಕಾದರೆ ಪ್ರತಿ ನಿತ್ಯ ಜಬರ್ದಸ್ತಿನಿಂದ ಕಠೋರದಿಂದ ಸ್ವಾಧ್ಯಾಯ ಮಾಡಬೇಕು, ಆತ್ಮಭಾವ ಉತ್ಪನ್ನವಾಗಬೇಕಾದರೆ'‡

ಜ್ಞಾನಾವರಣೀಯ ಕರ್ಮಕ್ಷಯಕ್ಕೆ ಸ್ವಾಧ್ಯಾಯ ಮೂಲಕಾರಣವಾಗುವುದು. ಹಗ್ಗವನ್ನು ದಿನಾಲು ಕಲ್ಲ ಮೇಲೆ ಎಳೆದುಕೊಂಡು ಹೋದರೆ ಆ ಕಲ್ಲೂ ಸವೆಯುವುದು. ದಿನವೂ ನೀರು ಬಿದ್ದರೆ ಕಲ್ಲಿನಲ್ಲೂ ಹೊಂಡ ಬೀಳುವುದು. ಶೀತಲವಾದ

---

*ಯುಕ್ತ್ಯಾನುಶಾಸನ

‡ಪದಾರ್ಥಾತ್ ಸ್ಥೂಲ ಸೂಕ್ಷ್ಮಾತ್

ವಾಕ್ಯಗಳು ನಮ್ಮ ಆತ್ಮನ ಮೇಲೆ ದಿನಾಲು ಬಿದ್ದಲ್ಲಿ ಆತ್ಮವೂ ಶುದ್ಧವಾಗುವುದು, ಕರ್ಮ ನಷ್ಟವಾಗುವುದು.

ಆತ್ಮ ಪದಾರ್ಥದ ವಿಷಯ ಪರಿಜ್ಞಾನವಾಗಬೇಕಾದರೆ, ಸಾಧು ಜನರು ಜನ್ಮದಿಂದ ಮೃತ್ಯು ವರೆಗೆ ಸ್ವಾಧ್ಯಾಯ ಮಾಡುವುದನ್ನು ಬಿಡಕೂಡದು. ಸ್ವಾಧ್ಯಾಯವಿಲ್ಲದೆ ಜ್ಞಾನಾವರಣೀಯ ಕರ್ಮಕ್ಷಯವಾಗುವ ಹಾಗಿಲ್ಲ. ಜ್ಞಾನಾವರಣೀಯ ಕ್ಷಯವಾದ ಹೊರತು ಅವನು ವಿದ್ವಾನ್ ಆಗುವ ಹಾಗಿಲ್ಲ. ವಿದ್ವಾನ್ ಆಗದೆ ಧೈರ್ಯವೂ ಬರುವ ಹಾಗಿಲ್ಲ. ಶೀಘ್ರವಾಗಿ ಪದಾರ್ಥವನ್ನು ತಿಳಿದುಕೊಂಡು ತಪಃ ಪ್ರಭಾವವನ್ನು ಗಳಿಸಬೇಕಾದರೆ ಪ್ರತಿ ನಿತ್ಯ ಅತಿಚಾರ ರಹಿತವಾದ ಸ್ವಾಧ್ಯಾಯ ಮಾಡಬೇಕು. ಶುದ್ಧ ಹೃದಯದಿಂದ ಯಾವನು ಸ್ವಾಧ್ಯಾಯ ಮಾಡುವನೋ ಅವನು ಶ್ರೇಷ್ಠ ಪದವನ್ನು ಪಡೆಯುವನು. ಸ್ವಾಧ್ಯಾಯ ಮಾಡುವಾಗ ತನ್ನ ಮನಸ್ಸಿನಂತೆ ಅರ್ಥ ಮಾಡಿಕೊಳ್ಳದೆ ಯಥಾರ್ಥವಾಗಿ ತಿಳಿದುಕೊಳ್ಳಬೇಕು. ಸಾಧುವಿನ ಕಣ್ಣು ಈ ಚರ್ಮದ ಚಕ್ಷುವಲ್ಲ. ಆಗಮವೇ ಅವನ ಚಕ್ಷು. (ಆಗಮ ಚಕ್ಖು ಸಾಹು)

'ಸ್ವಾಧ್ಯಾಯದಿಂದ ಚಿತ್ತನಿರೋಧವಾಗುತ್ತದೆ. ಸ್ವಾಧ್ಯಾಯದಿಂದ ಸಂಯಮ ಲಭಿಸುವುದು. ಮನಸ್ಸು ತತ್ತ್ವಜ್ಞಾನದಲ್ಲಿ ಮಗ್ನವಾಗುವುದು. ಅಕ್ಷರ ಪಂಕ್ತಿಗಳಲ್ಲಿ ಆ ಮನಸ್ಸು ಕೂಡ ಏಕಾಗ್ರವಾಗುತ್ತದೆ. ಮತ್ತು ಕಣ್ಣುಗಳು ಕೂಡ ಏಕಾಗ್ರವಾಗುವುವು. ಸಂಯಮ ಸಾಧ್ಯವಾಗಬೇಕಾದರೆ ಪ್ರತಿ ನಿತ್ಯ ಸ್ವಾಧ್ಯಾಯ ಮಾಡಬೇಕು. ಸ್ವಾಧ್ಯಾಯವು ಪ್ರಶಂಸಾರ್ಹವಾಗಿದೆ. ಪ್ರತಿಯೊಬ್ಬ ಮನುಷ್ಯನಿಗೂ ಜ್ಞಾನ ಲಭಿಸಲು, ಕರ್ಮ ಕ್ಷಯವಾಗಲು, ಮೋಕ್ಷ ಲಭಿಸಲು ಸ್ವಾಧ್ಯಾಯ ಕಾರಣವಾಗುವುದು.'*

ಹಿಂದಿನವರು ಜ್ಞಾನದಿಂದ ಮೋಕ್ಷ ಪಡೆದರು. ವರ್ತಮಾನದಲ್ಲಿ ಮೋಕ್ಷ ಪಡೆಯಬೇಕಾದರೂ ಜ್ಞಾನದಿಂದಲೇ. ನಾವು ಸ್ವಾಧ್ಯಾಯ ಬಿಟ್ಟುಬಿಟ್ಟೆವು. ಜ್ಞಾನದಿಂದ ಜ್ಞಾನಪ್ರಾಪ್ತಿ. ನೋಡಿ ಎಷ್ಟು ಸುಂದರ ಶಬ್ದವಿದೆ. ಸಮಯ ಶಬ್ದದ ಅರ್ಥ ಆತ್ಮವಿದೆ. ಜ್ಞಾನವೇ ದೀಕ್ಷೆಯಾಗಿದೆ ಕೇವಲಜ್ಞಾನ ಪ್ರಾಪ್ತಿಗೋಸ್ಕರ. ಮಾನವ ಈ ಮಧ್ಯದಲ್ಲಿ ಸಿಕ್ಕಿಹಾಕಿಕೊಂಡು ಬಿಟ್ಟನು. ಮಧ್ಯದಲ್ಲಿ ಹೇಗೆ ಸಿಕ್ಕಿಹಾಕಿಕೊಂಡುಬಿಟ್ಟ? 'ದೇವರೆ, ನಿನಗೆ ನಾನು ಪೂಜೆ ಮಾಡುತ್ತೇನೆ ನನಗೆ ಇದು ಪ್ರಾಪ್ತಿಯಾಗಲಿ' ಎನ್ನುತ್ತಾ ಕೇವಲಜ್ಞಾನವನ್ನು ಮರೆತುಬಿಟ್ಟನು. ಮಧ್ಯದಲ್ಲಿ ಅಜ್ಞಾನದಲ್ಲಿ ಒದ್ದಾಡುತ್ತಿರುವನು. 'ಭಗವಾನ್ ನನ್ನ ಹತ್ತಿರ ಇರುವ ಪುಣ್ಯ ಪಾಪಗಳು ಎರಡು ಕಟ್ಟಿಗೆಗಳು ಇದ್ದ ಹಾಗೆ. ನಾನು ಕೇವಲಜ್ಞಾನದಲ್ಲಿ ಇವನ್ನು ಸುಡಬೇಕು ಎಂದು ಬಂದಿರುವೆನು. ನನಗೆ ಪುಣ್ಯವೂ ಬೇಡ, ಪಾಪವೂ ಬೇಡ. ನನ್ನ ಆತ್ಮವನ್ನೂ ಕೇವಲಜ್ಞಾನ ಮಾಡಿಕೊಳ್ಳಲು ಬಂದಿರುವೆನು.' ಚಂದನದ ಬಳಿ ಹೋದರೆ ಪರಿಮಳ, ಭಗವಂತನ ಬಳಿ

---

*ಶ್ರುತಮಂ ನೋಳ್ಪತಪರ್ಥಮಂ ತಿಳಿವ ತನ್ಮರ್ಯಾದೆಯೊಳ್ಪೋಪ ಸು- ।
ವ್ರತಮಂ ಪಾಲಿಪ ಕಾಮಮಂ ತುಳಿವ ಮಾಯಾಜಾಡ್ಯಮಂ ಜಾಡಿ ಪು- ॥
ಸ್ನತ ಕಾರುಣ್ಯದೊಳಾಳ್ವ ಜೀವಹಿತಮಂ ಪೇಳ್ವಾತನೇ ಮುಖ್ಯ ಗು ।
ಶ್ರುತಯೋಗೀಶ್ವರನೆಂದು ನಾಳಿನ ಶಿವಂ ರತ್ನಾಕರಾಧೀಶ್ವರಾ! ॥ –107

ಹೋದರೆ ಕೇವಲಜ್ಞಾನವಿದೆ. ಅವನ ಹತ್ತಿರ ಮತ್ತೇನೂ ಇಲ್ಲ. ಜ್ಞಾನ ಮೂರ್ತಿಗೆ ನಮಸ್ಕಾರ ಮಾಡುವೆನು ಎಂದು ಆಚಾರ್ಯ ಪೂಜ್ಯಪಾದರು ಬರೆದಿದ್ದಾರೆ.

ಹೇಗೆ ರೋಗ ನಿವಾರಣೆಗೆ ಔಷಧಿ ಮೂಲ ಕಾರಣ ಹಾಗೇ ಸ್ವಾಧ್ಯಾಯ ಮನ ಶಾಂತಿಗೆ ಕಾರಣ. 'ಮನ ವಚನ ಕಾಯಗಳು ಮೂರು ಬೇರೆ ಬೇರೆ ತಿರುಗುತ್ತಿರುತ್ತವೆ. ಸ್ವಾಧ್ಯಾಯದಿಂದ ಈ ಮೂರು ಒಂದು ಕಡೆ ನಿಲಿಸುವವು. ಚಿತ್ತದಲ್ಲಿ ವೃತ್ತಿಗಳು ಏಕಾಗ್ರವಾಗುವುವು. ಧ್ಯಾನಕ್ಕೆ ಸಹಾಯವಾಗುವುದು. ಈ ಉಪಕ್ರಮ, ಈ ಪುರು ಷಾರ್ಥ, ಈ ಪ್ರಯತ್ನದಿಂದ ಸ್ವಾಧ್ಯಾಯವು ಮನ ವಚನಕ್ಕೆ ಆಶ್ರಯ ನೀಡುವುದು. ಆತ್ಮ ದರ್ಶನವಾಗಬೇಕಾದರೆ, ಸಿದ್ಧಿಯಾಗಬೇಕಾದರೆ, ಪರಮಾತ್ಮನ ಪ್ರಾದುರ್ಭಾವ ವಾಗಬೇಕಾದರೆ ಸ್ವಾಧ್ಯಾಯದಿಂದಲೇ'.

ಆತ್ಮ ಮತ್ತು ಪರಮಾತ್ಮನ ಬಗ್ಗೆ ಆಚಾರ್ಯರು ಸೂಕ್ಷ್ಮವಾಗಿ ವಿವೇಚಿಸಿರು ವರು. ಪ್ರತಿಯೊಬ್ಬರೂ ಸ್ವಾಧ್ಯಾಯ ತಪ್ಪದೆ ಮಾಡಬೇಕು. ತಪಶ್ಚರ್ಯ ಶುದ್ಧ ವಾಗಬೇಕಾದರೆ ಜ್ಞಾನ ಶುದ್ಧವಾಗಬೇಕು. ಹಾಲು ಎಷ್ಟು ಒಳ್ಳೆಯದಿರುತ್ತದೆ ಅಷ್ಟು ಬೆಣ್ಣೆ ಬರುತ್ತವೆ. ಸ್ವಾಧ್ಯಾಯವೂ ಒಂದು ತಪಸ್ಸು. ಕರ್ಮ ಕ್ಷಯಕ್ಕೆ ಸ್ವಾಧ್ಯಾಯ ಮತ್ತು ಧ್ಯಾನ ಎರಡು ತಪಶ್ಚರ್ಯಗಳಾದವು. ಈ ಎರಡು ತಪಶ್ಚರ್ಯದಿಂದಲೇ ನಮಗೆ ಇಷ್ಟ ವಸ್ತುವಾದ ಮುಕ್ತಿ ಸಿಗುವುದು. ಮೊದಲು ಹಾಲು ಕಾಸಬೇಕು. ಅನಂತರ ಇದನ್ನು ತಂಪು ಮಾಡಿ ಹೆಪ್ಪು ಹಾಕಿದರೆ ಮೊಸರಾಗುತ್ತದೆ. ಪುನಃ ಬೆಣ್ಣೆ ಕಾಸಿದರೆ ತುಪ್ಪ ಸಿಗುತ್ತದೆ. ಹಾಲು ಕಾಸಬೇಕು, ಪುನಃ ಬೆಣ್ಣೆ ಕಾಸಬೇಕು. ಬೆಣ್ಣೆ ಕಾಸುವುದು ಅಂತರಂಗ ತಪ. ಬಾಹ್ಯ ತಪಸ್ಸಿನಿಂದ ಬೆಣ್ಣೆ ಬರುವುದು. ಅಂತ ರಂಗ ತಪಸ್ಸಿನಿಂದ ತುಪ್ಪ ದೊರೆಯುವುದು. ನಮ್ಮ ಜೀವನದಲ್ಲಿ ಅಂತರಂಗ ಬಹಿ ರಂಗ ತಪಸ್ಸುಗಳೇ ಮುಕ್ತಿಗೆ ಕಾರಣಗಳು. ತಪಶ್ಚರ್ಯ ಜ್ಞಾನವೇ ಮೂಲವಾಗಿದೆ. ಜಿನಸೇನಾಚಾರ್ಯರು ತಮ್ಮ ಹಿಂದಿನ ಆಚಾರ್ಯರ ಅಭಿಪ್ರಾಯವನ್ನು ಮೇಲ್ಕಂಡಂತೆ ತಿಳಿಸಿರುವರು.

## 5. ಜೀವದಯಾಷ್ಟಮಿ.

ನೋಡಿ, ಮಿಾರತ್ತಿನ ರಾಜೇಂದ್ರಕುಮಾರರು ಭಾರಿ ಕೆಲಸ ಮಾಡಿದ್ದಾರೆ. ಅವರ ತಮ್ಮಂದಿರು ನಮ್ಮನ್ನು ಹಿಮಾಲಯದ ಯಾತ್ರೆ ಮಾಡಿಸಿದರು. ಅಲ್ಲಿಗೆ ಹೋದಂಥ ತ್ಯಾಗಿಗಳ ಸೇವೆ ಮಾಡುತ್ತಾರೆ. ಇವರು ದೊಡ್ಡ ಪದವಿಯಲ್ಲಿದ್ದರೂ ದೇವಸ್ಥಾನದ ದರ್ಶನ ಬಿಡುವ ಹಾಗಿಲ್ಲ. ಇಪ್ಪತ್ತು ಇಪ್ಪತ್ತೆರಡು ದಿವಸ ಇಲ್ಲಿದ್ದು ಕೆಲಸ ಮಾಡಬೇಕು (ಮಸ್ತಕಾಭಿಷೇಕದಲ್ಲಿ) ಎಂದು ಇಲ್ಲಿ ಜಾಗ ನೋಡಲಿಕ್ಕೆ ಬಂದಿ ದ್ದಾರೆ. ಕಮಿಟಿಯಲ್ಲಿ ಇವರು ಕಾರ್ಯಕರ್ತರಾಗಿದ್ದಾರೆ. ಇವರು ಯಾವಾಗಲೂ ಧಾರ್ಮಿಕ ಕಾರ್ಯದಲ್ಲಿ ನಮ್ಮ ನಾಗರಾಜರ ಹಾಗೆ ದಿನವೂ ಎಂಟು–ಹತ್ತು ಗಂಟೆ ದುಡಿಯುವರು. ಇದನ್ನು ನಾವು ಕಲಿತುಕೊಳ್ಳಬೇಕು. ಎಷ್ಟರ ವರೆಗೆ ಶ್ರವಣಬೆಳ- ಗೊಳದ ಶ್ರಾವಕರು ದಿನವೂ ನಾಲ್ಕು–ಐದು ಗಂಟೆ ಈ ಕ್ಷೇತ್ರದ ಸೇವೆಗಾಗಿ, ಬಂದಂಥ

ಯಾತ್ರಿಕರ ಸೇವೆಗಾಗಿ ಮುಡಿಪಾಗಿಡದಿದ್ದರೆ ಶ್ರವಣಬೆಳಗುಳದ ಉದ್ಧಾರವಾಗುವ ಹಾಗಿಲ್ಲ. ಈ ದೊಡ್ಡ ಭಾರ ಅವರ ಮೇಲಿದೆ. ಈ ಭಾರವನ್ನು ದೂರ ಮಾಡಲು ಅವರೂ ಸ್ವಲ್ಪ ಪ್ರಯತ್ನ ಮಾಡುತ್ತಿದ್ದಾರೆ. ಆದರೂ ಸಾಲದು, ಏಕೆಂದರೆ ಎಷ್ಟು ಜನ ಬರುತ್ತಿದ್ದಾರೆ, ಎಷ್ಟು ಜನ ಹೋಗುತ್ತಿದ್ದಾರೆ, ಅವರ ಸೇವೆ ಮಾಡಲು ಎಲ್ಲರೂ ಪ್ರಯತ್ನ ಪಡಬೇಕು. ಮಾರತ್ತಿನ ಈ ರಾಜೇಂದ್ರಕುಮಾರರಿಗೆ ನಾವು ಎಷ್ಟು ಆಶೀರ್ವಾದ ಕೊಟ್ಟರೂ ಕಡಿಮೆಯೇ. ಅವರದು ದೊಡ್ಡ ಮನೆತನ. ಇಡೀ ಪರಿವಾರದಲ್ಲಿ ಎಲ್ಲರೂ ಧಾರ್ಮಿಕರು. ಇಂದು ಮಠದ ವತಿಯಿಂದ ಸ್ವಾಮಿಗಳು ಅವರಿಗೆ ಮಾಡಿದ ಸತ್ಕಾರ ಅವಶ್ಯಕವಾಗಿತ್ತು.

ಈ ಹೊತ್ತಿನ ವಿಷಯ ಜೀವದಯಾಷ್ಟಮಿ. ನೋಡಿ, 'ಜೀವ' ಒಂದು ಶಬ್ದ ಜೀವ ಅಂತೇಕೆ ಹೇಳಿದರು? ಧವಲ ಇತ್ಯಾದಿ ಗ್ರಂಥಗಳಲ್ಲಿ ಮೊದಲು ಜೀವಿತವಿದ್ದ, ಈಗಲೂ ಜೀವಿತ ಇದ್ದಾನೆ, ಮುಂದೆಯೂ ಕೂಡ ಜೀವಿತ ಇರುತ್ತಾನೆ. ಇಂಥವನೇ ಜೀವ ಎಂದು ಹೇಳಿದೆ. ಜೀವಲಕ್ಷಣವನ್ನು ಸರ್ವಾರ್ಥಸಿದ್ಧಿಯಲ್ಲಿ ಮತ್ತು ಪಂಚಾಧ್ಯಾಯಿಯಲ್ಲಿ, ಪಂಚಾಸ್ತಿಕಾಯದಲ್ಲಿ 'ಚೇತನೋ ಲಕ್ಷಣ ಜೀವ' ಎಂದಿರುವರು. ಜ್ಞಾನಚೇತನ ದರ್ಶನಚೇತನವುಳ್ಳದ್ದು ಜೀವ.

ಜೀವತತ್ತ್ವ ತಿಳಿದುಕೊಳ್ಳದಿದ್ದರೆ ನಾವು ಜೀವ ದಯೆ ಹೇಗೆ ತೋರುವುದು? ತಿಳದುಕೊಂಡ ಮೇಲೇನೆ ಜೀವಿಯ ಬಗ್ಗೆ ನಮಗೆ ದಯಾ ಭಾವನೆ ಉಂಟಾಗುವುದು. ಚಿನ್ನವೆಂದು ಗೊತ್ತಾದರೆ ಅದನ್ನು ತಿಜೋರಿಯಲ್ಲಿ ಹಾಕಿ ಭದ್ರ ಮಾಡಬಹುದು. ಒಬ್ಬ ಎಣ್ಣೆ ಮಾರುತ್ತಿದ್ದ, ಅದನ್ನು ತೂಕ ಮಾಡಿ ಮಾರುತ್ತಿದ್ದ. ಅವನ ಬಳಿಯಲ್ಲಿ ಒಂದು ತೂಕದ ಕಲ್ಲಿತ್ತು. ರತ್ನದ ವ್ಯಾಪಾರಿ ಅವನ ಬಳಿ ಹೋದನು. ಇದೆಂಥ ಕಲ್ಲು ಅಂತ ನೋಡಿ, 'ಇದಕ್ಕೆ ನಾಲ್ಕೈದು ರೂಪಾಯಿ ಕೊಡುವೆನು, ನನಗೆ ಕೊಟ್ಟು ಬಿಡು' ಎಂದು ಕೇಳಿದನು. ಐದು ರೂಪಾಯಿ ಬರುತ್ತೆ ಅಂತ ಅವನು ಕೊಟ್ಟು ಬಿಟ್ಟ. ಅದಕ್ಕೆ ಚೆನ್ನಾಗಿ ಪಾಲಿಷ್ ಮಾಡಿ ಮಾರಿದ ಕೂಡಲೇ ಅವನಿಗೆ ಲಕ್ಷಾಂತರ ರೂಪಾಯಿ ಸಿಕ್ಕಿತು. ಎಣ್ಣೆಯವನಿಗೆ ಅದರ ಬೆಲೆ ಗೊತ್ತಿಲ್ಲ. ಹಾಗೇನೆ ಜೀವತತ್ತ್ವವನ್ನು ನಾವು ತಿಳಿದುಕೊಳ್ಳದಿದ್ದರೆ ದಯಾ ಭಾವನೆ ಉಂಟಾಗುವ ಹಾಗಿಲ್ಲ.

ನಮ್ಮ ಸಮಸ್ತ ಭಾರತೀಯ ಧರ್ಮಶಾಸ್ತ್ರದಲ್ಲಿ ಧರ್ಮದ ಬುಡವೇನು, ಬೇರು ಏನು ಎಂದರೆ "ದಯೆ." 'ಧರ್ಮಸ್ಯ ಮೂಲಂ ದಯಾ' ಎಂದು ಪೂಜ್ಯಪಾದಾಚಾರ್ಯರು ಬರೆದಿರುವರು.* ದಯೆ ಇಲ್ಲದಿದ್ದರೆ ಧರ್ಮವೇ ಇಲ್ಲ. ನಮ್ಮ ಆಚಾರ್ಯ ಶಾಂತಿಸಾಗರ ಮಹಾರಾಜರು ಕೂಡಾ ಸಲ್ಲೇಖನದ ಸಮಯದಲ್ಲಿ ಕುಂಥಲಗಿರಿಯಲ್ಲಿ ಪ್ರವಚನ ಮಾಡಿದಾಗ ಅವರ ಅಂತಿಮ ವಾಕ್ಯವೇನಿದೆ ಅಂದರೆ 'ಶ್ರಾವಕರಲ್ಲಿ ದಯೆ

---

*ಧರ್ಮ ಸರ್ವಸುಖಾಕರೋ ಹಿತಕರೋ ಧರ್ಮಂಬುಧಾಶ್ಚಿನ್ವತೇ ।
ಧರ್ಮೇಣೈವ ಸಮಾಪ್ಯತೇ ಶಿವಸುಖಂ ಧರ್ಮಾಯ ತಸ್ಮೈ ನಮಃ ॥
ಧರ್ಮಾನ್ನಾಸ್ತ್ಯಪರಃ ಸುಹೃದ್ಭವಭೃತಾಂ ಧರ್ಮಸ್ಯ ಮೂಲಂ ದಯಾ ।
ಧರ್ಮೇ ಚಿತ್ತಮಹಂ ದಧೇ ಪ್ರತಿದಿನಂ ಹೇ ಧರ್ಮ ಮಾಂ ಪಾಲಯ ॥
–ಪಠಭಕ್ತಿ-ವೀರಭಕ್ತಿ 7

ಬೇಕು. ಇಲ್ಲದಿದ್ದರೆ ಅವರು ಶ್ರಾವಕರು ಎನಿಸಿಕೊಳ್ಳಲು ಶಕ್ಯವಿಲ್ಲ.' ದಯೆಯ ಮಹತ್ತ್ವವನ್ನು ನೀವು ತಿಳಿದುಕೊಳ್ಳಿ. ಆಚಾರ್ಯ ಶಾಂತಿಸಾಗರ ಮಹಾರಾಜರು ಹೇಳಿರುವರು.

ಈರ್ಯಾಪಥ ಶುದ್ಧ ಮಾಡಿ ಮುನಿಗಳು ನಡೆಯುತ್ತಿರುವಾಗ ಹಸಿ ಹುಲ್ಲಿನ ಮೇಲೂ ಅವರು ಕಾಲಿಡುವುದಿಲ್ಲ. ಅದಕ್ಕೂ ಕೂಡ ಹಿಂಸೆ ಆಗಬಾರದು, ದುಃಖ ಆಗಬಾರದು. ಅದಕ್ಕೂ ತೊಂದರೆಯಾಗುತ್ತದೆ. ಜೀವತತ್ತ್ವವನ್ನು ಮೊದಲು ತಿಳಿದುಕೊಳ್ಳಬೇಕು. 'ಜೀವದಯಾಷ್ಟಮಿ' ಎಂಬ ಹೆಸರು ಎಷ್ಟು ಚೆನ್ನಾಗಿದೆ! ಅಮೃತ ಕುಡಿದ ಹಾಗೆ ಆಗುತ್ತದೆ ಜೀವದಯಾ ಅಷ್ಟಮಿ. ಮುನ್ನೂರ ಅರುವತ್ತ ಐದು ದಿವಸದಲ್ಲಿ ಈ ಹೊತ್ತಾದರೂ 'ಏನಪ್ಪ ನನ್ನಿಂದ ಎಷ್ಟು ಹಿಂಸೆಯಾಯಿತು? ಎಷ್ಟು ಜೀವಿಗಳು ನನ್ನ ಕಾಲಿನ ಅಡಿಗೆ ಸಿಕ್ಕಿ ಪಾಪ ಸತ್ತಿರಬೇಕು!' ಎಂದು ಚಿಂತನೆ ಮಾಡಬೇಕು.

ಇರುವೆಯನ್ನು ಒಬ್ಬ ತುಳಿದ. ಆ ಕಡೆಯಿಂದ ಒಂದು ಶಬ್ದ ಬಂತು. ಏನು? ಅಲ್ಲ, ನೀನು ನನ್ನನ್ನು ತುಳಿಯುತ್ತಿರುವೆ, ನಿನ್ನನ್ನು ಆನೆ ತುಳಿದರೇನಾಗುವುದೋ ಆ ಸ್ಥಿತಿ ನನ್ನದಾಗಿದೆ ಅಂತ ಅದು ಹೇಳಿತು. ಆಗ ಅವನು ಜಾಗೃತನಾದ. ಜೀವದಯೆ ಬಗ್ಗೆ ನಾನೇನು ಹೇಳಲಿ? ಜವಾಹರಲಾಲ್ ನೆಹರೂ ಒಮ್ಮೆ ಕಾಡಿನಲ್ಲಿ ಶಿಕಾರಿ ಆಡಲಿಕ್ಕೆ ಹೋದರು. ಇದನ್ನು ಅವರ ತಮ್ಮ ಜೀವನ ಚರಿತ್ರೆಯಲ್ಲಿ ಬರೆದಿದ್ದಾರೆ. ಹನ್ನೆರಡು ಕೊಂಬಿನ (ಕವಲುಗೊಂಬು) ಸಾರಂಗ (ಹಿಂದಿಯಲ್ಲಿ ಸಾರಸುಂಗ)ವನ್ನು ಹೊಡೆದರು, ಗುಂಡು ಹಾಕಿ ಬಿಟ್ಟರು. ಅದು ಬಿದ್ದಿತು, ಅದರ ಹತ್ತಿರ ಹೋದರು. ಅದರ ಕಣ್ಣಿನಿಂದ ನೀರು ಬರುತ್ತಿತ್ತು. ಆ ಕಣ್ಣೀರಿನ ಜೊತೆಯಲ್ಲೇ ಕೆಲವು ಶಬ್ದಗಳು ಆಯಿತಂತೆ. 'ಅಲ್ಲ, ನಾನು ನಿನಗೇನು ತೊಂದರೆ ಕೊಟ್ಟಿದ್ದೆ?' ಎಂದು ಸಾರಂಗ ಹೇಳಿದಂತಾಯಿತು. ನೆಹರೂರವರು ಬಂದೂಕವನ್ನು ಅಲ್ಲೇ ಮುರಿದು ಹಾಕಿದರು. 'ನಾನು ಜೀವನದಲ್ಲಿ ಮತ್ತೆ ಬಂದೂಕ ಹಿಡಿಯುವುದಿಲ್ಲ, ಪ್ರಾಣಿಯನ್ನು ಶಿಕಾರಿ ಮಾಡುವುದಿಲ್ಲ' ಎಂದು ಸಂಕಲ್ಪ ಮಾಡಿದರಂತೆ.

ಅಮೇರಿಕದಲ್ಲಿ ಒಬ್ಬ ಆಕಳುಗಳನ್ನು ಚೆನ್ನಾಗಿ ಸಾಕಿ ಅನಂತರ ಕಸಾಯಿಗೆ ಮಾರುತ್ತಿದ್ದನು. ಒಂದು ಆಕಳನ್ನು ಕತ್ತರಿಸಬೇಕೆಂದು ತೆಗೆದುಕೊಂಡು ಹೋಗುತ್ತಿದ್ದಾಗ ದಾರಿಯಲ್ಲಿ ಅದು ಇವನ ಮೈಯನ್ನು ನೆಕ್ಕಲಿಕ್ಕೆ ಶುರು ಮಾಡಿತು. 'ಅಲ್ಲ, ಇದು ನನ್ನ ಮೇಲೆ ಪ್ರೀತಿ ಮಾಡುತ್ತದೆ, ನಾನು ಇದನ್ನು ಕೊಲ್ಲುವೆನಲ್ಲ! ಎಂದು ಅಲ್ಲೇ ಶಸ್ತ್ರ ಒಗೆದು ಬಿಟ್ಟ. ಹೀಗೆ ಸಾವಿರಾರು ದೃಷ್ಟಾಂತಗಳು ಜಗತ್ತಿನಲ್ಲಿವೆ. ಜೈನರಾಗಿ ಹುಟ್ಟಿದರೆ ಮಾತ್ರ ದಯೆ ಬರುತ್ತದೆ ಎನ್ನುವುದು ತಪ್ಪು. ಅಮೇರಿಕಾದಲ್ಲಿ ಅರುವತ್ತೆಪ್ಪತ್ತು ಅಂತಸ್ತಿನ ಒಂದು ಇಮಾರತ್ (ಕಟ್ಟಡ) ಕಟ್ಟುತ್ತಿದ್ದರು. ಕಟ್ಟುತ್ತಿರುವಾಗ ಕಂಟ್ರಾಕ್ಟರ್ ಫಿನಿಷಿಂಗ್ ಮಾಡಲು ಬಂದನು. ನೆಲದ ಅಂತಸ್ತಿನಲ್ಲಿ ಕೆಲವು ಪಕ್ಷಿಗಳು ಗೂಡು ಕಟ್ಟಿದ್ದುವು. ಕೆಳಗಡೆ ಸುಣ್ಣ ಹಚ್ಚಬೇಕು, ಬಣ್ಣ ಹಚ್ಚಬೇಕು ಎನ್ನುತ್ತಿರುವಾಗ ಒಂದು ಸಾವಿರ ಹೆಣ್ಣುಮಕ್ಕಳು ಕಪ್ಪುಧ್ವಜ ಹಿಡಿದುಕೊಂಡು ಬಂದರು. ಅಲ್ಲಿ ಸತ್ಯಾಗ್ರಹ ಮಾಡಿದರು, ಉಪವಾಸ ಮಾಡಿದರು,

ಪೋಲೀಸ್ ಬಂತು. 'ಎಷ್ಟರ ವರೆಗೆ ಆ ಪಕ್ಷಿಗಳು ತಾವಾಗೇ ಹಾರಿ ಹೋಗುವ ಹಾಗಿಲ್ಲ, ಅಷ್ಟರ ವರೆಗೆ ಫಿನಿಷಿಂಗ್ ಮಾಡಬಾರದು' ಎಂದು ಸರಕಾರ ಆರ್ಡರ್ ಮಾಡಿತು. ಕಂಟ್ರಾಕ್ಟರ್‌ಗೆ ಮುವತ್ತು ಸಾವಿರ ಡಾಲರ್ ನಷ್ಟವಾಯಿತು.

ಪ್ರಾಣಿ ದಯೆ ಸ್ವಭಾವತಃ ಪ್ರತಿಯೊಂದು ಜೀವಿಯಲ್ಲೂ ಇದ್ದೇ ಇದೆ. ಎಲ್ಲಾ ದರೂ ಒಂದು ಚಿಕ್ಕ ಮಗು ಬೀಳಲಿ, ಕೂಡಲೇ ಇನ್ನೊಂದು ಮಗು ಅದನ್ನು ಎತ್ತಿ ಹಿಡಿದುಕೊಳ್ಳುವುದುಂಟು. ಅದು ಅಳಲಿಕ್ಕೆ ಶುರು ಮಾಡಿದರೆ ಜೊತೆ ಮಗು ಅದರ ಜೊತೆಯಲ್ಲಿ ತಾನು ಅಳಲಿಕ್ಕೆ ಶುರು ಮಾಡುವುದುಂಟು. ಪಾಪ ಅದಕ್ಕೆ ದುಃಖ ವಾಯಿತಲ್ಲ ಎಂದು ಇದೂ ಅದರ ದುಃಖದಲ್ಲಿ ಸಹಯೋಗ ಮಾಡುವುದುಂಟು. ಪ್ರತಿಯೊಂದು ಪ್ರಾಣಿಯಲ್ಲೂ ಜನ್ಮತಃ ದಯಾ ಭಾವವಿದೆ. ಗಾಂಧೀಜಿಯವರು ಮೊದಲು ಅಹಿಂಸೆಯ ಬಗ್ಗೆ ಅಷ್ಟು ತಿಳಿದುಕೊಂಡಿಷ್ಟಿಲ್ಲ. ಅವರಿಗೆ ಯಾರೋ ಒಂದು ಪತ್ರ ಬರೆದರು— 'ನೋಡಪ್ಪ, ನಮ್ಮ ಆಕಳು ಟಿ.ಬಿ.ಯಾಗಿ ಬಾರಿ ಒದ್ದಾಡುತ್ತಿದೆ. ಇದಕ್ಕೆ ವಿಷದ ಇಂಜಕ್ಷನ್ ಕೊಟ್ಟು ಬಿಟ್ಟರೆ ಸಾಯುವುದು. ಹೇಗೆ ಕೊಡಬಹುದೋ' ಎಂದು ಕೇಳಿದರು. ಗಾಂಧಿಜಿ ಕೊಟ್ಟುಬಿಡಿ ಎಂದರು. ಹಸು ಇಂಜಕ್ಷನ್‌ನಿಂದ ಸತ್ತು ಹೋಯಿತು. ಆಗ ಇಂಡಿಯಾದ ನಾನಾ ಮೂಲೆಗಳಿಂದ ಜೈನರು ಗಾಂಧಿಜಿಗೆ ಪತ್ರ ಬರೆದರು. ಶತಾಬ್ದಿ ನಿಮಿತ್ತ ಸೆಂಟ್ರಲ್ ಗೌರ್ನಮೆಂಟ್ ಗಾಂಧಿಜಿ ಬಗ್ಗೆ ಪುಸ್ತಕ ಪ್ರಿಂಟು ಮಾಡಿದೆ. ಇದನ್ನು ನೀವು ಓದಬೇಕು, 'ನೀವು ಅಹಿಂಸೆ ಅಂತ ಬಾಯಲ್ಲಿ ಹೇಳುವಿರಿ. ಆಕಳನ್ನು ಹೇಗೆ ಕೊಲ್ಲಿಸಿದಿರಿ?' ಎಂದು ಆಕ್ಷೇಪಣಾ ಪತ್ರ ಬರೆದರು. 'ನಾನು ಅಹಿಂಸೆ ಬಗ್ಗೆ ಯಥಾರ್ಥವಾಗಿ ತಿಳಿದು ಕೊಂಡಿರಲಿಲ್ಲ. ನನ್ನಿಂದ ತಪ್ಪಾಗಿದೆ. ಎಲ್ಲ ಜೈನರೂ ನನ್ನನ್ನು ಕ್ಷಮಿಸಬೇಕು' ಎಂದು ಗಾಂಧಿಜಿ ಕ್ಷಮಾಯಾಚನೆ ಮಾಡಿ ದರು. ಒಬ್ಬ ಜೈನ ಏನು ಬರೆದಿದ್ದಾನೆ ಗೊತ್ತಿದೆಯೇ? ಲಖನಾಜಿ ಜೈನ್. 'ಗಾಂಧಿಜಿ, ನೀವು ಮಹಾತ್ಮ ಎನ್ನಿಸಿಕೊಳ್ಳುವಿರಿ. ನಿಮ್ಮ ತಾಯಿ ಕಾಯಿಲೆ ಬಿದ್ದಿದ್ದರೆ ನೀವು ತಾಯಿ ಸೇವೆ ಮಾಡುತ್ತಿದ್ದಿರೋ ಅಥವಾ ಇಂಜಕ್ಷನ್ ಕೊಡಿಸಿ ಕೊಲ್ಲಿಸುತ್ತಿದ್ದಿರೋ? ಇದಕ್ಕೆ ನನಗೆ ಉತ್ತರ ಕೊಡಿ' ಎಂದು ಬರೆದಿದ್ದನು (ಲಖನಾಜಿ ಜೈನ್) ಗಾಂಧಿಜಿ ಯವರ ಕಣ್ಣಲ್ಲಿ ನೀರು ಬಂದುಬಿಟ್ಟಿತು. 'ಓಹೋ ನನ್ನ ತಾಯಿ ಕಾಯಿಲೆ ಬಿದ್ದರೆ ನಾನು ಆಕೆ ಸಾಯೋತನಕ ಸೇವೆ ಮಾಡುತ್ತಿದ್ದೆ. ಗೋವು ಕೂಡ ತಾಯಿ ಇದ್ದ ಹಾಗೆ. ಜೀವನ ಪರ್ಯಂತ ನಮಗೆ ಹಾಲುಕೊಟ್ಟು ಉಪಕಾರ ಮಾಡಿದೆ' ಎಂದು ಪತ್ರ ಓದುತ್ತಾ ಗಾಂಧಿಜಿಯವರು ಅತ್ತುಬಿಟ್ಟರು!

ಈ ಜಗತ್ತಿನಲ್ಲಿ ದಯೆ ಇಲ್ಲದಿದ್ದರೆ ಮನುಷ್ಯ ಜೀವನ ಜೀವನವೇ ಅಲ್ಲ. ಒಂದು ಗಾಡಿಯಲ್ಲಿ ಒಬ್ಬ ಕುಳಿತು ಪ್ರಯಾಣ ಮಾಡುತ್ತಿದ್ದ. ಒಂಟೆಯೂ ಅವನ ಜೊತೆ ಯಲ್ಲಿತ್ತು, ಒಂದು ಟ್ರಕ್ ಡಿಕ್ಕಿ ಹೊಡೆದು ಗಾಡಿಯಲ್ಲಿದ್ದ ಮನುಷ್ಯ ಸತ್ತನು. ಒಂಟೆ ಅವನನ್ನು ಬಾಯಲ್ಲಿ ಹಿಡಿದುಕೊಂಡು ಬಂದು ಮನೆ ಸೇರಿಸಿತು! ಒಂದು ಮರದ ಅಡಿಯಲ್ಲಿ ಒಬ್ಬನನ್ನು ಯಾರೋ ಕೊಂದು ಹಾಕಿದರು. ಮರದ ಮೇಲಿದ್ದ ಮಂಗ ಇದನ್ನು ನೋಡಿ ಕೊಲೆಪಾತಕನ ಬೆನ್ನು ಹತ್ತಿತು ಹಿಂದುಗಡೆಯಿಂದ. ಅವನು ಯಾವ ಗುಡಿಸಲಿಗೆ ಹೋಗುತ್ತಾನೆ ಎಂಬುದನ್ನು ನೋಡಿಕೊಂಡು ಬಂದು, ಪೋಲೀಸ್ ತಪಾ

ಸಣಗೆ ಬಂದಾಗ ಇದು ಶ್ರೀಲೀಸಿಸಾನ ಒಟ್ಟಿ ಜಗ್ಗಿ ಕೊಲೆಪಾತಕನ ಗುಡಿಸಲಿನ ತನಕ ಕರೆದುಕೊಂಡು ಹೋಯಿತು. ಮೂಗ ಮೂಕ ಪ್ರಾಣಿ.

ಪ್ರತಿಯೊಂದು ಪ್ರಾಣಿಯಲ್ಲೂ ದಯಾಭಾವಗಳಿವೆ. ಜೀವತತ್ತ್ವ ತಿಳಿಯದ ಹೊರತು ನಾವು ಜೀವದಯಾಸ್ವರೂಪವನ್ನು ಪಾಲಿಸಿ ಮಾಡುವ ಹಾಗಿಲ್ಲ. ತತ್ತ್ವಾರ್ಥ ಸೂತ್ರದಲ್ಲೇನು ಹೇಳಿದ್ದಾರೆ? ಇದನ್ನು ತಾವು ಓದಬೇಕು. 'ಪರಸ್ಪರೋಪಗ್ರಹೋ ಜೀವಾನಾಂ'. ನಮ್ಮಿಂದ ಆದರೆ ಮತ್ತೊಂದು ಜೀವದ ಮೇಲೆ ಉಪಕಾರ ಮಾಡಬೇಕೇ ಹೊರತಾಗಿ ಅಪಕಾರ ಮಾಡಬಾರದು. ತತ್ತ್ವಾರ್ಥ ಸೂತ್ರ ಒಂದು ಮಹಾನ್ ಗ್ರಂಥ. ಎರಡುವರೆ ಸಾವಿರ ವರ್ಷದ ಮಹಾವೀರ ನಿರ್ವಾಣ ಮಹೋತ್ಸವದಲ್ಲಿ ಪ್ರತೀಕವಾಗಿ 'ಪರಸ್ಪರೋಪಗ್ರಹೋ ಜೀವಾನಾಂ' ಎಂಬ ವಾಕ್ಯ ಹಾಕಿಸಿತ್ತು. ಆಗ ನಾನಾ ತೆರನಾದ ವಾಕ್ಯಗಳು ನಾನಾ ಕಡೆಯಿಂದ ಬಂದವು, ಇದೇ ವಾಕ್ಯ ಇರ ಬೇಕೆಂದು ನಾವು ಸೂಚಿಸಿದೆವು. ಪರಸ್ಪರೋಪಗ್ರಹೋ ಜೀವಾನಾಂ ಎಂದರೇನರ್ಥ? ಒಬ್ಬರಿಗೊಬ್ಬರು ಜೀವಗಳು ಉಪಕಾರ ಮಾಡಿದರೇನೇ ಬದುಕಲಿಕ್ಕೆ ಸಂಭವವಿದೆ. ಸ್ಟೇಷನ್ನಿನಿಂದ ಸಾಮಾನು ತಂದ ಕೂಲಿಗೆ ನೀವು ನಾಲ್ಕಾಣೆ ಕೊಟ್ಟಿರಿ. 'ನಿನಗೆ ನಾಲ್ಕಾಣೆ ಕೊಟ್ಟಿದ್ದೇನೆ. ನಿನಗೆ ನಾನು ಎಷ್ಟು ಉಪಕಾರ ಮಾಡಿದೆ!' ಅಂತ ನಾವು ಹೇಳಿದರೆ 'ಸಾಮಾನು ಹೊತ್ತುಕೊಂಡು ಬಂದು ನಿಮ್ಮ ಮೇಲೆ ನಾನು ಉಪಕಾರ ಮಾಡಿರುವೆ' ಎಂದು ಕೂಲಿ ಹೇಳುವನು. ಉಪಕಾರ ಒಬ್ಬರ ಮೇಲೆ ಆಗುವುದಿಲ್ಲ, ಪರಸ್ಪರವಾಗಿ ಆಗುವುದು. ಏಕಾಂತಕ್ಕೆ ನಮ್ಮಲ್ಲಿ ಮಾನ್ಯತೆಯೇ ಇಲ್ಲ. ಒಬ್ಬರಿಂದ ಇನ್ನೊಬ್ಬರಿಗೆ ಉಪಕಾರವಿದ್ದೇ ಇದೆ ಪ್ರತಿಯೊಂದು ಸಿದ್ಧಾಂತವಲ್ಲೂ.

ನಾವು ಜೀವತತ್ತ್ವ ತಿಳಿದುಕೊಂಡರೆ ತಾನೆ ಉಪಕಾರ ಮಾಡುವುದು. ಜೀವ ತತ್ತ್ವ ತಿಳಿಯದ ಅಜ್ಞಾನೀ ಜೀವಗಳು ಅಪಕಾರ ಮಾಡುತ್ತಾರೆ, ಕಷ್ಟ ಕೊಡುತ್ತಾರೆ. ಏಕೇಂದ್ರಿಯ ಇದ್ದರೂ ಕೂಡ ನಾವು ಅದಕ್ಕೆ ಕಷ್ಟ ಕೊಡಬಾರದು. ಪಂಚೇಂದ್ರಿಯ ಹಾಗೂ ಸಂಜ್ಞೀಪಂಚೇಂದ್ರಿಯ ಜೀವಿಗಳನ್ನು ಕೊಲ್ಲುವಾಗ ಅವಕ್ಕೆ ಎಷ್ಟು ಕಷ್ಟ ವಾಗುತ್ತದೆ! ಒದ್ದಾಡುತ್ತವೆ ಅವು, ನಾನಾ ತರದ ಹಿಂಸೆಯಾಗುತ್ತದೆ. ನಿಮ್ಮ ಹೆಣ್ಣು ಮಗಳು ಕಾಯಿಪಲ್ಲೆ ಹಚ್ಚುವಾಗ ಕೈ ಹಚ್ಚಿಕೊಂಡರೆ ಕೂಡಲೆ ಬಟ್ಟೆ ಸುತ್ತುವಿರಿ, ಇಂಜೆಕ್ಷನ್ ಮಾಡಿಸುವಿರಿ, ಹಾ ಮಾಡುವಿರಿ, ಹೂ ಮಾಡುವಿರಿ! ಎಲ್ಲಾದರೂ ಬಟ್ಟೆ ಹೊಲಿಯುವಾಗ ಸೂಜಿ ಹೊಕ್ಕುಬಿಟ್ಟರೆ, ಒಮ್ಮೆ ಚುಚ್ಚಿಕೊಂಡು ನೋಡಿ, ಗೊತ್ತಿಲ್ಲ ದವರಿಗೆ ಹೇಳುತ್ತಿರುವೆನು. ತಿಗಣೆ ಕಡಿದರೆ, ಕಾಲಲ್ಲಿ ಮುಳ್ಳು ಚುಚ್ಚಿದರೆ ನಿಮಗೆ ಇದೆಲ್ಲ ಕಷ್ಟ ಆಗಿ ಕೆಟ್ಟದು ಎನಿಸುತ್ತದೆ. ಕಾಲಿಗೆ ಮುಳ್ಳು ಚುಚ್ಚಬಾರದು ಎಂದು ನೀವು ಕಾಲಿಗೆ ಕೆರ ಹಾಕಿಕೊಳ್ಳುವಿರಿ. ಮನಸ್ಸಿಗೆ ಹಿಂಸೆಯಾಗಬಾರದೆಂದು ಕಾಲನ್ನು ರಕ್ಷಿಸುವಿರಿ. ಇತರ ಪ್ರಾಣಿಗಳಿಗೆ ನೋವು ಕೊಡಬೇಕೆಂಬ ಭಾವನೆ ಹೇಗೆ ಬರುವುದು?

ತಪ್ಪು ತಿಳಿದುಕೊಳ್ಳಬೇಡಿ. ಯಾರೇ ತಪ್ಪು ಮಾಡಲಿ, ಅವರಿಗೆ ಕಠೋರ ಶಬ್ದದಿಂದ ಹೇಳಿದರೆ ಅದು ಹಿಂಸೆ ಅಲ್ಲ ಅಂತ ಸರ್ವಾರ್ಥಸಿದ್ಧಿಯಲ್ಲೂ ಬೇರೆ ಗ್ರಂಥ ಗಳಲ್ಲೂ ಹೇಳಿದೆ. ಎಲ್ಲಾದರೂ ಒಂದು ಹುಣ್ಣಾಗಿದ್ದರೆ ಭಾರಿ ನೋಯುತ್ತದೆ ಅದಕ್ಕೆ ವೈದ್ಯ ಆಪರೇಷನ್ ಮಾಡುತ್ತಾನೆ. ಆಪರೇಷನ್ ಮಾಡುವಾಗ, ಕೀವು ಬರುವಾಗ

ನೋವಾಗುತ್ತದೆ. ಅನಂತರ ಆರಾಮವಾಗುತ್ತದೆ. ಹಾಗೇ ತಪ್ಪು ಮಾಡಿದವರಿಗೆ ಜೋರಾಗಿ ಗದರಿಸಿದರೆ ಅದು ಹಿಂಸೆ ಅಲ್ಲ ಅಂತ ಸರ್ವಾರ್ಥ ಸಿದ್ಧಿಯಲ್ಲಿ ಪೂಜ್ಯ ಪಾದಾಚಾರ್ಯರು ಬರೆದಿದ್ದಾರೆ. ಶ್ರಾವಕಾಚಾರದಲ್ಲೂ ಇದನ್ನು ಬರೆದಿದ್ದಾರೆ. ನನ್ನ ಹತ್ತಿರ ಪ್ರಮಾಣವಿದೆ. ನಾನೂ ಕೂಡ ಎಷ್ಟೋ ಜನರಿಗೆ ಜೋರು ಮಾಡುತ್ತಿರುತ್ತೇನೆ. ಸ್ವಾಮಿಗಳು ಇಷ್ಟು ದಯವಾನ್ ಎಂದು ಹೇಳುತ್ತಿರುವಾಗ ಏಕೆ ಹೀಗೆ ಮಾಡುತ್ತಾರೆ ಎಂದು ನೀವು ತಿಳಿದುಕೊಳ್ಳಬಹುದು. ನೋಡಿ, ನೀವು ನೆನಪು ಇಟ್ಟುಕೊಳ್ಳಿ, ತೆಂಗಿನಕಾಯಿ ಇರುತ್ತದೆ. ಮೇಲೆ ಅದು ಕಠೋರ. ಒಳಗೆ ಕೊಬ್ಬರಿ ಬಹಳ ಮೃದು. ಹಾಗೆ ತಾಯಿ ಇರುತ್ತಾಳಲ್ಲ ತನ್ನ ಮಗು ತಪ್ಪು ಮಾಡಿದರೆ ಎಷ್ಟೋ ಸಲ ತಿಳಿಸಿ ಹೇಳುತ್ತಾಳೆ. ಅದು ಕೇಳೋ ಹಾಗಿಲ್ಲ, ತುಂಟತನ ಮಾಡುವುದು. ಆಗ ಎರಡೇಟು ಕೊಡುವಳು. ಅವಳ ಮನಸ್ಸಿನಲ್ಲಿ ದಯೆಯಿದೆ. ಮಗನಿಗೆ ಒಳ್ಳೆಯದಾಗಬೇಕೆಂಬ ಭಾವನೆಯಿದೆ. ಇದೇ ರೀತಿಯಿಂದ ನಾನೂ ಕೂಡ ಜೋರು ಮಾಡುವಾಗ ನನ್ನಲ್ಲೂ ಸದ್ಭಾವನೆಯಿರುತ್ತದೆ, ದುರ್ಭಾವನೆ ಇಲ್ಲ. ಕಮಲದ ಹೂವು ಅರಳಬೇಕಾದರೆ ಪ್ರಖರವಾದ ಸೂರ್ಯಕಿರಣ ಬೇಕು. ಗುರುಗಳೇ ಹೇಳದೆ ಹೋದರೆ ಈ ಜಗತ್ತಿನಲ್ಲಿ ಹೇಳುವವರು ಯಾರು?

ಅಹಿಂಸೆಯು ಶ್ರೇಷ್ಠವಾದ ಸಿದ್ಧಾಂತ. ದಯೆಯು ನಮ್ಮ ಸಂಸ್ಕೃತಿಯ ಪ್ರತೀಕವಿದೆ. ಆರ್ಯ ಸಮಾಜದ ವಿದ್ವಾಂಸರೊಬ್ಬರು ಇಂದೂರಿನವರು. ಅವರ ಹೆಸರು ಈಗ ನೆನಪಿಲ್ಲ, ಇಲ್ಲಿ ಅವರು ಬರೆದ ಪುಸ್ತಕ ಲೈಬ್ರೆರಿಯಲ್ಲಿದೆ. ರಾಷ್ಟ್ರೀಯಧರ್ಮ ಆಗಬೇಕಾದರೆ ಜೈನ ಧರ್ಮಕ್ಕೆ ಮಾತ್ರ ಅರ್ಹತೆಯಿದೆ. ಇದಕ್ಕೆ ಜೈನರು ಪ್ರಯತ್ನ ಮಾಡಬೇಕು ಎಂದು ಆತ ದೊಡ್ಡ ಲೇಖನವನ್ನು ಬರೆದಿದ್ದಾನೆ. ಅದನ್ನು ಅನುವಾದ ಮಾಡಿ ಗೊಮ್ಮಟವಾಣಿಯಲ್ಲಿ ಕೊಡಬೇಕು. 'ಈ ಸಮಯದಲ್ಲಿ ಜೈನರು ತಮ್ಮ ತತ್ತ್ವಜ್ಞಾನವನ್ನು ಜನರ ಮುಂದಿಟ್ಟು ಅವರ ಹೃದಯ ಪರಿವರ್ತನೆ ಮಾಡಿ ಪ್ರಯತ್ನಪಟ್ಟು ಜೈನ ಧರ್ಮವನ್ನು ರಾಷ್ಟ್ರೀಯ ಧರ್ಮವಾಗುವಂತೆ ಮಾಡಬೇಕು, ಇದು ಜೈನರಿಗೆ ಸಕಾಲ. ಜನ ತಂತ್ರದ ಉಪಯೋಗವನ್ನು ಜೈನರು ತೆಗೆದುಕೊಳ್ಳಬೇಕು, ಎಂದು ಆತ ವಿವರಿಸಿರುವನು ಸಕಾರಣಗಳ ಒಂದು ಲಿಸ್ಟು ಕೊಟ್ಟಿದ್ದಾನೆ.

ಬೇರೆ ಬೇರೆ ಜನರಲ್ಲಿ ನಮ್ಮ ಧರ್ಮದ ಬಗ್ಗೆ ಸಂಸ್ಕೃತಿ ಹರಡಬೇಕು. ಕಾಕ ಕಾಲೇಲ್‌ಕರ್ ವಿಶ್ವವಿಖ್ಯಾತ ಲೇಖಕರು. 'ಚಾತುರ್ಯಾಮ' ಎಂಬ ಪುಸ್ತಕದ ಇಂಟ್ರಡಕ್ಷನ್ನಿನಲ್ಲಿ 7-9 ಪುಟಗಳಲ್ಲಿ ಬರೆದಿದ್ದಾರೆ. 'ಜೈನರು ದಯೆಯ ಉಪದೇಶ ಕೊಟ್ಟಿರುವರು. ಬರೀ ಉಪದೇಶ ಕೊಡಲಿಲ್ಲ. ಅವರು ಒಳ್ಳೆ ಆಚರಣೆಯನ್ನೂ ಕೂಡ ಆದಿನಾಥ ಭಗವಂತನ ಕಾಲದಿಂದಲೂ ಆಚರಿಸಿ ತೋರಿಸಿದ್ದಾರೆ. ಜೀವಹಿಂಸೆಯಾಗದಿರಲಿ ಎಂದು ಅವರು ಸೂರ್ಯಾಸ್ತಕ್ಕೆ ಮುನ್ನ ಊಟ ಮಾಡುವರು, ರಾತ್ರಿ ಊಟ ಮಾಡುವುದಿಲ್ಲ.'

ಅಷ್ಟೇ ಅಲ್ಲ ರಾತ್ರಿ ಏಕೆ ಊಟ ಮಾಡುವುದಿಲ್ಲ ನಿಮಗೆ ಗೊತ್ತಿದೆಯೆ? ಆಕಳಿಗೆ ನಮ್ಮಲ್ಲಿ ಪ್ರಾಧಾನ್ಯ ಕೊಟ್ಟಿದೆ. ಮೂಲಾಚಾರದಲ್ಲಿ ಮುನಿಗಳು 'ಗೋಚರಿ' ಆಹಾರ ಮಾಡಬೇಕು ಎಂದು ಕೊಟ್ಟಿದೆ. ಆಕಳು ಮೇಲೆ ಮೇಲಿನ ಹುಲ್ಲು ತಿನ್ನುತ್ತದೆ.

ಮೇಲೆ ಮೇಲಿನ ತಿಳಿನೀರು ಕುಡಿಯುತ್ತದೆ. ಎಮ್ಮೆ ಒಳಗೆ ಹೊಕ್ಕು ಎಲ್ಲ ಬಗಡು ಮಾಡಿ ನೀರು ಕುಡಿಯುತ್ತದೆ, ಮತ್ತು ಎಮ್ಮೆ ಹುಲ್ಲು ತಿನ್ನುವಾಗ ಬೇರು ಸಹಿತ ಕಿತ್ತುಕೊಳ್ಳುತ್ತದೆ. ಆಕಳಲ್ಲಿ ಭಾರಿ ಭಾರಿ ಒಳ್ಳೆಯ ಗುಣಗಳಿವೆ. ಸಾಯಂಕಾಲ ಮೇದು ಬಂದ ಮೇಲೆ ಅದರ ಕುತ್ತಿಗೆಗೆ ಹಗ್ಗ ಬೀಳುವುದುಂಟು. ಆ ಗೋಮಾತೆ ಕುತ್ತಿಗೆಗೆ ಬೇಡಿ ಹಾಕಿ ಊಟ ಮಾಡಬಹುದೇ? ನಿಮ್ಮ ಯಜಮಾನರಿಗೆ ಯಾರಾದರೂ ಪೋಲೀಸರು ಬಂದು ಬೇಡಿ ಹಾಕಿದರೆ ನಿಮಗೆ ಊಟ ಸೇರುವುದೇ ಹೇಳಿ ನೋಡುವ? ಹಸುವಿನ ಕುತ್ತಿಗೆಗೆ ಹಗ್ಗ ಹಾಕಿ ಕಟ್ಟುವ ಮುನ್ನವೇ ಜೈನರು ಊಟ ಮಾಡಿಕೊಳ್ಳುವರು.

ಸೂರ್ಯಾಸ್ತವಾಗುತ್ತಿದ್ದಂತೆ ನಮ್ಮ ನಾಭಿಕಮಲ ಮುಚ್ಚಿಕೊಳ್ಳುವುದು. ಸೂರ್ಯ ಪ್ರಕಾಶವಿದ್ದಾಗ ಇದು ಅರಳುವುದು. ಅರಳಿದಾಗ ಆಹಾರ ಬಿದ್ದರೆ ಪಚನವಾಗುತ್ತದೆ, ರಸ ತಯಾರಾಗುತ್ತದೆ, ನಮ್ಮ ಬುದ್ಧಿಗೆ ಹಿತವಾಗುತ್ತದೆ. ಅದು ಮುಚ್ಚಿಕೊಂಡ ಮೇಲೆ ಅನ್ನ ಹಾಕಿದರೆ ಅನೇಕ ರೋಗಗಳು ಉತ್ಪನ್ನವಾಗುತ್ತವೆ. ಹೇಮಚಂದ್ರಾಚಾರ್ಯ ತಮ್ಮ ಯೋಗ ಶಾಸ್ತ್ರದಲ್ಲಿ ಇದನ್ನು ಬರೆದಿದ್ದಾರೆ.

ನಮ್ಮ ಹೊಟ್ಟೆಗೆ ಜೀವಿಗಳು ಹೋಗಬಾರದು ಎಂದು ನಾವು ಶೋಧಿಸಿ ನೀರು ಕುಡಿಯುತ್ತೇವೆ. ನೀರು ಶೋಧಿಸಿದ ಮೇಲೆ ಸೋಸುವ ಬಟ್ಟೆಯಲ್ಲಿರುವ ಹುಳುಗಳನ್ನು ನಮ್ಮಲ್ಲಿ ಅಲ್ಲೇ ಬಿಡುವುದುಂಟು. ಈ ಕ್ರಿಯೆಗಳೆಲ್ಲ ನಮಗೆ ಸಾಮಾನ್ಯ ಕಾಣಿಸಿದರೂ ಕೂಡ ಅಹಿಂಸೆಯ ಚರಮ ಸೀಮೆಯ ವರೆಗೆ ನಮ್ಮ ತೀರ್ಥಂಕರರೂ, ಆಚಾರ್ಯರೂ ಅನುಸಂಧಾನ ಮಾಡಿ, ಅನ್ವೇಷಣೆ ಮಾಡಿ ನಮ್ಮ ಗೃಹಸ್ಥರಿಗೆ ಉಪದೇಶ ಕೊಟ್ಟಿದ್ದಾರೆ. ಆರಂಭ (ವ್ಯವಸಾಯ) ಕ್ರಿಯೆಗಳಲ್ಲಿ ಆಗುವ ಹಿಂಸೆಯನ್ನು ಕಡಿಮೆ ಮಾಡಲು ನಾವು ಪ್ರಯತ್ನ ಪಡಬೇಕು. ನಮ್ಮ ಮನ ವಚನ ಕಾಯದಿಂದ ಹಿಂಸೆಯಾಗಬಾರದು ಎಂಬ ಭಾವನೆ ಇಟ್ಟುಕೊಂಡರೆ ಮಾತ್ರ ನಮ್ಮ ಸಂಸ್ಕೃತಿ, ನಮ್ಮ ಧರ್ಮ ಉಳಿಯುತ್ತದೆ. ಎಂಟು ರಸಗಳಲ್ಲಿರುವ ಒಂದು ಕರುಣಾರಸವು ದಯೆಯ ವ್ಯಾಖ್ಯೆಯಲ್ಲಿ ಬರುತ್ತದೆ. ಇಡೀ ಸಾಹಿತ್ಯದ ರಚನಾಕಾರರು ಕರುಣ ರಸವನ್ನು ವರ್ಣನೆ ಮಾಡಿರುವರು. ಕರುಣೆ ಇಲ್ಲದಿದ್ದರೆ ಧರ್ಮವಿಲ್ಲ. 'ಪರೋಪಕಾರಾಯ, ಪುಣ್ಯಾಯ, ಪಾಪಾಯ ಪರಪೀಡನಂ' ಇದು ಧರ್ಮದ ಮೂಲ ಗುರಿಯಾಗಿದೆ. ವ್ಯಾಸಮಹರ್ಷಿ ಕೂಡ ಹೇಳಿದ್ದಾರೆ: ನಾವು ಪರೋಪಕಾರ ಮಾಡಲು ಸಾಧ್ಯವಾದರೆ ಮಾಡಬೇಕು, ಮತ್ತೊಬ್ಬರಿಗೆ ತೊಂದರೆ, ಹಿಂಸೆ ಕೊಡಬಾರದು ಎಂದು.

ಜೀವ ತೊಂದರೆ ಮಾತ್ರ ಹಿಂಸೆಯಲ್ಲ, ನಮ್ಮ ಮನಸ್ಸಿನಲ್ಲಿ ಅನ್ಯ ಜೀವಿಗಳ ಕೊಲೆಯ ಭಾವನೆ ಬಂದರೂ ಸಾಕು ಅದೂ ಹಿಂಸೆಯೇ (ಮಾನಸಿಕ ಹಿಂಸೆ) ಅಹಿಂಸೆಯನ್ನೂ ನಾನಾ ಬಗೆಯಲ್ಲಿ ಆಚರಿಸಲಿಕ್ಕೆ ನಾವು ಪ್ರಯತ್ನ ಪಡುತ್ತಿದೆ. ಹಂಸ ಪಕ್ಷಿಯನ್ನು ಈಗ ಚಿತ್ರದಲ್ಲಿ ಮಾತ್ರ ನೋಡಬೇಕಾಗಿದೆ. ಈಗ ಹಂಸ ಪಕ್ಷಿಗಳು ನೋಡಲಿಕ್ಕೆ ಎಲ್ಲಿ ಸಿಗುತ್ತವೆ? ಮೊದಲಿಲ್ಲ ಪ್ರತಿಯೊಬ್ಬರೂ ಹಂಸ ಪಕ್ಷಿಯನ್ನು ವರ್ಣಿಸಿರುವರು, ಭೇರುಂಡ ಪಕ್ಷಿ ಭಾರಿ ದೊಡ್ಡದಾಗಿತ್ತು. ಈಗ ಅದರ ವಂಶವೇ ಇಲ್ಲ.

ಅದರ ಮೇಲೆ ಕುಳಿತು ದ್ವೀಪ ದ್ವೀಪಾಂತರ, ಸಮುದ್ರ ಪಾರಾಗಿ ಹೋಗುತ್ತಿದ್ದರು. ಚಾರುದತ್ತ ಹೋಗಿದ್ದಾನೆ. ನಮ್ಮ ಪುರಾಣದಲ್ಲಿ ಕಥೆಯಿದೆ. ನಾವು ಒಳ್ಳೆ ಒಳ್ಳೆ ಪಕ್ಷಿಗಳ, ಪಶುಗಳ ವಂಶವನ್ನು ನಷ್ಟಮಾಡುತ್ತಿರುವೆವು. ಇದರಿಂದ ಪ್ರಕೃತಿಯ ಸೌಂದರ್ಯ ನಷ್ಟವಾಗುತ್ತದೆ. ಅದೂ ಬದುಕಬೇಕು, ನಾವೂ ಬದುಕಬೇಕು.

ಎಷ್ಟೋ ಜನರು ಹೇಳುವುದುಂಟು, ಸೃಷ್ಟಿಯನ್ನು ಭಗವಂತನು ನಿರ್ಮಾಣ ಮಾಡಿದನೆಂದು ಸ್ವಲ್ಪ ಹೊತ್ತು ನಾನು ಒಪ್ಪುತ್ತೇನೆ. ಭಗವಂತನು ನಿರ್ಮಾಣ ಮಾಡಿದ ಪಶುಪಕ್ಷಿಗಳನ್ನು ಕೊಲ್ಲುವ ಅಧಿಕಾರ ನಮಗೇನಿದೆ? ಸೃಷ್ಟಿ ಅವನು ನಿರ್ಮಾಣ ಮಾಡಿದ್ದಾದರೆ ನಮ್ಮ ಸ್ವಾರ್ಥಕ್ಕಾಗಿ ಅವುಗಳನ್ನು ನಷ್ಟ ಮಾಡುವುದು ಸರಿಯೇ? ಅವನ ಮನಸ್ಸಿಗೆ ಇದು ವಿರುದ್ಧ ಆಗಲಿಲ್ಲವೇ? ಗೃಹಸ್ಥರು ತಮ್ಮ ಶಕ್ತಿ ಇದ್ದಷ್ಟು ಅಹಿಂಸೆಯನ್ನು ಪಾಲಿಸಬೇಕು. ಸ್ತ್ರೀಯರು ಹಿಂದೆ ಮನೆಯ ಬೆಂಕಿಯನ್ನು ಇನ್ನೊಬ್ಬರಿಗೆ ಕೊಡುತ್ತಿರಲಿಲ್ಲ. ಅನ್ಯರು ಇದನ್ನು ದುರುಪಯೋಗ ಮಾಡಿದರೆ ಎಷ್ಟೋ ಪ್ರಾಣಿಗಳು ಸತ್ತು ಹೋಗುತ್ತವೆ ಅದರಿಂದ ನಮಗೆ ಪಾಪ ಬರುವುದು ಎಂದು ಬೆಂಕಿ ಕೊಡುತ್ತಿರಲಿಲ್ಲ. ಅಗ್ನಿದಾನ ಮಾಡಬಾರದು ಅಂತ ಹೇಳಿ ಶಾಸ್ತ್ರದಲ್ಲಿದೆ.

ಜೀವದಯೆ ಇಲ್ಲದಿದ್ದರೆ ನಮ್ಮ ಜೀವನ ಭಾರಿ ಸಂಕಟಮಯವಾಗುವುದು. ಏಕೆಂದರೆ ಕೃಷ್ಣಲೇಶ್ಯ ವರ್ಣನೆಯಿದೆ. ಎಲ್ಲೆಲ್ಲೂ ಮರ ಕಡಿದು ಈ ದೇಶದ ಸಂಸ್ಕೃತಿಯನ್ನು ನಷ್ಟ ಮಾಡುತ್ತಿರುವರು. ಕಾಡನ್ನು ನಷ್ಟ ಮಾಡುತ್ತಿರುವರು. ಅದರಿಂದ ಈ ಪ್ರಕೃತಿಯ ಮೇಲೆ ಕೆಟ್ಟ ಪ್ರಭಾವ ಬೀಳುತ್ತದೆ. ಮರದಿಂದ ನಮಗೆ ಎಷ್ಟು ಪ್ರಯೋಜನವಿದೆ; ಚಿಕ್ಕದು ದೊಡ್ಡದು ಎಲ್ಲವನ್ನೂ ನಾಶ ಮಾಡುತ್ತಿರುವರು. ದಾರಿಯಲ್ಲಿ ಮೊದಲು ಹಣ್ಣು ಹಂಪಲಿನ ಮರಗಳನ್ನು ಹಾಕುತ್ತಿದ್ದರು. ಪಶು ಪಕ್ಷಿಗಳು ತಿನ್ನುತ್ತಿದ್ದವು, ಮನುಷ್ಯರು ತಿನ್ನುತ್ತಿದ್ದರು, ನೆರಳು ಸಿಗುತ್ತಿತ್ತು. ನಾನು ದೆಹಲಿಯಿಂದ ಬರುತ್ತಿರುವಾಗ ದಾರಿಯಲ್ಲೆಲ್ಲ ಮರ ಕಡಿಯುವ ಕೃಷ್ಣಲೇಶ್ಯೆಯ ದರಿದ್ರಮಂದಿಯನ್ನು ಕಾಣಬೇಕಾಯಿತು! ದಯೆ ಇಲ್ಲವೇ ಇಲ್ಲ! ದಯೆ ಇದ್ದಿದ್ದರೆ ಈ ಮರಗಳನ್ನೆಲ್ಲ ನಷ್ಟ ಮಾಡುತ್ತಿರಲಿಲ್ಲ.

ನಮ್ಮ ದೇಶದ ಬಗ್ಗೆ ಸಂಸ್ಕೃತಿ ಬಗ್ಗೆ ಜವಾಬ್ದಾರಿ ಬಗ್ಗೆ, ರಾಷ್ಟ್ರೀಯ ಭಾವನೆ ಬಗ್ಗೆ ಮತ್ತು ಪ್ರಕೃತಿ ಸೌಂದರ್ಯದ ಬಗ್ಗೆ ನಮ್ಮಲ್ಲಿ ಕಳಕಳಿಯೇ ಇಲ್ಲ. ಸ್ಕೂಲು ಕಾಲೇಜುಗಳಲ್ಲಿ ಮಕ್ಕಳಿಗೆ ಇದನ್ನು ಹೇಳಬೇಕು. 'ನೋಡಪ್ಪ ನೀನು ಅನಾವಶ್ಯಕವಾಗಿ ಮರವನ್ನು ಕತ್ತರಿಸಬಾರದು' ಎಂದು ತಿಳಿಸಬೇಕು. ತೆಂಗಿನ ಮರ 'ಫಲ ಕೊಡಲು ಶುರುವಾದಾಗ, ಎಳನೀರನ್ನು ನಾವು ಕಿತ್ತರೆ ಮುಂದೆ ಫಲ ಕೊಡುವ ಶಕ್ತಿ ಮರಕ್ಕೆ ಕುಗ್ಗುವುದು' ಎಂದು ಇಲ್ಲಿನ ಸ್ವಾಮಿಗಳು ನನಗೆ ಹೇಳಿದರು. ಏಕೆಂದರೆ ಇನ್ನೂ ಅದು ಅಪರಿಪಕ್ವವಾಗಿರುತ್ತೆ. ಎಳನೀರು ಕೀಳುವುದರಿಂದ ತೆಂಗಿನಕಾಯಾಗಲು ಪಕ್ವವನ್ನು ಎಳೆದು ತರುವ ನರಗಳು ಮುಚ್ಚಿಕೊಳುವುವು. ಪ್ರತಿಯೊಂದಕ್ಕೂ ಸೀಮೆಯಿದೆ. ಆ ಸೀಮೆಯನ್ನು ತಿಳಿದುಕೊಂಡು ನಾವು ಪ್ರಕೃತಿ ಸೌಂದರ್ಯ ಬೆಳೆಸಬೇಕು. ಒಂದು ತೆಂಗಿನಸಸಿ ನಾವು ಹಾಕಿದರೆ ಅದು ಜೀವನ ಪರ್ಯಂತ ನಮಗೆ

ತೆಂಗಿನಕಾಯಿ ಬಿಡುವುದು. ಅದಕ್ಕೆ ನೀವು ಕೊಡಪಾನದಿಂದ ನೀರು ಹಾಕುವಿರಿ. ಅದು ಜೀವನ ಪರ್ಯಂತ ನಿಮಗೆಷ್ಟು ಬೇಕು ನೀರು ಎಂಬ ಕಾಯಿಗಳನ್ನು ಹೊತ್ತಿರುತ್ತದೆ!

ಮರಗಳಿಂದ ಭಾರಿ ಉಪಕಾರವಿದೆ. ನೂರರಲ್ಲಿ ಎಂಭತ್ತು ಅಂಶ ಮನುಷ್ಯನ ಮೇಲೆ ಮರಗಳಿಂದ ಉಪಕಾರವಿದೆ ಎಂದು ಸಂಯುಕ್ತ ರಾಷ್ಟ್ರ ಸಂಘ ಪ್ರಕಟಿಸಿದೆ. ಛಾಯೆ ಕೊಡುವುದು, ವನಸ್ಪತಿ ಕೊಡುವುದು, ಹಣ್ಣು ಸಿಗುವುದು, ಸೊಪ್ಪು ಸಿಗುವುದು, ಅವು ದೊಡ್ಡದಾದ ಮೇಲೆ ಅದರಿಂದ ನಾವು ಕುರ್ಚಿ ಮಾಡುತ್ತೇವೆ, ಟೇಬಲ್ ಮಾಡುತ್ತೇವೆ, ರೊಟ್ಟಿ ಮಾಡಲಿಕ್ಕೆ ಮಣೆ ಮಾಡುತ್ತೇವೆ. ಕೆಲಸಕ್ಕೆ ಬಾರದ ಮರವನ್ನು ಸೌದೆಗೆ ಹಾಕುತ್ತೇವೆ. ನಮಗೆ ಮರಗಳಿಂದ ಆಮ್ಲಜನಕ ದೊರೆಯುವುದು. ಇಷ್ಟೊಂದು ಮಹಾನ್ ಉಪಕಾರವಾದಂಥ ಮರಗಳನ್ನು ನಾವು ಕಡಿದು ಹಾಕುತ್ತಾ ಹೋದರೆ ಮುಂದೇನು ಗತಿ?

ದಯಾಳು ಮನುಷ್ಯ ಶುಕ್ಲಲೇಶ್ಯೆಯನ್ನು ಅವನು ಯೋಚನೆ ಮಾಡುವನು, ನಾನು ಮಾಡುವ ಕಾರ್ಯದಿಂದ ಉಪಕಾರವೆಷ್ಟು ಅಪಕಾರವೆಷ್ಟು ಎಂದು ಚಿಂತಿಸುವನು. ಜೀವದಯೆ ಬಗ್ಗೆ ಎಷ್ಟೇ ಸೂಕ್ಷ್ಮವಾಗಿ ವಿವೇಚನೆ ಮಾಡಿದರೂ ಅದು ಕಡಿಮೆಯೇ ಸಮ್ಯಗ್‌ದೃಷ್ಟಿಯಾಗಬೇಕಾದರೆ ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ ಈ ಸಪ್ತ ತತ್ತ್ವಗಳನ್ನು ತಿಳಿದುಕೊಳ್ಳಬೇಕು ಸಪ್ತ ತತ್ತ್ವವನ್ನು ಯಥಾರ್ಥವಾಗಿ ತಿಳಿದುಕೊಂಡು ಪಾಪ ಬಂಧವಾಗಬಾರದು ಎಂದು ಒಳ್ಳೆ ರೀತಿಯಿಂದ ಆಚರಣೆ ಮಾಡಿದರೆ ಮೋಕ್ಷಕ್ಕೆ ಕಾರಣವಾಗುವುದು. ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಇವು ಷಡ್ ದ್ರವ್ಯಗಳು. ಇದರಲ್ಲಿ ಜೀವಕ್ಕೆ ಮೊದಲ ಸ್ಥಾನ ಕೊಟ್ಟಿರುವರು. ವ್ಯರ್ಥದಲ್ಲಿ ನಾವು ಯಾವ ಪ್ರಾಣಿಗೂ ಹಾನಿ ಮಾಡಬಾರದು.

ಸಿಕ್ಕಾಪಟ್ಟೆ ಹೂವು ಕಿತ್ತು ದೇವರಿಗೆಲ್ಲ ಹಾಕಬಾರದು ಇದರಿಂದ ಮರಗಳಿಗೆ ತೊಂದರೆಯಾಗುವುದು. ನೀವು ತಲೆಗೆ ಹೂ ಮುಡಿಯುವ ಮಾತು ಬೇರೆ. ವೀತರಾಗ ಭಗವಂತನಿಗೆ ಹೂ ಬೇಕಿಲ್ಲ. ವೀತರಾಗ ವನಸ್ಪತಿ ಮೇಲೆ ಕಾಡಲಿಲ್ಲ. ಆದರೆ ನೀವು ಹೂವು ಕಿತ್ತು ಅವನ ಕಾಲ ಮೇಲೆ ಇಡುತ್ತಿರುವಿರಿ! ಇದರಿಂದ ನಿಮಗೆ ಯಾವ ಪುಣ್ಯ ಬರುವುದು? ಮಗು ಹೇಗೆ ತಾಯಿ ತೊಡೆ ಮೇಲೆ ಚೆನ್ನಾಗಿ ಕಾಣುವುದೋ ಹಾಗೆ ಆ ಹೂವು ಮರದ ಮೇಲಿದ್ದರೆ ಚೆನ್ನಾಗಿ ಕಾಣುವುದು. ಮರದ ಮೇಲೆ ಅದು ಇರುವಾಗ ನೋಡಿ ಆನಂದ ಪಡಬೇಕು. ಗಾಂಧಿಜಿಯವರಿಗೆ ಮಹಾರಾಷ್ಟ್ರದಲ್ಲಿ ಒಂದು ಹೂವಿನ ಮಾಲೆ ಹಾಕಿದರು 'ಮಾರಾಯ, ವೃಥಾ ಮರಕ್ಕೆ ತೊಂದರೆ ಕೊಟ್ಟಿರಿ. ಒಂದು ನೂಲಿನ ಮಾಲೆ ಹಾಕಿದ್ದರೆ ನನಗೆ ಬಟ್ಟೆ ಮಾಡಲಿಕ್ಕಾದರೂ ಬರುತ್ತಿತ್ತು, ನಿಮಗೂ ಸಾರ್ಥಕವಾಗುತ್ತಿತ್ತು., ಜೀವದಯಾಷ್ಟಮಿ ನಿಮಿತ್ತ ನಮ್ಮ ಸ್ವಾಮಿಗಳು ರಾಜೇಂದ್ರಕುಮಾರನಿಗೆ ಚಂದನದ ಹಾರ ಹಾಕುವರು. ಅವರೂ ಕೂಡ ಜೀವದಯಾ-ಷ್ಟಮಿಯನ್ನು ಚೆನ್ನಾಗಿ ಪಾಲನೆ ಮಾಡಿದರು ಎಂದು ಅರ್ಥವಾಯಿತು.

ನಾವು ಎಂದೂ ಏಕೇಂದ್ರಿಯ ಜೀವಕ್ಕೂ ವೃಥಾ ತೊಂದರೆ ಕೊಡಬಾರದು. ಹೂವನ್ನು ವೃಥಾ ಕೀಳಬಾರದು. ಹೂವು ಗಿಡದ ಮೇಲೆ ಇರುವಾಗ ನೋಡಿ

ಸಂತೋಷಪಡಿ. ಹಸುರು ವಸ್ತುಗಳನ್ನು ನೋಡಿದರೆ ಕಣ್ಣಿಗೂ ಒಳ್ಳೆಯದು. ನಾವು ಎಲ್ಲರೂ ಸಂಕಲ್ಪ ಮಾಡಬೇಕು. ಇನ್ನು ಮುಂದೆ ದೇವರಿಗೆ ಯಾವ ಹಸಿ ಪದಾರ್ಥ ವನ್ನು ಕೊಡಬೇಡಿ ಭಕ್ತಿಯಿಂದ ಮುಕ್ತಿಯೇ ಹೊರತು ಹೂವನ್ನು ಕಿತ್ತು ದೇವರಿಗೆ ಇಡುವುದರಿಂದಲ್ಲ. ಹೂವಿನಿಂದ ಅವನು ಪ್ರಸನ್ನ ಆಗತಕ್ಕವನಲ್ಲ. ಸೂರ್ಯನ ಪ್ರಕಾಶಕ್ಕಾಗಿ ಕಮಲದ ಹೂವು ಕಾಯುವುದು. ನಮ್ಮ ಹೃದಯಕಮಲ ಅರಳಬೇಕಾ ದರೆ ಆ ಭಗವಂತನ ಜ್ಞಾನ ಪ್ರಕಾಶವನ್ನು ತೆಗೆದು ಕೊಳ್ಳಲು ನಾವು ಪ್ರಯತ್ನ ಪಡ ಬೇಕು. ಭಕ್ತಿ ಮಾಡಬೇಕೇ ಹೊರತು ಈ ಪದಾರ್ಥಗಳಿಂದ ಅವನನ್ನು ಪ್ರಸನ್ನ ಪಡಿಸಲು ಶಕ್ಯವಿಲ್ಲ. ನೀವು ಎಷ್ಟೇ ಒಡವೆ ಹಾಕಿಕೊಂಡು ಎಷ್ಟೇ ಶೃಂಗಾರ ಮಾಡಿ ಕೊಂಡರೂ ನನ್ನ ಮೇಲೇನು ಪ್ರಭಾವ ಬೀರುತ್ತದೆ? ಆ ವೀತರಾಗ ಭಗವಂತನ ಮೇಲೆ ನಾವಿಡುವ ನೈವೇದ್ಯವೇನು ಪ್ರಭಾವ ಬೀರಬಲ್ಲದು? ಅವನು ನಿರ್ಲಿಪ್ತ. ನೀವು ಶರೀರ ಶೃಂಗಾರ ಬೆಳೆಸಿಕೊಳ್ಳುವಿರಲ್ಲ! ನೀವು ಗೃಹಸ್ಥರು. ಇದರ ಬಗ್ಗೆ ನಾವು ಏನೂ ಹೇಳುವುದಿಲ್ಲ. ದೇವರ ಕಾಲ ಮೇಲೆ ಹೂವಿಡುವುದಿಲ್ಲವೆಂದು ಈ ಜೀವದಯಾ ಷ್ಟಮಿ ದಿವಸ ನೀವು ಸಂಕಲ್ಪ ತೊಡಿ. ಹೆಣ್ಣು ಮಕ್ಕಳು ಕಾಲಿಗೆ ಬಣ್ಣ ಹಚ್ಚಿ ಕೊಳ್ಳುವರು. ದೇವರ ಕಾಲಿಗೂ ಚಂದನ ಹಚ್ಚುವರು. ಇದೆಲ್ಲ ಕುರೂಪಿ ಜನರ ಕೆಲಸ. ಪರಮಾತ್ಮನಿಗೆ ಈ ಶೃಂಗಾರ ಬೇಕಿಲ್ಲ.

ಯಾವ ಪ್ರಾಣಿಗೂ ನಮ್ಮಿಂದ ತೊಂದರೆ ಆಗಬಾರದು ಎಂದು ಸಂಕಲ್ಪ ಮಾಡ ಬೇಕು. ಈ ರೀತಿ ದಯೆ ಮಾಡಿದರೆ ದೇಶ ರಕ್ಷಣೆಗೆ ಹೇಗೆ ಎಂದು ನೀವು ಯೋಚಿ ಸುವ ಅವಶ್ಯಕತೆಯಿಲ್ಲ. ದೇಶ ರಕ್ಷಣೆಗೆ ನಮ್ಮ ಶಾಸ್ತ್ರದಲ್ಲಿ ವಿರೋಧವಿಲ್ಲ. ನಿಮಗೆ ಯಾರಾದರೂ ತೊಂದರೆ ಕೊಡಲಿಕ್ಕೆ ಬಂದರೆ ನೀವು ಅಡ್ಡಿಮಾಡಿ. ವಿರೋಧಿ ಹಿಂಸೆಗೆ ಅವಕಾಶವಿದೆ ಗೃಹಸ್ಥರಿಗೆ. ಆದರೆ ಸನ್ಯಾಸಿಗಳು ವಿರೋಧಿ ಹಿಂಸೆಯನ್ನೂ ಬಿಡಬೇಕು ಎಂದು ಹೇಳಿದೆ. ಯಶಸ್ತಿಲಕ ಚಂಪು, ಪಂಚತಂತ್ರ ಇವು ಜೈನ ಗ್ರಂಥಗಳು. ಇವು ಗಳಲ್ಲಿ ರಾಜನೀತಿ ತುಂಬಿದೆ. ಇಂಥ ಗ್ರಂಥಗಳನ್ನೆಷ್ಟೋ ಬರೆದಿರುವರು ತೀರ್ಥಂಕರ ರೆಲ್ಲ ಕ್ಷತ್ರಿಯರು. ಬಹಿರಂಗ ಶತ್ರುಗಳನ್ನೂ ಅವರು ನಾಶಮಾಡಿ ಅನಂತರ ಅಂತ ರಂಗ ಶತ್ರುಗಳನ್ನೂ ನಾಶಮಾಡಿ ಅವರು ಮುಕ್ತಿಗೆ ಹೋದರು. ಆದಿನಾಥ ಭಗ ವಾನರು ಕೃಷಿ ಮಾಡುವುದನ್ನು ಏಕೆ ಕಲಿಸುತ್ತಿದ್ದರು? ಯಾರಾದರೂ ನಿಮ್ಮಲ್ಲಿ ತತ್ತಿ ತಿನ್ನುತ್ತಿದ್ದರೆ ಅದನ್ನು ಈ ದಿನದಿಂದ ಬಿಟ್ಟುಬಿಡಿ. ಅದರಲ್ಲೂ ಜೀವತತ್ತ್ವ ವಿದೆ. ಇದರಿಂದ ದೋಷ ತಟ್ಟುವುದು ತಿಂದವರಿಗೆ. ಅಭಕ್ಷ್ಯ ಪದಾರ್ಥವನ್ನು ನಿಮ್ಮಲ್ಲಿ ಯಾರಾದರೂ ತಿನ್ನುತ್ತಿದ್ದರೆ ಅದನ್ನೂ ಬಿಟ್ಟು ಬಿಡಿ. ಅಂಡದಲ್ಲಿ ಜೀವ ವಿದೆಯೆಂದು ಕುಂದಕುಂದರೂ ಹೇಳಿರುವರು. ಪರಸ್ಪರದಲ್ಲಿ ದಯೆ ವಾತ್ಸಲ್ಯ ಇಲ್ಲ ದಿದ್ದರೆ ನಾವು ಬದುಕುವ ಹಾಗಿಲ್ಲ.

ಸ್ವಿಡ್ಜರ್‌ಲ್ಯಾಂಡಿನಲ್ಲಿ ನಾನು ಏನು ಹೇಳಲಿ! ಮಕ್ಕಳ ಆಟಕ್ಕೆ ಮಾಡುವ ಆಟದ ಸಾಮಾನುಗಳಲ್ಲಿ ಹಿಂಸೆ ಉತ್ಪನ್ನ ಮಾಡುವ ಬಂದೂಕ ಇತ್ಯಾದಿ ಇರಕೂಡ ದೆಂದು ಅಲ್ಲಿನ ಸರ್ಕಾರ ಶಾಸನ ಮಾಡಿದೆ. ಯಾರಾದರೂ ಮಕ್ಕಳಿಗಾಗಿ ಆಟದ ಬಂದೂಕು ಮುಂತಾದವನ್ನು ಮಾಡಿದರೆ .ಮೂರು ವರ್ಷ ಸೆರೆವಾಸ ಅನುಭವಿಸ

ಬೇಕಾಗುವುದು. ಮಕ್ಕಳಲ್ಲಿ ಪರಸ್ಪರ ಪ್ರೀತಿ ಬರಲು ಮಗು ಎಡವಿದಾಗ ಒಟ್ಟಿ ಕಟ್ಟುವ, ಟಿಂಚರ್ ಹಾಕುವ ಬೊಂಬೆಗಳನ್ನು ತಯಾರು ಮಾಡುತ್ತಿರುವರು. ನಮ್ಮ ರಾಷ್ಟ್ರದ ಮಕ್ಕಳು ಪರೋಪಕಾರ ಮಾಡುವಂತಾಗಲಿ, ಹಿಂಸಾ ಪ್ರವೃತ್ತಿ ಕೂಡದು ಎಂದು ಆ ಸರ್ಕಾರ ಚಿಂತಿಸುತ್ತಿದೆ. ಹಿಂಸೆ ಮಾಡಲು ಅವಕಾಶ ಕೊಟ್ಟರೆ ಯಾದವೀಕಲಹದಿಂದ ರಾಷ್ಟ್ರಕ್ಕೆ ಹಾನಿಯಾಗುವುದು.



## ವಿದ್ಯಾನಂದ ವಾಣಿ

## ‘ಓಂ’ ಶಬ್ದದ ಮಹತ್ತ್ವ

‘ಓಂ’ ಇದು ಬಿಂದು ಸಂಯುಕ್ತವಾಗಿದೆ. ಬಿಂದು ಸಿದ್ಧ ಪರಮೇಷ್ಠಿಗಳ ಪ್ರತೀಕವಾಗಿದೆ. ಯೋಗಿಗಳು ಪ್ರತಿ ನಿತ್ಯ ಓಂಕಾರ ಧ್ಯಾನ ಮಾಡುತ್ತಾರೆ. ‘ಓಂ’ ಶಬ್ದದ ಹಿಂದುಗಡೆ ನಿರಾಕಾರ ಪರಮಾತ್ಮ ಇರುವನು. ಈ ಶಬ್ದ ಆಕಾರಯುಕ್ತವಾದರೂ ಇದರಲ್ಲಿ ನಿರಾಕಾರ ತತ್ತ್ವ ಅಡಗಿದೆ.

# ದ್ವಿತೀಯ ಖಂಡ

## ದ್ವಿತೀಯ ಭಾಗ

## ವಿದ್ಯಾನಂದ ಖಂಡ
## (ವಿದ್ಯಾನಂದ ಲೇಖನ - ಪ್ರಸೂನ)

[ಪ. ಪೂ. ವಿಲಾಚಾರ್ಯರ ಚಿಂತನ ಪರಕ, ದಾರ್ಶನಿಕ ಮತ್ತು ತತ್ತ್ವತಲ ಸ್ಪರ್ಶಿ ವಿಶಿಷ್ಟ ಲೇಖನಗಳನ್ನು ಇಲ್ಲಿ ಉದ್ಧರಿಸಲಾಗಿದೆ]

ವಿಷಯಾನುಕ್ರಮ:



ಪ. ಪೂ. ವಿದ್ಯಾನಂದ ಮುನಿಗಳ ಪ್ರವಚನ ಸಭೆ, ಸಾಹೂ ಶ್ರೇಯಾಂಸ ಪ್ರಸಾದ್ ಜೈನ್ ಮತ್ತಿತರರು.



ಪ. ಪೂ. ಏಲಾಚಾರ್ಯ ವಿದ್ಯಾನಂದ ಮಹಾರಾಜರು ಏಕಾಂತದಲ್ಲಿ ಕೇಶಲೋಚನ ಮಾಡುತ್ತಿರುವ ವೈರಾಗ್ಯಪ್ರದ ದೃಶ್ಯ.



ಪ. ಪೂ. ವಿದ್ಯಾನಂದ ಮುನೀಶ್ವರರ ಮಂಗಲ — ವಿಹಾರ.



ಬೊಂಬಾಯಿ ಚಾತುರ್ಮಾಸದ ಸುಸಂದರ್ಭದಲ್ಲಿ ಪೂ. ವಿದ್ಯಾನಂದರು ಮಹಾರಾಷ್ಟ್ರದ ಮುಖ್ಯಮಂತ್ರಿ ಶ್ರೀ ವಸಂತದಾದ ಪಾಟೀಲರೊಂದಿಗೆ ಚರ್ಚಿಸುತ್ತಿರುವುದು.



# 1. "ಸತ್ಯದ ಸತ್ವ, ಸ್ಯಾದ್ವಾದದ ಮಹತ್ವ."

1) ದೇಶ, ಸಮಾಜ ಮತ್ತು ತನ್ನ ಬಗ್ಗೆ ಮಾಡಬೇಕಾದ ಕರ್ತವ್ಯವೂ ಕೂಡ ಒಂದು ಧರ್ಮವೇ ಆಗಿದೆ. ಆದರೆ ನೆನಪಿರಲಿ! ಯಾವ ವ್ಯಕ್ತಿಯು ಕರ್ತವ್ಯದಿಂದ ಮುಂದಕ್ಕೆ ಸರಿಯುವುದಿಲ್ಲವೋ ಅವನು ಮುಳುಗಿ ಹೋಗುವನು, ನಾಶ ಹೊಂದುವನು. ಅವನ ಹೆಸರು ಕಲಂಕಿತವಾಗುವುದು. ಈ ಸಂಸಾರದಲ್ಲೇ ಯಾರು ಮುಳುಗಿರುತ್ತಾನೋ ಅವನ ಸರ್ವ ನಾಶವಾಗುವುದು ಖಂಡಿತ.

2) ಸೂತ್ರಗಳ ಆಧಾರದಿಂದ ನಾವು ನಮ್ಮ ಜೀವನವನ್ನು ಸಿದ್ಧಲೋಕದ ತನಕ ತಲ್ಪಿಸಬಹುದು. ಸಮ್ಯಗ್‌ದರ್ಶನದ ನಿಮಿತ್ತಕಾರಣವೇ ಆ ಸೂತ್ರವಾಗಿದೆ.

3) ಧರ್ಮರಥವನ್ನು ಎಳೆಯುವಲ್ಲಿ ಗೃಹಸ್ಥ ಮತ್ತು ಸಾಧು ಇವರಿಬ್ಬರೂ ಎತ್ತು-ಗಳಂತಿದ್ದಾರೆ. ಒಬ್ಬರು ಇನ್ನೊಬ್ಬರ ಪೂರಕವಾಗಿದ್ದಾರೆ. ಇಬ್ಬರಿಗೂ ಪರಸ್ಪರ ಸಂಬಂಧ ಇರುವ ತನಕ ಧರ್ಮದ ರಕ್ಷಣೆಯಾಗುತ್ತದೆ.

**—ಎಲಾಚಾರ್ಯ ವಿದ್ಯಾನಂದ ಮುನಿಗಳು.**

ಈ ವಿಶಾಲವಾದ ಪ್ರಪಂಚದಲ್ಲಿ ಪ್ರಾಣಿಮಾತ್ರರನ್ನು ಅದರಲ್ಲೂ ವಿಶೇಷವಾಗಿ ಮನುಷ್ಯರನ್ನು ಲಕ್ಷ್ಯದಲ್ಲಿರಿಸಿಕೊಂಡಾಗ ನಮಗೆ ಬಹು ದೂರದೃಷ್ಟಿಯಿಂದ ಯೋಚಿಸ ಬೇಕಾದ ಪ್ರಮೇಯ ಒದಗುತ್ತದೆ. ಸಮುದ್ರದ ಅಸ್ತಿತ್ವವು ಹನಿಗಳಲ್ಲಿ ಇದೆ. ಒಂದೊಂದು ಹನಿ ಕೂಡಿಯೇ ಸಮುದ್ರವಾಗುತ್ತದೆ. ಅನೇಕ ಮುತ್ತುಗಳನ್ನು ಪೋಣಿಸಿದ ಮೇಲೆಯೇ ಮಾಲೆಯಾಗುತ್ತದೆ. ಅಕ್ಷರ-ಅಕ್ಷರ, ಪಂಙ್ತಿ-ಪಂಙ್ತಿಗಳು ಸೇರಿ ಶಾಸ್ತ್ರ ಅಥವಾ ಗ್ರಂಥವೆನಿಸುತ್ತದೆ. ಬಿಡಿ-ಬಿಡಿಯಾದ ಮುತ್ತು ಮಾಲೆ ಎನಿಸುವುದಿಲ್ಲ. ಪ್ರತ್ಯೇಕ ಅಕ್ಷರ ಅಥವಾ ಶಬ್ದಗಳು ಶಾಸ್ತ್ರವೆನಿಸುವುದಿಲ್ಲ, ಶ್ಲೋಕ-ವೆನಿಸುವುದೂ ಇಲ್ಲ. ಇದೇ ರೀತಿ ನಾವು ಯಾವ ದೇಶದಲ್ಲಿ ಒಟ್ಟುಗೂಡಿ ವಾಸಿಸು ತ್ತೇವೋ ಅದು ರಾಷ್ಟ್ರ ಅಥವಾ ಸಮಾಜ ಎನಿಸುತ್ತದೆ. ಪ್ರತ್ಯೇಕ-ಪ್ರತ್ಯೇಕವಾಗಿರು

ವುದರಿಂದ ಸಮಾಜವಾಗುವುದಿಲ್ಲ. ಸಮುದ್ರದಿಂದ ಹನಿಗಳನ್ನು ತೆಗೆದು ಹಾಕಿದರೆ ಅಥವಾ ಸೂರ್ಯನ ಕಿರಣಗಳಿಂದ ಸಮುದ್ರದ ನೀರ ಹನಿಗಳೆಲ್ಲ ಹೀರಲ್ಪಟ್ಟರೆ ಏನಾಗ ಬಹುದು? ಆದರೆ ಸಮುದ್ರದಲ್ಲಿ ಹನಿಗಳು ಒಟ್ಟು ಸೇರಿರುವ ವರೆಗೆ ಸೂರ್ಯನೂ ಕೂಡ ಸಮುದ್ರವನ್ನು ಒಣಗಿಸಲು ಸಮರ್ಥನಾಗಲಾರ. ಇದೇ ರೀತಿ ನಮ್ಮ ಹಿರಿಯರು ಸಮಾಜದಲ್ಲಿ ಪರಸ್ಪರ ಹೊಂದಿಕೊಂಡಿರುವ ಶಕ್ತಿಯನ್ನು ನಮಗೆ ಕೊಟ್ಟಿರುತ್ತಾರೆ. ಮಹಾನ್ ತತ್ತ್ವಜ್ಞಾನಿಗಳು ಇದಕ್ಕಾಗಿಯೇ ಒಂದು ಸೂತ್ರದೊಳಗೆ ಅಡಕವಾಗಿರುವುದಕ್ಕಾಗಿಯೇ ನಮಗೆ ಸಿದ್ಧಾಂತ ಹಾಗೂ ತತ್ತ್ವಜ್ಞಾನವನ್ನು ಬಿಟ್ಟು ಹೋಗಿರುತ್ತಾರೆ.

ಮನುಷ್ಯ ಕೇವಲ ಅನ್ನ ತಿಂದೇ ಜೀವಿಸಲಾರ. ಪಶು-ಪಕ್ಷಿಗಳು ಅನ್ನ ಅಥವಾ ಭೋಜನ ಮಾತ್ರದಿಂದ ಜೀವಿಸಬಲ್ಲವಾದರೂ ಮನುಷ್ಯ ಮಾತ್ರ ಜೀವಿಸಲು ಸಾಧ್ಯವಿಲ್ಲ. ಏಕೆಂದರೆ ಅವನಿಗೆ ಶಾಂತಿ ಬೇಕು, ಅವನು ಶಾಂತಿಯನ್ನು ಹುಡುಕುತ್ತಿರುತ್ತಾನೆ. ಹೊಟ್ಟೆಯ ಹಸಿವನ್ನು ನೀಗಿಸಲು ಹೇಗೆ ಅನ್ನವು ಆವಶ್ಯಕವೋ ಹಾಗೆಯೇ ಆತ್ಮನ ದುಃಖವನ್ನು ನೀಗಿಸಲು ಶಾಸ್ತ್ರ, ಆಗಮ ಹಾಗೂ ತತ್ತ್ವಜ್ಞಾನದ ಅಗತ್ಯವಿದೆ. ತತ್ತ್ವಜ್ಞಾನದ ಹೊರತಾಗಿ ಶಾಂತಿಯ ಮಾತೇ ಇರುವುದಿಲ್ಲ. ತತ್ತ್ವಜ್ಞಾನವಿಲ್ಲದ ಮನುಷ್ಯನು ಎಂದಿಗೂ ಸುಖಿಯಾಗಲಾರ; ಸದಾ ದುಃಖಿಯೇ ಆಗಿರುತ್ತಾನೆ ತತ್ತ್ವಜ್ಞಾನದಿಂದ ಕೂಡಿದವನು ನರಕದಲ್ಲೂ ಸುಖಿಯಾಗಿರಬಲ್ಲ.

ಭಾರತೀಯ ಲಿಪಿಯಲ್ಲಿ ಮೊದಲಿಗೆ 'ಅ' ಅಕ್ಷರ ಬರೆಸುತ್ತಾರೆ. ಕೊನೆಯದಾಗಿ 'ಹ' ಮತ್ತು ಮಧ್ಯೆ 'ಮ್' ಇರುತ್ತದೆ. ಹೀಗೆ 'ಅಹಮ್' ಎಂದಾಗುತ್ತದೆ. 'ಅಹಮ್' ಅಂದರೆ ನಾನು ಯಾರು? ಎಂಬುದರ ಸಂಕೇತವೇ ಭಾರತೀಯ 'ಲಿಪಿ' ಶಾಸ್ತ್ರದ ಸಾರವಾಗಿದೆ. ಇದು ಬರೀ ಲೋಕ ವ್ಯವಹಾರದ ಲಿಪಿ ಮಾತ್ರವಲ್ಲ. ಇಡೀ ಪ್ರಪಂಚವನ್ನೇ ಅರಿತು ಗುರುತಿಸಬಲ್ಲವನಾದರೂ, ಯಾವಾತನು ತನ್ನನ್ನು ಅರಿತಿಲ್ಲವೋ, ಗುರುತಿಸಲಾರನೋ ಅಂಥವನ ಜೀವನವೆಲ್ಲ ನಿರರ್ಥಕ. ಅವನು ಯಾವ ಉಪಯೋಗಕ್ಕೂ ಅರ್ಹನಲ್ಲ. ಪಶು-ಪಕ್ಷಿಗಳಿಗೂ ಅವನಿಗೂ ಯಾವ ವ್ಯತ್ಯಾಸವೂ ಇರುವುದಿಲ್ಲ.

## ದ್ರವ್ಯ ಮತ್ತು ಭಾವಶ್ರುತ

ನಮ್ಮ ಆಚಾರ್ಯರು ಶ್ರುತಜ್ಞಾನವನ್ನು 'ದ್ರವ್ಯಶ್ರುತ' ಮತ್ತು 'ಭಾವಶ್ರುತ' ಎಂದು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಲಿಪಿ (ಅಕ್ಷರ)ಬದ್ಧವಾಗಿರುವ ಶ್ರುತವು ದ್ರವ್ಯಶ್ರುತವೆನಿಸುವುದು. ಅದೇ ಶಾಸ್ತ್ರ–ಆಗಮರೂಪದಲ್ಲಿರುತ್ತದೆ. ಅನಾದಿ ಹಾಗೂ ಪ್ರತ್ಯೇಕ ಆತ್ಮನು ತಿಳಿಯಬಲ್ಲ ಶಾಸ್ತ್ರಜ್ಞಾನವು ಭಾವಶ್ರುತವೆನಿಸುತ್ತದೆ. ದ್ರವ್ಯಶ್ರುತವು ಒಂದಲ್ಲ ಒಂದು ಕಾಲದಲ್ಲಿ ಅಕ್ಷರ ಬದ್ಧವಾಗಿ ರಚಿಸಲ್ಪಟ್ಟಿರುತ್ತದೆ. ಆದರೆ ಭಾವಶ್ರುತವು ಕಾಲಾತೀತವಾದುದು. ಆದುದರಿಂದ ಅದು ಅನಾದಿ ಮತ್ತು ಅನಂತವಾಗಿದೆ.

ಈ ದೇಶದಲ್ಲಿ ಅನೇಕ ಧರ್ಮಗ್ರಂಥಗಳಿರುತ್ತವೆ. ನಮ್ಮ ಧರ್ಮಗ್ರಂಥಗಳಲ್ಲಿ ಭಗವಂತನ ವಾಣಿ ಇದೆಯೆಂದು ಎಲ್ಲರೂ ಹೇಳುತ್ತಾರೆ. ಶಾಸ್ತ್ರಗ್ರಂಥಗಳಲ್ಲಿ ಭಗ-

ವಂತನ ಅಗಾಧವಾದ ಜ್ಞಾನಭಂಡಾರವು ತುಂಬಿರಬಲ್ಲುದೇ? ಧರ್ಮಗ್ರಂಥಗಳಿಂದ ನಾವು ಓದಿ ತಿಳಿದಿರುವಷ್ಟೇ ಭಗವಂತನ ಜ್ಞಾನದ ಪರಿಮಿತಿಯೋ? ಯಾವುದಾದರೂ ಒಂದು ಗ್ರಂಥವನ್ನು ಇಪ್ಪತ್ತ ಐದು ರೂಪಾಯಿಗಳಿಗೆ ಖರೀದಿ ಮಾಡಿ ಜ್ಞಾನವನ್ನು ಪಡೆಯಲು ಸಾಧ್ಯವಿದೆಯೇ? ಇಲ್ಲ, ಸಾಧ್ಯವಿಲ್ಲ. ಅದಕ್ಕಾಗಿಯೇ ಭಗವಾನ್ ಋಷಭದೇವ ಮತ್ತು ಮಹಾವೀರರು ಸಾಧುಗಳನ್ನು ಕುರಿತು ನೀವು ನಿರ್ಗ್ರಂಥರು! ಹೊರಗಾಗಲೀ ಅಂತರಂಗದಲ್ಲಾಗಲೀ ಯಾವುದೇ ಗ್ರಂಥದಿಂದ ನೀವು ಬದ್ಧರಾಗಿಲ್ಲ. ನೀವು ಅನಂತಜ್ಞಾನಧಾರಿಗಳಾದ ಭಗವಂತನ ಉಪಾಸಕರಾಗಿದ್ದೀರಿ. ಗ್ರಂಥಗಳಿಂದ ಬಂಧಿಸಲ್ಪಟ್ಟು ಕುಳಿತಿರುವವರು ಕೂಪ ಮಂಡೂಕ (ಬಾವಿ ಕಪ್ಪೆ)ಗಳಿಗೆ ಸಮಾನ. ಭಗವಂತನ ಆ ಅನಂತಜ್ಞಾನವನ್ನು ಪರಿಮಿತಿ ಹೊಂದಿರುವ ಗ್ರಂಥಗಳ ಪುಟಗಳಲ್ಲಿ ತುಂಬಿಡಲು ಸಾಧ್ಯವೇ? ಸಾಧ್ಯವೆಂದಾದರೆ ಸಮುದ್ರದಿಂದ ಒಂದು ಲೋಟ ನೀರನ್ನು ತುಂಬಿಸಿ ತಂದು, ನಾನು ಸಮುದ್ರವನ್ನೇ ತುಂಬಿಸಿ ತಂದೆನೆಂದು ಹೇಳಿದಂತಾಗುವುದು. ನಾವು ಅನಂತಜ್ಞಾನದ ಉಪಾಸಕರಾಗಿರಬೇಕು. ಭಗವಂತನ ಜ್ಞಾನವು ನಿರಾಕಾರ, ನಿರಂಜನ ಹಾಗೂಸರ್ವಜ್ಞವಾಗಿದೆ. ಆ ಅನಂತಜ್ಞಾನದ ಉಪಾಸಕರಾಗಿ ಯಾವುದೇ ಒಂದು ಬಂಧನಕ್ಕೂ ಒಳಪಡಬಾರದು.

ನಾವು ಸತ್ಯವನ್ನು ಒಪ್ಪಿಕೊಳ್ಳಲು ಸದಾ ಸಿದ್ಧರಾಗಿರಬೇಕು. ಈ ಸತ್ಯಸಂಧ-ತೆಯು ಯಾರ ಸ್ವಂತ ಆಸ್ತಿಯೇನಲ್ಲ. ಯಾವುದೇ ಸಂಪ್ರದಾಯ, ದೇಶ ವಿಶೇಷ ಅಥವಾ ಜಾತಿ ವಿಶೇಷಕ್ಕೆ ಇದು ಸಂಬಂಧಿಸಿದ್ದಲ್ಲ. ಸತ್ಯವನ್ನು ಯಾರು ತಾನೇ ಖರೀದಿಸಬಲ್ಲರು? ಪ್ರತಿಯೊಬ್ಬನ ಆತ್ಮನಲ್ಲೂ ಈ ಸತ್ಯವು ಅಂತರ್ನಿಹಿತವಾಗಿದೆ. ಅದನ್ನು ಹೊರ ತರುವ ಉಪಾಯ ರೀತಿ (ವಿಧಿ)ಯನ್ನು ನಮ್ಮ ಋಷಿ-ಮುನಿಗಳು, ತಪಸ್ವಿಗಳು ನಮಗೆ ತಿಳಿಸಿರುತ್ತಾರೆ. ಅವರು ಸ್ವತಃ ಸತ್ಯವನ್ನು ಸಾಕ್ಷಾತ್ಕಾರ ಮಾಡಿ ಕೊಂಡಿದ್ದಾರೆ. ನಾವು ಸತ್ಯವನ್ನೇನೋ ಪೂಜಿಸುತ್ತೇವೆ. ಆದರೆ ಜೀವನದಲ್ಲಿ ಅದನ್ನು ಆಚರಣೆಗೆ ತರುವುದಿಲ್ಲ. ರಾಮನನ್ನು ನಾವೇಕೆ ಪೂಜಿಸುತ್ತೇವೆಯೆಂದರೆ ಅವರು ಸತ್ಯದ ಸಾಕ್ಷಾತ್ ಮೂರ್ತಿಯೇ ಆಗಿದ್ದರು. ಮಹಾವೀರರ ಪೂಜೆ ಏಕೆ ಮಾಡುತ್ತೇವೆ? ಏಕೆಂದರೆ ಅವರು ಸತ್ಯದ ಸಾಕ್ಷಾತ್ಕಾರ ಮಾಡಿಕೊಂಡಿದ್ದರು. ಸತ್ಯದ ಸಾಕ್ಷಾತ್ಕಾರ ಮಾಡಿದವರನ್ನು ನಾವು ಪೂಜಿಸುತ್ತೇವೆ. ಆದರೆ ಅದೇ ಸತ್ಯವನ್ನು ನಾವು ನಮ್ಮ ಜೀವನದಲ್ಲಿ ಆಂಶಿಕ ರೂಪದಲ್ಲೂ ಅಳವಡಿಸಿಕೊಳ್ಳಲು ಸಮರ್ಥರಾಗಿಲ್ಲ, ಈ ಕಾರಣದಿಂದಲೇ ಧರ್ಮಕ್ಕೆ ಕೆಟ್ಟ ಹೆಸರು ಬಂದಿದೆ. ಭಗವಂತನು ನಮಗೆ ತಿಳಿ-ಸಿರುವ ಋಷಿ-ಮುನಿಗಳು ನಮಗೆ ಬೋಧಿಸಿರುವ ರೀತಿಯಲ್ಲಿ ಸತ್ಯವನ್ನು ನಮ್ಮ ಜೀವನಕ್ಕೆ ಅಳವಡಿಸಿಕೊಂಡು ಸತ್ಯದ ಸಾಕ್ಷಾತ್ಕಾರ ಹೊಂದಲು ಸಾಧ್ಯವಿದೆ. ಹಾಗಾ ದರೆ ಮಾತ್ರ ನಾವು ಅವರ ಉಪಾಸಕರೆನಿಸಿಕೊಳ್ಳಲು ಅರ್ಹತೆ ಪಡೆಯಬಹುದು.

ಈ ಸತ್ಯವನ್ನು ಬೇರೊಬ್ಬರು ನಮಗೆ ಕೊಡಬೇಕಾಗಿಲ್ಲ. ಸತ್ಯವು ಪ್ರತ್ಯೇಕ ಆತ್ಮನಲ್ಲಿ ಅಡಗಿದೆ. ಆದುದರಿಂದಲೇ ತಿಳಿದವರು ಸತ್ಯವೇ ದೇವರೆಂದು ಹೇಳುತ್ತಾರೆ. ಅದಕ್ಕಾಗಿ 'ಸತ್ಯಂ, ಶಿವಂ, ಸುಂದರಂ' ಎಂಬ ಪರಿಭಾಷೆಯನ್ನೇ ರಚಿಸಿ ಬಿಟ್ಟಿದ್ದಾರೆ. ಆದರೆ ಇಂದಿನ ಭೌತಿಕವಾದಿಗಳು 'ಸುಂದರಂ, ಸತ್ಯಂ, ಶಿವಂ' ಎನ್ನುತ್ತಿದ್ದಾರೆ. ಆದರೆ

ಇಂತಹ ಸೌಂದರ್ಯಕ್ಕೆ ಯಾವ ಇತಿ-ಮಿತಿ ಎಂಬುದೇ ಇಲ್ಲ. ಯಾವುದರಲ್ಲಿ ಸತ್ಯ ವಿದೆಯೋ ಅದು ಸುಂದರವಾಗಿದೆ. ಯಾವುದರಲ್ಲಿ ಸತ್ಯತೆ ಇಲ್ಲವೋ ಅದು ಸುಂದರವೂ ಅಲ್ಲ. ಆ ಸತ್ಯವೆಲ್ಲಿದೆ? ಅದು ಆತ್ಮನಲ್ಲಿದೆ. ಆತ್ಮನಿಗಿಂತ ಸುಂದರವಾದುವು ಮೂರು ಲೋಕದಲ್ಲೇ ಇಲ್ಲ. ಹೀಗೆ ಸತ್ಯವೆಲ್ಲಿದೆ ಆತ್ಮನಲ್ಲಿದೆ. ಸುಂದರನಾರು? ಆತ್ಮ. ಆದುದರಿಂದ ಅನಂತ ಸಮಯದ ವರೆಗೆ ಸೌಂದರ್ಯವನ್ನು ಅರಿಯುವ ಶಕ್ತಿಯು ಆತ್ಮನಲ್ಲಿರಬೇಕಾದರೆ ಆತ್ಮನು ಸ್ವಯಂ ಎಷ್ಟು ಸುಂದರನಿರಬಹುದೆಂಬುದನ್ನು ಸುಲಭವಾಗಿ ಊಹಿಸಬಹುದು. ಆ ಸೌಂದರ್ಯವನ್ನು ಪ್ರಕಟಗೊಳಿಸಲು ಸತ್ಯದ ಅವಶ್ಯಕತೆ ಇದೆ. ಆ ಸತ್ಯವು ಓರ್ವ ಅಕಿಂಚನ (ಬಡವ)ನಲ್ಲೂ ಇರಬಹುದು. ಈ ಸತ್ಯವು ಗುಡಿಸಲಿನಲ್ಲಿ ವಾಸ ಮಾಡುವ ದರಿದ್ರನಲ್ಲೂ ಇರಬಹುದು. ಏಕೆಂದರೆ ಸತ್ಯವು ಪ್ರತಿಯೊಬ್ಬ ಆತ್ಮನಲ್ಲೂ ಇದೆ. ಆದರೆ ಅದನ್ನು ಪ್ರಕಟಗೊಳಿಸಬೇಕು. ಸತ್ಯ ಮತ್ತು ಅಹಿಂಸೆಗಳು ಆತ್ಮನ ಪರ್ಯಾಯವಾಚೀ ಶಬ್ದಗಳಾಗಿವೆ. ಸತ್ಯ ಮತ್ತು ಅಹಿಂಸೆ ಇಲ್ಲದ ಆತ್ಮನೇ ಇಲ್ಲ. ಆದರೆ ಇಷ್ಟು ಮಾತ್ರ ನಿಜ ಕೆಲವರಲ್ಲಿ ಆಂಶಿಕ ರೂಪದಲ್ಲಿರಬಹುದು ಮತ್ತೆ ಕೆಲವರಲ್ಲಿ ವಿಕಸಿತರೂಪದಲ್ಲಿ ತೋರಬಹುದು.

ಧರ್ಮವು ಆತ್ಮನಲ್ಲೇ ಇದೆ. ಧರ್ಮವು ಹೊರಗೆ (ಬಯಲು) ಎಲ್ಲೂ ಇಲ್ಲ. ಧರ್ಮವು ಪುಸ್ತಕಗಳಲ್ಲೂ ಇಲ್ಲ. ಪುಸ್ತಕವು ಧರ್ಮದ ಮಾರ್ಗವನ್ನು ಮಾತ್ರ ತೋರಿಸಬಲ್ಲುದು. ಧರ್ಮವು ನಿಮ್ಮಲ್ಲಿದೆ. ಅದು ನಮ್ಮ ನಮ್ಮಲ್ಲೇ ಇದೆ.

## ಮತಿ ಮತ್ತು ಶ್ರುತಜ್ಞಾನ

ಪರೋಕ್ಷ ಜ್ಞಾನವು ಮತಿ ಮತ್ತು ಶ್ರುತವೆಂದು ಎರಡು ವಿಧವಾಗಿದೆ. ಆತ್ಮ ಮತ್ತು ಪರಮಾತ್ಮನ ವಿಚಾರದಲ್ಲಿ ಮನುಷ್ಯನಿಗೆ ಜಿಜ್ಞಾಸೆ ಬಹುಕಾಲದಿಂದಲೂ ಇದೆ. ಗೌತಮ ಮಹಾನ್ ಆಚಾರ್ಯರಾಗಿದ್ದರು. ಅವರು ಭಗವಾನ್ ಮಹಾವೀರರ ಜ್ಞಾನ-ವಿಜ್ಞಾನ, ತಪಶ್ಚರ್ಯ, ತ್ಯಾಗ ಮುಂತಾದುವುಗಳ ವಿಚಾರವಾಗಿ ಕೇಳಿ ತಿಳಿದಿದ್ದರು. ಅವರು ಸಮವಸರಣಕ್ಕೆ ಬಂದು ತಮ್ಮ ಸಂದೇಶಗಳನ್ನು ನಿವಾರಿಸಬೇಕೆಂದು ಕೇಳಿಕೊಂಡರು. ಇದರಿಂದ ನಿಮ್ಮ ಅಥವಾ ನನ್ನ ಶಕ್ತಿಯ ಪರೀಕ್ಷೆಯಾಗಲಿ, ಕೆಲವರು ಆತ್ಮನು ನಾಶವಾಗುತ್ತಾನೆ ಎನ್ನುತ್ತಾರೆ. ಮತ್ತೆ ಕೆಲವರು ಅವನನ್ನು ಅಜರ ಮತ್ತು ಅಮರ ಎನ್ನುತ್ತಾರೆ. ಇನ್ನು ಕೆಲವರು ಅವನನ್ನು ಜ್ಞಾನಮಯ ಅನ್ನುತ್ತಾರೆ. ಆತ್ಮನು ನಾಶ ಶೀಲನೇ? ಶಾಶ್ವತನೇ? ಅಥವಾ ಜ್ಞಾನಮಯನೇ? ನನಗೆ ತಿಳಿಸಬೇಕು.

ಭಗವಾನ್ ಮಹಾವೀರರು ಉತ್ತರಿಸಿದರು-ಆತ್ಮನು ಶಾಶ್ವತ ಮತ್ತು ಅಶಾಶ್ವತನಾಗಿದ್ದಾನೆ. ಗೌತಮರು ಕೇಳುತ್ತಾರೆ-ಒಬ್ಬ ಆತ್ಮನೇ ಶಾಶ್ವತ ಮತ್ತು ಅಶಾಶ್ವತನಾಗಿ ಎರಡು ರೀತಿ ಇರಲು ಹೇಗೆ ಸಾಧ್ಯ? ಮಹಾವೀರರು ಹೇಳುತ್ತಾರೆ. ಸಮುದ್ರದಲ್ಲಿ ಅಲೆಗಳೇಳುತ್ತವೆ. ಮತ್ತು ನಾಶ ಹೊಂದುತ್ತವೆ. ಆದರೆ ನೀರು ನಾಶವಾಗುವುದಿಲ್ಲ. ಅದೇ ರೀತಿ ವಿಚಾರಗಳು ಬರುತ್ತವೆ ಹೋಗುತ್ತವೆ. ಆದರೆ ವಿಚಾರಶೀಲನಾದ ಆತ್ಮ ನಷ್ಟ ಹೊಂದುವುದಿಲ್ಲ. ಪರ್ಯಾಯಗಳು ನಷ್ಟಗೊಂಡರೂ ದ್ರವ್ಯ ನಾಶವಾಗುವುದಿಲ್ಲ. ಪರ್ಯಾಯಗಳು ಬದಲಾಗುತ್ತವೆ. ದ್ರವ್ಯವು ಮಾತ್ರ ಶಾಶ್ವತ

ವಾಗಿರುತ್ತದೆ, ಅಜರಾಮರವಾಗಿರುತ್ತದೆ. ಇದೇ ರೀತಿ ಚೈತನ್ಯಮಯನಾದ ಆತ್ಮನು ಎಂದೂ ನಷ್ಟ ಹೊಂದುವುದಿಲ್ಲ. ಶಾಶ್ವತ ಅಜರಾಮರನಾಗಿರುತ್ತಾನೆ. ನಾವು ಕೇವಲ ಪರ್ಯಾಯವನ್ನು ಹಿಡಿದು ಕೂತಿದ್ದೇವೆ. ಅದನ್ನೇ ಶಾಶ್ವತ ಮತ್ತು ಸತ್ಯವೆಂದು ನಂಬಿ ತಪ್ಪು ಮಾಡುತ್ತೇವೆ. ಒಂದೊಂದು ಸಮಯದಲ್ಲೂ ಬದಲಾಗುತ್ತಿರುವ ಪರ್ಯಾಯದ ಕಡೆಗೆ ನಮ್ಮ ಗಮನವೇ ಹರಿಯುವುದಿಲ್ಲ. ಸಾಮಾಜಿಕ ಆಚಾರ–ವಿಚಾರಗಳು ಅನಾದಿ ಕಾಲದಿಂದಲೂ ಪರಿವರ್ತನಶೀಲವಾಗಿವೆ. ಆದರೆ ಧರ್ಮವು ಅಜರ–ಅಮರವಾಗಿದೆ. ಅಗ್ನಿಯ ಧರ್ಮ ಸುಡುವುದಾಗಿದೆ. ಸುಡುವ ಸ್ವಭಾವ (ಧರ್ಮ) ಅದರಿಂದ ಎಂದಿಗೂ ಬೇರ್ಪಡುವುದಿಲ್ಲ. ಆದುದರಿಂದಲೇ ಬ್ರಹ್ಮ (ಆತ್ಮ) ಮತ್ತು ಅಗ್ನಿ ಎರಡನ್ನು ಪವಿತ್ರವೆಂದು ತಿಳಿಯಲಾಗಿದೆ. ಧ್ಯಾನಾಗ್ನಿಯು ಸಮಸ್ತ ಕರ್ಮಗಳನ್ನು ಸುಟ್ಟು ಬೂದಿ ಮಾಡುತ್ತದೆ. ಈ ಧ್ಯಾನರೂಪದ ಅಗ್ನಿಯು ನಮ್ಮ ಆತ್ಮನಲ್ಲಿ ನೆಲಸಿರುತ್ತದೆ.

## ಅನಾಸಕ್ತ ಅಲ್ಪಜ್ಞಾನಿಯೂ ಮೋಕ್ಷಮಾರ್ಗಿಯಾಗುತ್ತಾನೆ

ಜ್ಞಾನವು ಅಲ್ಪವೇ ಇರಲಿ, ಆದರೆ ಅದನ್ನು ಜೀವನದಲ್ಲಿ ಆಚರಣೆಗೆ ತರುವುದೇ ಬಹಳ ಮುಖ್ಯವೆಂದು ಭಾರತೀಯ ಧರ್ಮ ಮತ್ತು ತತ್ತ್ವಜ್ಞಾನದಲ್ಲಿ ವರ್ಣಿತವಾಗಿದೆ. ಆಚಾರಕ್ಕೆ ಹೆಚ್ಚಿನ ಮಹತ್ತ್ವ ನೀಡಲಾಗಿದೆ. ನಿರ್ಮೋಹಿಯಾದ ಅಲ್ಪಜ್ಞಾನಿಯು ಮೋಕ್ಷಮಾರ್ಗಸ್ಥನಾಗುತ್ತಾನೆ. ನಮ್ಮಲ್ಲಿ ಮೋಹರಹಿತವಾದ ಜ್ಞಾನಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುತ್ತಾರೆ; ಮತ್ತು ಅಂತಹ ಜ್ಞಾನವೇ ಮುಕ್ತಿಗೆ ಕಾರಣವಾಗಿದೆ. ಆದುದರಿಂದಲೇ ಕುಂದಕುಂದಾಚಾರ್ಯರು ಸಮಯಸಾರ ಗ್ರಂಥದ 21–22ನೆಯ ಗಾಥೆಗಳಲ್ಲಿ ತನ್ನಿಂದ ಭಿನ್ನವಾದ ಸ್ತ್ರೀ–ಪುತ್ರಾದಿ ಚೇತನ, ಧನಧಾನ್ಯಾದಿ ಅಚೇತನ, ಗ್ರಾಮ ನಗರಾದಿ ಚೇತನಾಚೇತನ ವಸ್ತುಗಳು ಪರವಸ್ತುಗಳಾಗಿವೆ. ಇವುಗಳ ಸಂಬಂಧದಲ್ಲಿ ಇವೆಲ್ಲ ನಾನು ಮತ್ತು ನನ್ನವು, ಹಿಂದೆಯೂ ನಾನು ಹೀಗೆ ಇದ್ದೆ, ಮುಂದೆಯೂ ನಾನು ಹೀಗೆಯೇ ಇರುತ್ತೇನೆ, ಇವೆಲ್ಲ ನನ್ನ ಸ್ವರೂಪಗಳು, ಇವು ನನ್ನವು, ಈ ಹಿಂದೆಯೂ ನನ್ನವಾಗಿದ್ದುವು, ಭವಿಷ್ಯದಲ್ಲೂ ನನ್ನವಾಗಿಯೇ ಇರುವುವು. ಈ ರೀತಿಯಾದ ಸುಳ್ಳು ವಿಕಲ್ಪಗಳನ್ನು ಮಾಡುವವನು ಅಜ್ಞಾನಿಯಾಗಿದ್ದಾನೆ. ಯಾರು ಪರಮಾರ್ಥವಾಗಿ ವಸ್ತುಸ್ವರೂಪವನ್ನು ತಿಳಿದವನಾಗಿ ಸುಳ್ಳು ವಿಕಲ್ಪ (ಕಲ್ಪನೆ) ಮಾಡದವನೇ ಜ್ಞಾನಿಯಾಗಿದ್ದಾನೆ ಎಂದಿದ್ದಾರೆ.

ಈ ವಸ್ತುವು ನನ್ನದು, ನನ್ನದಾಗಿತ್ತು ಹಾಗೂ ನನ್ನದಾಗಿರುವುದು. ನನ್ನ ಸ್ವರೂಪ ಸಂಬಂಧ ಇದಾಗಿದೆ, ಇದೇ ಆಗಿರುವುದು. ಹೀಗೆ ತಿಳಿಯುವುದೇ ಮಿಥ್ಯಾಜ್ಞಾನವಾಗಿದೆ. ಈಗ ನನ್ನ ಈ ಶರೀರವೂ ಕೂಡ ನನ್ನದಲ್ಲ. ಹೀಗಿರುವಾಗ ಇವೆಲ್ಲ ಪರಿಗ್ರಹಗಳು ನನ್ನವು ಹೇಗಾದಾವು? ಎಂದು ವಿವೇಕ ತಾಳಿ ನಮ್ಮ ಶಾಶ್ವತ ಆತ್ಮನ ವಿಚಾರದೊಳಗೆ ತೊಡಗಿರಬೇಕು.

## ಕರ್ತವ್ಯವೂ ಧರ್ಮವಾಗಿದೆ

ಸಂಯೋಗವನ್ನು ನಾವು ಶಾಶ್ವತವೆಂದು ನಂಬಿ ಕೂತಿದ್ದೇವೆ. ಮುಂದಿನ ಜನ್ಮದ

ತನಕವೂ ಜೋಡಿಸುತ್ತೇವೆ, ಹಿಂದಿನ ಪೀಳಿಗೆಗೂ ಜೋಡಿಸುತ್ತೇವೆ. ಇದೇ ದೊಡ್ಡ ಮಿಥ್ಯಾತ್ವವಾಗಿದೆ. ಕಣ್ಣು ಮುಚ್ಚಿದ ಮೇಲೆ ಈ ಶರೀರವೂ ಸಹ ನಮ್ಮದಾಗಿ ಉಳಿಯುವುದಿಲ್ಲ ಅಂದ ಮೇಲೆ ಪರ ವಸ್ತುಗಳ ಬಗ್ಗೆ ಹೇಳುವುದೇನಿದೆ? ಕರ್ತವ್ಯ ಪಾಲನೆಯು ನಮ್ಮ ಪರಮ ಧರ್ಮವಾಗಿದೆ. ಅದಕ್ಕೆ ಭಿನ್ನವಾದ ಧರ್ಮ ಬೇರಿಲ್ಲ. ದೇಶದ ಬಗ್ಗೆ, ಸಮಾಜದ ಬಗ್ಗೆ, ತನ್ನ ಆತ್ಮನ ಬಗ್ಗೆ ಮಾಡಬೇಕಾದ ಕರ್ತವ್ಯ ಇವೆಲ್ಲ ಧರ್ಮಗಳಾಗಿವೆ. ಆದರೆ ನೆನಪಿರಲಿ! ಯಾವ ಕರ್ತವ್ಯದಿಂದ ಮುಂದಕ್ಕೆ ಹೋಗುವುದಿಲ್ಲವೋ ಅವನು ಮುಳುಗುವನು, ನಾಶ ಹೊಂದುವನು. ಅವನ ಹೆಸರು ಕಲಂಕಿತವಾಗುವುದು. ಈ ಸಂಸಾರದಲ್ಲಿ ಯಾರು ಮುಳುಗಿರುತ್ತಾನೋ ಅವನು ನಷ್ಟವಾದಂತೆಯೇ ಸರಿ.

## ಸಂಗ್ರಹ = ಮುಳುಗುವುದು, ತ್ಯಾಗ = ತೇಲುವುದು

ರಾಮನು ತ್ಯಾಗ ಮಾಡುತ್ತಾನೆಂದೇ ನಾವು ಅವನನ್ನು ಪೂಜಿಸುತ್ತೇವೆ. ರಾಮನು ಬಿಡುತ್ತಾ ಹೋದ, ನಾವು ಸಂಗ್ರಹಿಸುತ್ತ ಹೋಗುತ್ತೇವೆ. ಯಾರು ಕೂಡಿಡುತ್ತಾ ಹೋಗುತ್ತಾನೋ ಅವನು ಮುಳುಗುತ್ತ ಹೋಗುತ್ತಾನೆ. ಯಾರು ಬಿಡುತ್ತಾ (ತ್ಯಾಗ ಮಾಡುತ್ತ) ಹೋಗುತ್ತಾರೋ ಅವರು ತೇಲುತ್ತ ಹೋಗುತ್ತಾರೆ. ಆತ್ಮನು ನಿರ್ದೋಷಿಯಾಗಿದ್ದಾನೆ. ಯಾವಾಗ ಅವನು ಪರ್ಯಾಯಗಳಲ್ಲಿ ಸಿಕ್ಕಿ-ಹಾಕಿಕೊಳ್ಳುತ್ತಾನೋ ಆಗ ಆತ ದಿನ-ರಾತ್ರಿಯ ಸುಳಿಯಲ್ಲಿ ಸಿಕ್ಕಿ ಬೀಳುತ್ತಾನೆ. ಯಾವಾಗ ಪರ್ಯಾಯಗಳಲ್ಲಿ ಸಮಾನ ಬುದ್ಧಿಯನ್ನು ತಾಳುತ್ತಾನೋ ಆಗ ಅವನಲ್ಲಿ ಭೇದ-ವಿಜ್ಞಾನ ಉದಯವಾಗುತ್ತದೆ. 'ಕಷಾಯ ಪಾಹುಡ'ದ 180 ಗಾಥೆಗಳಲ್ಲಿ ಕ್ರೋಧ, ಮಾನ, ಮಾಯಾ, ಲೋಭ, ಕಷಾಯಗಳ ವರ್ಣನೆ ಬರುತ್ತದೆ. ಅದರ ಮೇಲೆ ವೀರಸೇನಾಚಾರ್ಯರು 'ಜಯಧವಲಾ' ಎಂಬ ಟೀಕೆಯನ್ನು ರಚಿಸಿದ್ದಾರೆ. ಅಂತರಂಗದಲ್ಲಿರುವ ಕಷಾಯಗಳನ್ನು ಹೇಗೆ ಗೆಲ್ಲಬೇಕು? ಕಷಾಯಗಳನ್ನು ಗೆಲ್ಲುವುದು ಬಹಳ ಕಷ್ಟದ ವಿಷಯ. ಕಷಾಯಗಳನ್ನು ಜಯಿಸುವ ವಿಧಾನ ಆ ಸೂತ್ರಗಳಲ್ಲಿದೆ.

## ಸೂತ್ರ / ಉತ್ಥಾನ – ಶಕ್ತಿ

ಈ ಚಿಕ್ಕ ಚಿಕ್ಕ ವಾಕ್ಯಗಳು ಸಾರಭೂತವಾಗಿರುತ್ತವೆ. ಅವುಗಳಿಗೆ ಸೂತ್ರವೆನ್ನುತ್ತಾರೆ. ಸೂತ್ರಗಳು ಏಳು ರೀತಿಯ ವಿಶೇಷತೆಗಳಿಂದ ಕೂಡಿರುತ್ತವೆ. ಅಲ್ಪಾಕ್ಷರ, ಸಾರಯುಕ್ತ, ಅಸಂದಿಗ್ಧ, ಗೂಢಾರ್ಥ, ನಿರ್ದೇಶ, ಹೇತು ಮತ್ತು ಸತ್ಯ. ಇವೇ ಆ ಏಳು ವೈಶಿಷ್ಟ್ಯಗಳಾಗಿವೆ. ಇವುಗಳಿಂದ ಕೂಡಿರುವ ಚಿಕ್ಕ ವಾಕ್ಯಗಳಿಗೆ ಸೂತ್ರವೆನ್ನುತ್ತಾರೆ.

ನಮ್ಮ ಭಾರತೀಯ ಪರಂಪರೆಗೆ ಅನುಸಾರವಾಗಿ ತತ್ತ್ವಜ್ಞಾನದ ಸೂತ್ರಗಳಿಗೆ ಮೇಲೆ ಸೂಚಿಸಿರುವ ಏಳು ಬಂಧನಗಳಿರುತ್ತವೆ. ಈ ಬಂಧನಗಳಿಲ್ಲದವುಗಳಿಗೆ ಸೂತ್ರವೆನ್ನಲಾಗದು. ಸೂತ್ರ ಶಬ್ದಕ್ಕೆ ದಾರ ಮತ್ತು ವಾಕ್ಯ ಎಂದು ಎರಡು ಅರ್ಥಗಳಿವೆ. ವಿಶೇಷ ಅರ್ಥಗಳಿಂದ ಕೂಡಿರುವ ವಾಕ್ಯಗಳೇ ಸೂತ್ರವೆನಿಸುತ್ತವೆ. ಕುಂದಕುಂದಾ-ಚಾರ್ಯರೂ ಇದನ್ನೇ ಹೇಳುತ್ತಾರೆ. ಸೂತ್ರ (ಹಗ್ಗ) ವನ್ನು ಹಿಡಿದುಕೊಂಡು

ಮನುಷ್ಯನು ಹೇಗೆ ಮೇಲೇರುತ್ತಾನೋ ಅದೇ ಪ್ರಕಾರ ಸೂತ್ರ (ಸಿದ್ಧಾಂತ-ವಾಕ್ಯ) ಗಳನ್ನು ಅವಲಂಬಿಸಿದವರು ಸಿದ್ಧಾಲಯ (ಮೋಕ್ಷ)ದ ತನಕ ಮೇಲಕ್ಕೇರಬಹುದು. ಸಮ್ಯಗ್ದರ್ಶನಕ್ಕೆ ನಿಮಿತ್ತ ಕಾರಣವಾಗಿರುವುದು ಸೂತ್ರವೇ ಆಗಿದೆ. ಜೀವನವನ್ನು ಮೇಲಕ್ಕೆತ್ತುವ ಶಕ್ತಿ ಸೂತ್ರಕ್ಕಿದೆ. ಸೂತ್ರವನ್ನು ಸ್ಮರಣೆಯಲ್ಲಿಡಬೇಕು. ಮನನ ಮಾಡುವುದು ಅವುಗಳ ಭಾವಾರ್ಥವನ್ನು ಜೀವನದಲ್ಲಿ ಅಳವಡಿಸಿಕೊಳ್ಳುವುದು ಬಹಳ ಅವಶ್ಯಕವಾಗಿದೆ. ಸ್ವಾಧ್ಯಾಯದ ಅಗತ್ಯವಿದೆ. ಭಗವಂತನು ಬೋಧಿಸಿರುವ ಸೂತ್ರ ಗಳನ್ನು ಜೀವನಕ್ಕೆ ಹೆಣೆದುಕೊಂಡಿದ್ದರೆ ನಮ್ಮ ಆತ್ಮನು ಸಂಸಾರದಲ್ಲಿ ಮುಳುಗಲು ಬಿಡದೆ ಆ ಸೂತ್ರಗಳು ಆತ್ಮನನ್ನು ಮೇಲಕ್ಕೆತ್ತುತ್ತವೆ.

## ಸ್ಯಾದ್ವಾದದ ಮಹತ್ತ್ವ

ನಾವು ಈ ನಕಲೀ ಸಂಸಾರವನ್ನು ಅಸಲೀ (ಸತ್ಯ) ಎಂಬ ಭ್ರಾಂತಿಯಿಂದ ಅದನ್ನು ಜಿನ್ನಟ್ಟಿ, ಆತ್ಮನನ್ನು ಮರೆತು ನಕಲೀ ಸಂಸಾರದ ವೈಭವಗಳಿಗೆ ಮಾರು ಹೋಗಿದ್ದೇವೆ. ಯಾವಾಗ ನಮಗೆ ಅಸಲಿ ಆತ್ಮನ ಧರ್ಮ ಮತ್ತು ತತ್ತ್ವಜ್ಞಾನದ ಅರಿವು ಮೂಡುವುದೋ ಆಗ ನಾವು ಅಸಲೀ ಆತ್ಮ ಮತ್ತು ನಕಲೀ ಆತ್ಮನನ್ನು ಗುರು ತಿಸಬಹುದು. ಹಾಗೂ ಸಂಸಾರ ದುಃಖದಿಂದ ಮುಕ್ತರಾಗಬಹುದು. ಅದಕ್ಕಾಗಿಯೇ ನಮ್ಮ ಆಚಾರ್ಯರು ಸೂತ್ರ ಗ್ರಂಥಗಳ ರಚನೆ ಮಾಡಿಟ್ಟಿದ್ದಾರೆ. ಭಗವಾನ್ ಮಹಾ-ವೀರರು ತತ್ತ್ವಜ್ಞಾನವನ್ನು ಸ್ಯಾದ್ವಾದದ ಮೂಲಕ ಉಪದೇಶಿಸಿದ್ದಾರೆ. ಸ್ಯಾದ್ವಾದ ದಿಂದಲ್ಲದೆ ತತ್ತ್ವಜ್ಞಾನವನ್ನು ನಾವು ತಿಳಿಯಲಾರೆವು. ಒಂದು ವಸ್ತುವಿನಲ್ಲಿ ಎರಡು ವಿರೋಧ ಧರ್ಮಗಳಿರುವುದನ್ನು ಸ್ಯಾದ್ವಾದದಿಂದಲೇ ನಾವು ಅರಿಯಲು ಸಾಧ್ಯ! ಏಕೆಂದರೆ ಪ್ರತಿಯೊಂದು ವಸ್ತುವಿನಲ್ಲಿ ಅನಂತವಾದ ಗುಣಾತ್ಮಕ ಧರ್ಮ ತುಂಬಿರು ತ್ತವೆ. ಪ್ರತಿಯೊಬ್ಬ ಜೀವಾತ್ಮನಲ್ಲೂ ಅನಂತ ಧರ್ಮಗಳು ನೆಲೆಸಿವೆ. ಪ್ರಕಟವಾಗಿ ರುವುದನ್ನೇ ನಾವು ಸತ್ಯವೆಂದು ನಂಬಿದ್ದೇವೆ. ಅಪ್ರಕಟ ರೂಪದಲ್ಲಿರುವ ಧರ್ಮಗಳನ್ನು ನಾವು ಅರಿಯುವುದಿಲ್ಲ. ರಾಮನು ದಶರಥನ ಮಗ, ಜನಕನ ಅಳಿಯ, ಲಕ್ಷ್ಮಣನ ಅಣ್ಣ, ಸೀತೆಯ ಪತಿಯೂ ಆಗಿರುತ್ತಾನೆ. ಎಲ್ಲರ ರಾಮನೂ ಆಗಿದ್ದಾನೆ. ರಾಮ ನನ್ನು ಅನೇಕ ದೃಷ್ಟಿಯಿಂದ ನೋಡುವಾಗ ಅದು ಸ್ಪಷ್ಟವಾಗುತ್ತದೆ. ಒಂದು ಪದಾರ್ಥದಲ್ಲಿ ಅನೇಕ ಗುಣ ಧರ್ಮಗಳಿರುತ್ತವೆ. ಪರ್ಯಾಯಗಳು ಪರಿವರ್ತನೆ ಹೊಂದುತ್ತವೆ. ಮನುಷ್ಯನು ಸಹ ೮೪ ಲಕ್ಷ ಯೋನಿಗಳಲ್ಲಿ ಪರ್ಯಾಯಗಳನ್ನು ಬದಲಾಯಿಸುತ್ತ ಬಂದಿದ್ದರೂ ಮಿಥ್ಯಾತ್ವದ ಅಭ್ಯಾಸವನ್ನು ಬಿಟ್ಟಿಲ್ಲ ಮಿಥ್ಯಾತ್ವವನ್ನು ಬಿಡದ ಹೊರತು ಸಮ್ಯಕ್ತ್ವದ ಪ್ರಾಪ್ತಿ ಹೇಗೆ ಸಾಧ್ಯವಾಗುತ್ತದೆ?

ದಕ್ಷಿಣದ ಮತ್ತು ಉತ್ತರದ ಸಂಬಂಧವು ಬಹುಕಾಲದಿಂದಲೂ ಇದೆ. ದಕ್ಷಿಣ ದಿಂದ ಮೋಡಗಳು ಚಲಿಸುತ್ತವೆ. ಹಿಮಾಲಯದತ್ತ ಮಳೆ ಸುರಿಯುತ್ತದೆ. ಅದು ನೀರಾಗಿ ಸಮುದ್ರದೆಡೆಗೆ ಹರಿಯುತ್ತವೆ. ದಕ್ಷಿಣ ಭಾರತದಿಂದ ಶಂಕರಾಚಾರ್ಯ, ಮಧ್ವಾಚಾರ್ಯ, ಕುಂದಕುಂದಾಚಾರ್ಯರೇ ಮುಂತಾದ ಅನೇಕ ಆಚಾರ್ಯರು ಉತ್ತರ ಭಾರತದಲ್ಲಿ ಸಂಚರಿಸಿ ಹೊರಟುಹೋದರು. ನಾವು ಸಹ ದಕ್ಷಿಣದಿಂದ ಬಂದೆವು. ಉತ್ತರದಿಂದ ಪುನಃ ದಕ್ಷಿಣದ ಕಡೆಗೆ ಹೊರಟ್ಟಿದ್ದೇವೆ. ಹೀಗೆ ಉತ್ತರ

ದಕ್ಷಿಣಗಳಲ್ಲಿ ಆದಾನ–ಪ್ರದಾನ ನಿರಂತರವಾಗಿ ನಡೆದು ಬಂದಿರುತ್ತದೆ. 'ಪ್ರವಚನ' (ಪ್ರ–ವಚ್) ಸಂಸ್ಕೃತದ ತತ್ಸಮ ಶಬ್ದವಾಗಿದೆ. ಚೆನ್ನಾಗಿ ತಿಳಿದುಕೊಂಡು ಹೇಳುವುದು ಎಂದು ಈ ಶಬ್ದದ ಅರ್ಥ. ಅರ್ಥ ವಿವರಿಸಿ ನುಡಿಯುವುದು–ಹೇಳುವುದೇ ಪ್ರವಚನ. ಪ್ರವಚನವು ಮಹತ್ತ್ವ ದೃಷ್ಟಿಯಿಂದ ಭಾಷಣ–ವ್ಯಾಖ್ಯಾನಗಳಿಂದ ದೊಡ್ಡದು. ಭಾಷಣದಂತೆ ಪ್ರವಚನವು ಪ್ರತಿಯೊಬ್ಬ ವ್ಯಕ್ತಿಗೆ ನಿಲುಕುವ ವಿಷಯವಲ್ಲ. ಪ್ರವಚನವು ಸಾಧು ಸಂತ ಪುರುಷರಿಂದ ಮಾತ್ರ ಸಾಧ್ಯ! ಭಾಷಣವನ್ನು ಎಲ್ಲರೂ ಮಾಡಬಹುದು. ಆದರೆ ಹೇಳಿದಂತೆ ನಡೆಯುವ ಋಷಿ ಮುನಿಗಳು ಮಾತ್ರ ಪ್ರವಚನವನ್ನು ನೀಡಬಲ್ಲರು. ಅವರು ಭಾಷೆಯನ್ನು ಜೀವಂತವಾಗಿ ಬಳಸುತ್ತಾರೆ. ಯಾವ ಕಪಟ ಮಾಯಾಚಾರ ಅವರಲ್ಲಿರುವುದಿಲ್ಲ. ಅಂತಹ ಮಹಾಪುರುಷರು ಪ್ರವಚನ ನೀಡುತ್ತಾರೆ. ಆದುದರಿಂದ ಪ್ರವಚನವು ಭಾಷಣ ಮತ್ತು ವ್ಯಾಖ್ಯಾನಗಳಿಗಿಂತಲೂ ಹೆಚ್ಚಿನ ಕೋಮಲ–ಸುಕುಮಾರ ಶಬ್ದವಾಗಿದೆ. 'ಪ್ರವಚನ ಮತ್ತು ಪ್ರವಂಚನ'ಗಳಲ್ಲಿ ಒಂದು ಬಿಂದುವಿನ ಅಂತರ ಮಾತ್ರ ಇದ್ದರೂ 'ಚಿತೆ ಮತ್ತು ಚಿಂತೆ' ಗಳಿರುವಷ್ಟೇ ಅರ್ಥ ವ್ಯತ್ಯಾಸವಿದೆ. ಪ್ರವಚನಕಾರನು ವಾಗ್ಮಿಯಾಗಿರುತ್ತಾನೆ. ಅವನ ವಾಣಿಯು ತುಂಬಾ ಆಳದಲ್ಲಿ ಆತನ ಕ್ರಿಯಾ ಕಲಾಪದೊಂದಿಗೆ ಸಂಬಂಧ ಹೊಂದಿರುತ್ತದೆ.

ಹೀಗೆ ಭಾಷಣ, ವ್ಯಾಖ್ಯಾನ ಮತ್ತು ಪ್ರವಚನಗಳ ಪ್ರಮಾಣ [ಪರಿಮಿತಿ] ಹಾಗೂ ಗುಣ ಮಟ್ಟಗಳ ಅಂತರವನ್ನು ನಾವು ಅರಿತಂತಾಯಿತು. 'ಭಾಷಣವು' ಕೇವಲ ಕಥನ [ಹೇಳಿಕೆ] ವಾಗಿದೆ. ಅದು ತಾತ್ಕಾಲಿಕಕ್ಕೆ ಸಂಬಂಧಿಸಿರುತ್ತದೆ. 'ವ್ಯಾಖ್ಯಾನ'ವು ವಿಷಯ ನಿರೂಪಣೆಯಾಗಿದೆ. ಅದರ ಸಂಬಂಧ ವಿದ್ವತ್ತಿನೊಡನೆ ಇರುತ್ತದೆ. ಪ್ರವಚನವು ಜೀವನದೊಂದಿಗೆ ಸಮನ್ವಯಗೊಂಡು ಚಾರಿತ್ರದ ರೂಪವನ್ನು ತಳೆಯುತ್ತದೆ. ನಾಲಗೆಯಿಂದ ಪ್ರಕಟವಾಗುವ ವಿಚಾರವು ಆಚಾರ ರೂಪವಾಗಿ ನಿಜ ಜೀವನದೊಂದಿಗೆ ಪ್ರಯೋಗಿಸಲ್ಪಟ್ಟಿರುತ್ತದೆ. ಇವುಗಳನ್ನು ನಾವು ಸಮೀಕರಣ ಮಾಡಿ ನೋಡಿದಾಗ ಸಾರಾಂಶ ಈ ಕೆಳಗಿನಂತಾಗಬಹುದು. 'ಭಾಷಣ'–ಭಾಷೆಯನ್ನು ಕಲಾತ್ಮಕವಾಗಿ ಒಮ್ಮೊಮ್ಮೆ ಚಾತುರ್ಯ ಪೂರ್ವಕ ಪ್ರಯೋಗಿಸುವುದು. 'ವ್ಯಾಖ್ಯಾನ' ಭಾಷೆಯನ್ನು ಅರ್ಥವತ್ತಾಗಿ, ಜ್ಞಾನವತ್ತಾಗಿ ಉಪಯೋಗಿಸಿ ಪ್ರಯೋಗಿಸುವುದು. 'ಪ್ರವಚನ' ಭಾಷೆಯನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಪ್ರಾಮಾಣಿಕವಾಗಿ ಪ್ರಯೋಗ ಮಾಡುವುದು ಎನ್ನಬಹುದು.

---

ವಿದ್ಯಾನಂದ ವಾಣಿ

## ಮಿಥ್ಯಾದೃಷ್ಟಿ ಯಾರು?

ಯಾವನು ಆತ್ಮನನ್ನು ನೋಡುವ ಹಾಗಿಲ್ಲ, ಯಾವನು ಪರಮಾತ್ಮನ ಚಿಂತನೆ ಮಾಡುವ ಹಾಗಿಲ್ಲ, ಇಂಥವನು ಬಹಿರಂಗದಲ್ಲೇ ದೃಷ್ಟಿಯಿಟ್ಟುಕೊಂಡು ಅದರಲ್ಲೇ ಮಗ್ನನಾಗುವನು. ಇವನು ಮಿಥ್ಯಾದೃಷ್ಟಿ.

# 2. 'ಆರ್ಜವ' ಅಂದರೆ– ಸರಳತೆ, ಸಮಾನತೆ ಅಥವಾ ನಿರಾಡಂಬರ.

ಆರ್ಜವವು ಸಮಾನತೆಯನ್ನು ರಚಿಸುತ್ತದೆ. ಸಮಾನತೆಯ ಸಮತಟ್ಟಾದ ಪ್ರದೇಶದಲ್ಲಿ ಸೂರ್ಯನ ಕಿರಣಗಳು ನೇರವಾಗಿ ಬಿದ್ದು ಅಲ್ಲಿ ಬಹುಕಾಲ ಪ್ರಕಾಶವು ಉಳಿಯುತ್ತದೆ. ಆದರೆ ಉಬ್ಬು-ತಗ್ಗಾದ ಬೆಟ್ಟ-ಗುಡ್ಡಗಳ ಕಂದರ ಭಾಗಗಳಲ್ಲಿ ಪ್ರಕಾಶವು ಅಡ್ಡಟ್ಟವಾಗಿ ಹಾಗೂ ಅಲ್ಲಿ ಸ್ವಲ್ಪ ಕಾಲ ಮಾತ್ರ ಉಳಿಯುತ್ತದೆ. ಸರಳತೆಯಲ್ಲಿ ಪ್ರಕಾಶವನ್ನು ಹೆಚ್ಚು ಹೊತ್ತು ನಿಲ್ಲಿಸುವ ಸಾಮರ್ಥ್ಯವಿದೆ. ಕುಟಿಲತೆಯಲ್ಲಿ ಇರುವುದಿಲ್ಲ.

—ಎಲಾಚಾರ್ಯ ಮುನಿ ವಿದ್ಯಾನಂದರು.

ಆರ್ಜವ ಅಥವಾ ಋಜು ಸ್ವಭಾವ— ಸರಳವಾದ ಭಾಷೆಯಲ್ಲಿ ಹೇಳಬಹುದಾದರೆ ಋಜುತೆ ಅಂದರೆ ಸರಳಭಾವ ಎನ್ನಬಹುದು. ಕುಟಿಲತೆಯ ಅಭಾವವನ್ನು ಆರ್ಜವವು ಸೂಚಿಸುತ್ತದೆ. ಕುಟಿಲತೆಯು ಮಾಯಾಚಾರವನ್ನು ಸೃಷ್ಟಿಸುತ್ತದೆ. ಮಾಯಾಚಾರಿಯಿಂದ ಧಾರ್ಮಿಕ ಭಾವನೆಗಳ ಮೊಳಕೆ ಸುಟ್ಟು ಹೋಗುತ್ತವೆ. ಆತ್ಮಬೋಧವು ಜೀವನದ ಸರ್ವೋತ್ತಮ ಪ್ರಾಪ್ತಿಯಾಗಿದೆ. ಆತ್ಮ ಬೋಧಕ್ಕಾಗಿ ಧರ್ಮವು ಸಾಧನವಾಗಿದೆ. ಧರ್ಮದ ವಿಶದ ರೂಪದ ವರ್ಣನೆ ಮಾಡುತ್ತ ಅದು ಕ್ಷಮೆ, ಮೃದುತ್ವ ಹಾಗೂ ಋಜುತ್ವದಿಂದ ಕೂಡಿದೆ ಎನ್ನುತ್ತಾರೆ. ಆದುದರಿಂದ ಆರ್ಜವ ಧರ್ಮವು ಆತ್ಮನ ಸರಳವಾದ ನಿಷ್ಕಪಟ ಭಾವವನ್ನು ಸೂಚಿಸುತ್ತದೆ.

ಆತ್ಮನಲ್ಲಿ ಸರಳತೆ ಬಂದಾಗಲೇ ಧರ್ಮ ವಿಗ್ರಹದ ಪ್ರವೇಶವಾಗುತ್ತದೆ. ಒಂದು ವೇಳೆ ಆತ್ಮನಲ್ಲಿ ಕುಟಿಲತೆ ಇದ್ದರೆ ಧರ್ಮದ ಸರಳ ಸ್ವರೂಪವು ಅದರಲ್ಲಿ ಹೇಗೆ ಸಮಾವೇಶವಾಗಬಲ್ಲುದು? ಜೀವನವನ್ನು ಧರ್ಮಮಯವನ್ನಾಗಿಸಲು, ವ್ಯಕ್ತಿಗಾಗಲೀ ಸಮಾಜಕ್ಕಾಗಲೀ ರಾಷ್ಟ್ರಕ್ಕೇ ಆಗಲಿ ಸರಳತೆಯನ್ನೇ ಮರೆ ಹೋಗಬೇಕು. ಇಂದು ಆರ್ಜವದ ದರ್ಶನವು ದುರ್ಲಭವಾಗಿದೆ. ಅನಾರ್ಜವ (ಕೌಟಿಲ್ಯ)ವು ಸರ್ವತ್ರ ವಿಸ್ತಾರಗೊಂಡಿದೆ. ಮಾಯಾಚಾರವೆಂಬ ವಾಹನದಲ್ಲೇರಿದ ವ್ಯಕ್ತಿಗಳ ಜಯ ಜಯಕಾರವೇ ಕೇಳಿ ಬರುತ್ತಿದೆ. ಮತ್ತು ಋಜು (ಸರಳ) ಧರ್ಮಿಯರ ತಿರಸ್ಕಾರ ಮಾಡಲಾಗುತ್ತಿದೆ. ಲೋಕಸಭೆಯ ಚುನಾವಣೆಯಂತೆ ಇಂದು ವ್ಯಕ್ತಿ–ವ್ಯಕ್ತಿಗಳು ಜೀವನದ ಪ್ರತಿಯೊಂದು ಸ್ತರದಲ್ಲಿ ಪರಸ್ಪರ ಸವಾಲೊಡ್ಡುತ್ತಿದ್ದಾರೆ. ತಮ್ಮ ಶ್ರೇಷ್ಠತೆಯನ್ನೂ ಇತರರ ಹೀನತೆ (ನಿಂದೆ) ಯನ್ನೂ ಘೋಷಿಸುತ್ತ, ಡಂಗುರ ಸಾರುತ್ತ, ದೂಷಿಸುವುದರಲ್ಲಿ ತೊಡಗಿದ್ದಾರೆ. ಇಂದಿನ ಎಲ್ಲಾ ವ್ಯವಹಾರಗಳು ಆರ್ಜವ ಧರ್ಮದಿಂದ ದೂರ ತಾಗಿವೆ. ಸರಳತೆಯ ನಸುನಗು ಕೇವಲ ಕುಸುಮಗಳಲ್ಲಿ ಮಾತ್ರ ಕಂಡು ಬರುತ್ತದೆ. ಜನರ ಮುಖದ ಮೇಲೆ ನಸುನಗು ಮಾಯವಾಗಿ ಅದರ ಸ್ಥಾನದಲ್ಲಿ ಕೃತ್ರಿಮತೆಯು ಕಂಡುಬರುತ್ತಿದೆ. ನಿಷ್ಕಪಟ ವೃತ್ತಿಯ ಗುಲಾಬಿಯ ಅರಳಿದ ಎಸಳುಗಳ ಮೇಲೆ ಹೊಳೆವ ಸರಳ ನಗುವನ್ನು ನೋಡುವುದು ತೀರ ದುರ್ಲಭವೇ ಆಗಿದೆ.

ಯಾರಾದರೂ ಸರಳತೆಯನ್ನು ತೋರ್ಪಡಿಸುತ್ತಾನಾದರೆ ಅದರ ಹಿಂದೆ ಅವನಿಗೆ ಯಾವುದೋ ಸ್ವಾರ್ಥ–ಸ್ವಪ್ರಯೋಜನವಿದೆಯೆಂದೇ ಅದರರ್ಥ. ಆರ್ಜವವನ್ನು ಸಂಪ-

ರ್ಥಕ್ಕೆ ತಕ್ಕಂತೆ ಹೊಂದಿಸಬೇಕೆನ್ನುವವರು ಧರ್ಮದೊಂದಿಗೆ ಮೋಸ ಮಾಡಿದಂತೆ! ಯಾರು ಆರ್ಜವವನ್ನು ಮನ, ವಚನ, ಕಾಯಗಳಿಂದ ಸ್ವೀಕರಿಸುತ್ತಾರೋ ಅಂಥವರೇ ಮನಸ್ಸಿನಲ್ಲಿ ಉದ್ವೇಗಗೊಳ್ಳದೆ, ಪ್ರಸನ್ನರಾಗಿ ಸ್ಥಿರ ಮನಸ್ಕರಾಗಿರುತ್ತಾರೆ. ಪ್ರಕೃತಿಯ ಸತ್ವ ಗುಣದ ಸಹಚರವಾಗಿರುವ ಆರ್ಜವ ಧರ್ಮವನ್ನು ಪಾಲಿಸುವವರೇ ಅಮರರಾಗಿರುತ್ತಾರೆ. ಆರ್ಜವದಿಂದ ಗುಣಿಯಾಗುವ ಅರ್ಹತೆ ಬರುತ್ತದೆ. ತಮ್ಮಲ್ಲಿ ಅತ್ಯವಶ್ಯವಾಗಿ ಯಾವುದಾದರೊಂದು ಗುಣವನ್ನು ಹೊಂದಲು ಬಯಸುವವರು ಆರ್ಜವ ಧರ್ಮವನ್ನು ತಮ್ಮದಾಗಿಸುವುದು ಅಗತ್ಯವಾದೆ. ಆರ್ಜವ ಧರ್ಮದೊಂದಿಗೆ ಇತರ ಅನೇಕ ಸದ್ಗುಣಗಳು ತಾವಾಗಿಯೇ ಆಕರ್ಷಿಸಲ್ಪಟ್ಟು ಬಂದು ಸೇರುತ್ತವೆ.

ಧರ್ಮವು ವ್ಯಕ್ತಿಯನ್ನು ಸೇರುವ ಮೊದಲು ಆತನಲ್ಲಿ ಧರ್ಮದ ಅರ್ಹತೆಯನ್ನು ಉಂಟುಮಾಡುತ್ತದೆ. ಕ್ಷಮಾ, ಆರ್ಜವ, ಮಾರ್ದವಗಳೇ ಆ ಅರ್ಹತೆಯ ರೂಪಗಳಾಗಿವೆ.

**'ಪಾತ್ರತ್ವೇ ಕ್ರಿಯತಾಂ ಯತ್ನಃ ಪಾತ್ರಮಾಯಾಂತಿ ಸಂಪದಃ'** ಮೊದಲು ಪಾತ್ರತ್ವ (ಅರ್ಹತೆ) ಬರಲಿ! ಆಮೇಲೆ ಸಂಪತ್ತು ತಾನಾಗಿ ಬರುತ್ತದೆ. ಆರ್ಜವವನ್ನು ಪಾಲಿಸುವವರು ತಮ್ಮ ಅರ್ಹತೆಗೆ ತಕ್ಕಂತೆ ಪಾಲಿಸಬಹುದು. ಮಾರ್ದವದಿಂದ ಹೇಗೆ ಎಂಟು ವಿಧವಾದ ಅಭಿಮಾನ (ಅಹಂಕಾರ) ಗಳು ನಾಶವಾಗುತ್ತವೋ, ಅದರಂತೆ ಅದರಿಂದ ಸಮ್ಯಕ್ತ್ವದ ಅಡಿಪಾಯವು ನಿರ್ಮಾಣಗೊಳುತ್ತದೆ. ಆರ್ಜವವು ಸಮಾನತೆಯ ಭೂಮಿಯನ್ನು ನಿರ್ಮಿಸುತ್ತದೆ. ಯಾವ ಪ್ರದೇಶವು ಸಮತಲ ಹಾಗೂ ಸರಳವಾಗಿದೆಯೋ ಅಲ್ಲಿ ಸೂರ್ಯನ ಕಿರಣಗಳು ನೇರವಾಗಿ ಬಿದ್ದು ಬಹಳ ಸಮಯದ ವರೆಗೆ ಪ್ರಕಾಶವೂ ನೆಲೆ ನಿಲ್ಲುತ್ತದೆ. ಆದರೆ ಉಬ್ಬು ತಗ್ಗು (ತಗ್ಗು-ತಿಟ್ಟು) ಪ್ರದೇಶಗಳಾದ ಗಿರಿ–ಕಂದರಗಳಲ್ಲಿ ಪ್ರಕಾಶವು ಅಡ್ಡಡ್ಡಲಾಗಿ ಬಿದ್ದು ಅಲ್ಲಿ ಸ್ವಲ್ಪ ವೇಳೆ ಮಾತ್ರ ನೆಲೆಸುವುದು. ಸರಳತೆಯಲ್ಲಿ ಪ್ರಕಾಶವನ್ನು ಹೆಚ್ಚು ಹೊತ್ತು ನಿಲ್ಲಿಸಿಕೊಳ್ಳುವ ಸಾಮರ್ಥ್ಯವಿರುತ್ತದೆ. ಧರ್ಮವೇ ಆ ಪ್ರಕಾಶವಾಗಿದೆ. ಆ ಪ್ರಕಾಶವನ್ನು ಸ್ಥಿರವಾಗಿ ಧರಿಸಲು ಆರ್ಜವದ ಆವಶ್ಯಕತೆ ಇದೆ. ಸೂಜಿಯ ಸೂಕ್ಷ್ಮವಾದ ರಂಧ್ರದೊಳಗೆ ದಾರವು ನೇರವಾಗಿದ್ದರೆ ಮಾತ್ರ ಪ್ರವೇಶಿಸಬಲ್ಲುದು. ಸಂಸ್ಕೃತದಲ್ಲಿ 'ಋಜು' ಧಾತು (ಕ್ರಿಯೆ) ವು ಗತಿಯ ಅರ್ಥದಲ್ಲಿ ಬಂದಿದೆ. ಗತಿಯು ಜ್ಞಾನ, ಗಮನ ಹಾಗೂ ಪ್ರಾಪ್ತಿಯ ಅರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಋಜು ಗುಣದಿಂದ ಕೂಡಿದ ಅಂದರೆ ಗತಿ ಜ್ಞಾನ, ಗಮನ ಮತ್ತು ಪ್ರಾಪ್ತಿಯಿಂದ ಕೂಡಿರುವುದೇ ಋಜುತೆ ಎನಿಸುತ್ತದೆ. ಋಜುತೆ ಮತ್ತು ಆರ್ಜವ ಇವು ಒಂದು ಧಾತುವಿನ ಪ್ರಯತ್ನ ಭಿನ್ನವಾದ ಎರಡು ರೂಪಗಳಾಗಿವೆ.

ಗುರುಗಳ ಸಮೀಪ ಉಪದೇಶ ಗ್ರಹಣ ಮಾಡಲು ಬರುವವರಲ್ಲಿ ಸರಳತೆ–ಆರ್ಜವ ಇರಬೇಕಾದುದು ಮೊದಲ ಆವಶ್ಯ ಗುಣ. ಆರ್ಜವವು ಜ್ಞಾನ ಪ್ರಾಪ್ತಿಗೆ ಸಹಾಯಕವಾಗಿದೆ. ಆರ್ಜವದಲ್ಲಿ ಭಕ್ತಿಭಾವದ ಸೂಚನೆ ಇದೆ. ಆರ್ಜವವು ಕುಲೀನರ ಲಕ್ಷಣವಾಗಿದೆ. ರೈತನು ಬೀಜ ಬಿತ್ತುವ ಮೊದಲು ತಗ್ಗು–ದಿಣ್ಣೆಯಾಗಿರುವ ಭೂಮಿಯಲ್ಲಿ ನೇಗಿಲು ಹೂಡಿ ನೆಲದಲ್ಲಿರುವ ಮಣ್ಣು ಹೆಂಟೆಗಳನ್ನೊಡೆದು, ಸಮತಲ

ಗೊಳಿಸಿ ಆಮೇಲೆ ಅದರಲ್ಲಿ ಬೀಜವನ್ನು ಬಿತ್ತುತ್ತಾನೆ. ಸಮತಟ್ಟಾದ ನೆಲವು ಹಾಯಿಸಿದ ನೀರನ್ನು ಎಲ್ಲೆಡೆ ಸಮಾನವಾಗಿ ಹಂಚಿ ನೀರನ್ನು ಹೀರಲು ಸಹಾಯಕ ವಾಗುತ್ತದೆ. ಅದೇ ಪ್ರಕಾರ ಆರ್ಜವವು ಮನುಷ್ಯನಲ್ಲಿ ಸರಳತೆಯ ನಿರ್ಮಾಣ ಮಾಡಿ **'ನೀನು ಬದುಕು, ಇತರರಿಗೆ ಬದುಕಲು ಬಿಡು'** ಎಂಬ ಸಮಾಜ ವಾದದ ಬದುಕನ್ನು ಹೊಂದಲು ಸಹಕಾರಿಯಾಗುವುವು.

'ಧರ್ಮ'ವೆಂಬ ವೃಕ್ಷವು 'ಆರ್ಜವ'ವೆಂಬ ನೆಲದ ಮೇಲೆಯೇ ಬಿತ್ತಲ್ಪಡುತ್ತದೆ. ಪ್ರಾಚೀನ ಕಾಲದಲ್ಲಿ ರಾಜ ನೀತಿಯು ಧರ್ಮದ ಮೂಲಕ ಸಂಚಾಲನೆ ಹೊಂದಿತ್ತು. ಆಗ ರಾಜ ನೀತಿಯಲ್ಲಿ ಕಪಟ ಮಾಯಾಚಾರಗಳ ಸುಳಿವಿರಲಿಲ್ಲ. ಇಂದು ರಾಜ ನೀತಿಯಿಂದ ಧರ್ಮವನ್ನು ಬೇರ್ಪಡಿಸಲಾಗಿದೆ. ಈ ಕಾರಣದಿಂದಲೇ ಶೃಂಗ ಸಮ್ಮೇಲನಗಳು ವಿಫಲಗೊಳ್ಳುತ್ತಿವೆ. ಗಡಿ ವಿವಾದ ಹಾಗೂ ಇದೇ ರೀತಿಯ ಅನೇಕ ಸಮಸ್ಯೆಗಳ ಕುರಿತು ಉಚ್ಚಮಟ್ಟದ ಸಮ್ಮೇಲನ ಹಾಗೂ ಸದ್ಭಾವನಾ ಮಿಲನಗಳನ್ನು ಆಮಂತ್ರಿಸುತ್ತಾರೆ. ಆದರೆ ಎಲ್ಲರ ಮನಸ್ಸಿನಲ್ಲೂ ಕಪಟ ಭಾವವೇ ತುಂಬಿರುತ್ತದೆ. ಆದ್ದರಿಂದಲೇ ಅವರ ಸಭೆಗಳು ಸಫಲತೆಯನ್ನು ಹೊಂದುವುದಿಲ್ಲ. ಸಂಯುಕ್ತ ಘೋಷಣೆಗಳಾಗುತ್ತವೆ. ಕೈ ಮೇಲೆ ಕೈ ಹಾಕಿ ಮೈತ್ರಿಯ ಭಾವ ಚಿತ್ರಗಳನ್ನು ಛಾಪಿಸುತ್ತಾರೆ. ಆದರೆ ಮನಸ್ಸಿನೊಳಗೆ ಮಾತ್ರ ಕುಟಿಲತೆ (ಮೋಸ)ಯ ಶಲ್ಯ (ಮುಳ್ಳು) ಹುದುಗಿ ಕೂತಿರುತ್ತದೆ. ಅದನ್ನು ಕೀಳುವುದಿಲ್ಲ. ಆರ್ಜವ ಧರ್ಮದ ಪ್ರಭಾವದ ಅಭಾವದ ಪರಿಣಾಮವೇ ಇದಾಗಿದೆ. ಆರ್ಜವದ ಅಭಾವದಿಂದ ಹೃದಯದಲ್ಲಿ ಅನೇಕ ಪ್ರಕಾರದ ರಾಗ-ದ್ವೇಷಾತ್ಮಕವಾದ ವಿಚಾರ ಧಾರೆಗಳ ಜನ್ಮವಾಗುತ್ತದೆ. ಲೂಟಿ, ಹತ್ಯೆ, ಹೊಡೆದಾಟ ಬಡಿದಾಟ, ರೈಲು ಹಳಿಗಳನ್ನು ಕೀಳುವುದು, ವಿದ್ಯುತ್ತಿನ ಕಂಭಗಳನ್ನು ಕಿತ್ತು ಹಾಕುವುದು ಅಧ್ಯಾಪಕರಿಗೆ ಹೊಡೆಯುವುದು ಮುಂತಾದ ದುರ್ಘಟನೆಗಳ ಮೂಲದಲ್ಲಿ ಆರ್ಜವ ಧರ್ಮದ ಅಭಾವವೇ ಪ್ರಮುಖ ಕಾರಣವಾಗಿದೆ. ಆರ್ಜವ ಧರ್ಮದಿಂದ ಕೂಡಿದ ವ್ಯಕ್ತಿ ಅಥವಾ ಸಮಾಜವು ತಮ್ಮ ಹಿತಾಶಕ್ತಿಯಿಂದ ಸತ್ಯಾಗ್ರಹ ಹೂಡಬಹುದೇ ಹೊರತು ರಾಷ್ಟ್ರಕ್ಕೆ ಹಾನಿ ತರುವ ರಾಷ್ಟ್ರ ಘಾತಕ ಕಾರ್ಯವನ್ನೆಂದೂ ಮಾಡುವುದಿಲ್ಲ.

ಆರ್ಜವದಲ್ಲಿ ಅರ್ಜವದ ಪ್ರವೃತ್ತಿ ಇರುತ್ತದೆ. ಆರ್ಜವಿಯು ಏನಾದರೊಂದು ಉತ್ತಮ ಗುಣ ಸಂಗ್ರಹಿಸುತ್ತಲೇ ಇರುತ್ತಾನೆ. ಭಗವಂತನ ಮುಂದೆ ನಾವು ಕೋರುವ ಭಕ್ತಿ ಅಥವಾ ವಿನಯವು ಆರ್ಜವ ಧರ್ಮವೇ ಆಗಿದೆ. ಆರ್ಜವ ಶಬ್ದದಲ್ಲಿ 'ಆ' ಎಂಬ ಉಪಸರ್ಗವು ಆದಾನ ಸೂಚಕವಾಗಿದೆ. ಉತ್ತಮ ಆಚರಣೆಯನ್ನು ಗ್ರಹಿಸುವುದೂ ಆರ್ಜವವೆನಿಸುತ್ತದೆ. ಋಜುತ್ವದಲ್ಲಿ ಬೆತ್ತದಂತೆ ಬಾಗುವ ಗುಣವಿರುತ್ತದೆ. ನದಿಯ ತೀವ್ರ ಪ್ರವಾಹದಲ್ಲೂ ಬೆತ್ತದ ಬಳ್ಳಿ ಬಳುಕಿ ಸುರಕ್ಷಿತವಾಗಿರುತ್ತದೆ. ಬಾಗುವ ಸ್ವಭಾವ ಇರುವುದರಿಂದ ಅದು ಪ್ರವಾಹದ ಜೊತೆಗೆ ಬಾಗಿ ಬಳಕುತ್ತದೆ. ನದಿಯ ವೇಗವು ಶಾಂತವಾದ ಮೇಲೆ ಮರಳಿ ತಲೆ ಎತ್ತಿ ನಿಲ್ಲುತ್ತದೆ. ಈ ಬೆತ್ತದ ಗುಣವನ್ನೇ ಆರ್ಜವವೆನ್ನಬಹುದು. ಪರಿಸ್ಥಿತಿ ನೋಡಿ ಬಾಗಿ ನಡೆಯುವುದು, ಅನುಕೂಲ ಪರಿಸ್ಥಿತಿ ಒದಗಿದಾಗ ಅದಕ್ಕೆ ಹೊಂದಿಕೊಂಡು ನಡೆಯುವುದೇ ಆರ್ಜವ ಗುಣವೆನಿ

ಸುತ್ತದೆ. ಚಾರಿತ್ರದ ಪಾಲನೆಯನ್ನು ಋಜು ವೃತ್ತಿಯಿಂದಲೇ ಮಾಡಬೇಕಾಗುತ್ತದೆ. ರಾಷ್ಟ್ರದ ನಾಗರಿಕರು ಮತ್ತು ವಿದ್ಯಾರ್ಥಿಗಳು ಅವಶ್ಯವಾಗಿ ಆರ್ಜವ ಧರ್ಮವನ್ನು ಪಾಲಿಸಬೇಕು. ಸದ್ಧರ್ಮಕ್ಕೆ ಆರ್ಜವವು ಆಧಾರ ಭೂಮಿಯಾಗಿದೆ. ವಿನಮ್ರತಾ, ಸದ್ವ್ಯವಹಾರ, ಪಾರಸ್ಪರಿಕ ಪ್ರೀತಿ ಪೂರ್ವಕವಾದ ಮಧುರ ಸಂಬಂಧಗಳ ಸ್ಥಾಪನೆ, ಕಪಟ-ದುರ್ನೀತಿಗಳ ಪರಿಹಾರವು ಆರ್ಜವದಿಂದಲೇ ಸಾಧ್ಯ. ತಾಯಿಯು ಹೇಗೆ ಮಗುವನ್ನು ಪ್ರೀತಿ ವಾತ್ಸಲ್ಯಗಳಿಂದ ಸಾಕುತ್ತಾಳೋ ಅದೇ ಪ್ರಕಾರ ಆರ್ಜವವು ಮನುಷ್ಯನ ಸಮಸ್ತ ಸದ್ಗುಣಗಳ ಪೋಷಕವಾಗಿದೆ. ಯಾರು ಆರ್ಜವದಿಂದ ಕೂಡಿರುತ್ತಾನೋ ಆತನೇ ಧರ್ಮದ ಬಗ್ಗೆ ನಿಜವಾದ ಶ್ರದ್ಧಾಳು ಎನಿಸುತ್ತಾನೆ.



**ವಿದ್ಯಾನಂದ ವಾಣಿ**

## ಮೋಕ್ಷ ಫಲಕ್ಕಾಗಿ ಸಾಧನೆಯಿರಬೇಕು

**ಸಂಸಾರ ಸುಖ ಸಾಮಾನ್ಯ ವಸ್ತು. ಹೂವಿನ ಜೊತೆ ದಾರ ಬರುವುದು. ಬರೀ ದಾರವನ್ನು ಯಾರೂ ಮುಡಿಯುವುದಿಲ್ಲ. ದಾರವು ಹೂವಿನ ಜೊತೆಯಲ್ಲಿ ಬಂದರೆ ಮಾತ್ರ ಅದಕ್ಕೆ ಗೌರವ. ಮೋಕ್ಷ ಫಲಕ್ಕಾಗಿ ನಾವು ಸಾಧನೆ ಮಾಡುವಾಗಲೂ ನಡು ನಡುವೆ ಸಂಸಾರ ಸುಖಗಳೂ ಲಭಿಸುವುವು. ಆದರೆ ಸಂಸಾರ ಸುಖಕ್ಕಾಗಿಯೇ ದೇವರನ್ನು ಪೂಜಿಸಬಾರದು.**

---

## ದೇವರ ಸ್ತುತಿಗಿರುವ ಶಕ್ತಿ

**ಹಾವು ಚಂದನ ಮರಕ್ಕೆ ಸುತ್ತಿಕೊಳ್ಳುವುದು. ಕಣ್ಣು ಮುಚ್ಚಿಕೊಂಡು ತನ್ಮಯತೆಯಿಂದ ಪರಿಮಳ ತೆಗೆದುಕೊಳ್ಳುವುದು. ಆದರೂ ನವಿಲು ಕೂಗುವ ಶಬ್ದವನ್ನು ಕೇಳಿದ ಕೂಡಲೇ ಹಿಡಿತ ಸಡಿಲಿಸಿ ಹಾವು ಹುತ್ತ ಸೇರುವುದು. ಹಾಗೇನೇ ದೇವರ ಶಬ್ದ ನಾವು ಕೇಳಿದ ಕೂಡಲೇ ನವಿಲ ದನಿ ಕೇಳಿದ ಹಾವಿನಂತೆ ಕರ್ಮಗಳು ಕಳಗೆ ಬೀಳುವುವು.**

# 3. ವಿಶ್ವಧರ್ಮದ ದಶಲಕ್ಷಣ.

**ಭಾದ್ರಪದ ಮಾಸ:**

ಅಹೋ ಭಾದ್ರಪದಾಖ್ಯೋऽಯಂ ಮಾಸೋऽನೇಕವ್ರತಾಕರಃ ।
ಧರ್ಮಹೇತುಪರೋ ಮಧ್ಯೇऽಸ್ಯ ಮಾಸಾನಾಂಚ ನರೇಂದ್ರವತ್ ॥

ಭಾದ್ರಪದ ಮಾಸವು ಇತರ ಎಲ್ಲಾ ಮಾಸಗಳಿಗೆ ರಾಜನಂತಿದೆ. ಏಕೆಂದರೆ ಭಾದ್ರಪದ ತಿಂಗಳಲ್ಲೇ ಜೈನರ, ಹೆಚ್ಚಿನ, ಪ್ರಮುಖ ವ್ರತಗಳು ಆಚರಿಸಲ್ಪಡುತ್ತವೆ. ಆದುದರಿಂದ ಈ ಮಾಸವು ಅನೇಕ ಅಮೂಲ್ಯ ರತ್ನಗಳ ನಿಧಿಯೂ ಆಗಿದೆ. ಇದೇ ತಿಂಗಳಲ್ಲಿ ಚಂದನಷಷ್ಠಿ, ಲಬ್ಧಿವಿಧಾನ, ದಶಲಾಕ್ಷಣಿಕಧರ್ಮ, ಪುಷ್ಪಾಂಜಲಿ, ಅನಂತ ಚತುರ್ದಶೀ ಮೊದಲಾದ ಅನೇಕ ವ್ರತಗಳನ್ನು ಆಚರಿಸುತ್ತಾರೆ. ಆತ್ಮ ಶುದ್ಧಿಗೆ ಕಾರಣವಾದ ಈ ಪುಣ್ಯಮಯ ಮಾಸದಲ್ಲಿ ಧಾರ್ಮಿಕರು ಒಂದು ಕಡೆ ಸೇರಿ ಮನ ವಚನ ಕಾಯ ಶುದ್ಧಿಯಿಂದ ವ್ರತ, ಉಪವಾಸ, ಸಾಮಯಿಕಾದಿಗಳ ಮೂಲಕ ತಮ್ಮ ಮಾನಸಿಕ ಹಾಗೂ ಆತ್ಮಿಕ ಶಾಂತಿಯನ್ನು ಪಡೆದುಕೊಳ್ಳುತ್ತಾರೆ.

ಪರ್ವ ತಿಥಿಗಳು ಸರ್ವಧರ್ಮಿಯರಿಗೆ ಪವಿತ್ರವೇ ಆಗಿದೆ. ಪರ್ವ ಶಬ್ದದಿಂದ 'ಹಬ್ಬ' ಎಂಬ ಕನ್ನಡ ಪದ ಉಂಟಾಗಿದೆ. ಹಬ್ಬದ ದಿನವೆಂದರೆ ಸಾಮಾನ್ಯವಾಗಿ ಅಜ್ಞಾನಿಗಳು ಸಿಹಿ ಊಟ ಆಟ ವಿಹಾರ ಜಾಗರಣೆ ವಿನೋದಾದಿಗಳೆಂದು ತಿಳಿದಿದ್ದಾರೆ. ಪರ್ವ–ಹಬ್ಬದ ಅರ್ಥವನ್ನೇ ಅನೇಕರು ಮರೆತಿದ್ದಾರೆ. ಉಪಾಸ್ಯ ದೇವನನ್ನು ಉಪಾಸಿಸಿ ಅಂತರಾತ್ಮನ ಬಗ್ಗೆ ಗಮನವಿರಿಸಬೇಕು. ಆಹಾರ ತ್ಯಜಿಸುವುದು ಮಾತ್ರ ಉಪವಾಸವಲ್ಲ. ಉಪ–ಸಮೀಪೇ ವಾಸಃ–ನೆಲಸುವುದು ಎಂದು ಉಪವಾಸ ಶಬ್ದದ ಅರ್ಥವಾಗಿದೆ. ಆತ್ಮನ ಸಮೀಪ (ಸಾನಿಧ್ಯ)ದಲ್ಲಿ ಲಕ್ಷ್ಯವಿರಿಸಿ ತನ್ನ ಮನಸ್ಸನ್ನು ಆತ್ಮನ ಬಳಿ ಕುಳ್ಳಿರಿಸುವುದೇ ಅಥವಾ ನಿಜವಾಗಿ ಆತ್ಮನ ಬಗ್ಗೆ ಜಾಗೃತನಾಗುವುದೇ 'ಜಾಗರಣೆ' ಎನಿಸುತ್ತದೆ. ಇದನ್ನೆಲ್ಲಾ ಆಳವಾಗಿ ಯೋಚಿಸಿ ಮಾಡುವ ವ್ರತಗಳೆಲ್ಲವೂ ಸಾರ್ಥಕ, ಬಾಹ್ಯಡಂಬರಕ್ಕಾಗಿ ಆಮೋದ–ಪ್ರಮೋದಗಳನ್ನು ಪ್ರದರ್ಶಿಸಿ ಭೋಗೋಪ ಭೋಗವಸ್ತುಗಳ ಸೇವನೆಗಳಿಂದ ಯಾವ ಪರ್ವವೂ–ಹಬ್ಬವೂ ಸಾರ್ಥಕ್ಯ ಹೊಂದಲಾರದು. ಆದುದರಿಂದ ಭವ್ಯ ಜನತೆ ಇದನ್ನು ಅರ್ಥ ಮಾಡಿಕೊಂಡು ಮಾನವ ಜೀವನವನ್ನು ಪಾವನಗೊಳಿಸಬೇಕು. ಪರ್ವಗಳಲ್ಲಿ ಮಹಾ ಪರ್ವವೆನಿಸಿರುವ, ದಶಧರ್ಮ ಪರ್ವದಲ್ಲಿ ಪೂಜಿಸಲ್ಪಡುವ ದಶ ವಿಧ ಧರ್ಮಗಳ ಸಂಕ್ಷಿಪ್ತ ವಿವರಣೆ ಇಲ್ಲಿ ನೀಡಲಾಗುವುದು. ದಶಲಕ್ಷಣ ಧರ್ಮಗಳಲ್ಲಿ ವಿಶ್ವ ಧರ್ಮವೇ ಅಂತರ್ಗತವಾಗಿದೆ ಎಂದರೆ ಅತಿಶಯೋಕ್ತಿ ಅಲ್ಲ.

**ಪರ್ವ ತಿಥಿಗಳ ಆಧ್ಯಾತ್ಮಿಕ ರೂಪ:**

ಆಧ್ಯಾತ್ಮಿಕ ಸಂಸ್ಕೃತಿಯ ಪರಿಚಯವಿಲ್ಲದಿರುವುದರಿಂದಲೇ ನಮ್ಮ ಇಂದಿನ ಜೀವನ ಅಸ್ಥಿರತೆಯಿಂದ ಕೂಡಿದೆ. ಮಾನವನು ಅಸ್ತವ್ಯಸ್ತತೆಯಿಂದ ಕೂಡಿದ ಇಂದಿನ ವಿಷಮತೆಯಿಂದ ಸ್ಥಿರತೆಯ ಕಡೆಗೆ ಹೋಗಲು ಬಯಸಿ ಮಾರ್ಗ ಹುಡುಕುತ್ತಿದ್ದಾನೆ. ಜೀವನಕ್ಕೆ ಆತ್ಮ ವಿಜ್ಞಾನದಿಂದಲೇ ಸ್ಥಿರತೆಯು ದೊರೆಯುವುದು ಸಾಧ್ಯ.

ಆತ್ಮನ ಕಡೆಗೆ ಪ್ರವೃತ್ತಿ ಉಂಟಾಗಲೆಂದೇ ನಮ್ಮಲ್ಲಿ ಪರ್ವ (ಹಬ್ಬ) ಗಳನ್ನು ಆಚರಿಸಲಾಗುತ್ತಿದೆ. ಆದರೆ ನಾವು ಪರ್ವದ ಅರ್ಥವನ್ನೇ ಬಹುಶಃ ಮರೆತಿದ್ದೇವೆ. ಆದುದರಿಂದಲೇ ಪರ್ವ ತಿಥಿಗಳಲ್ಲಿ ಆಮೋದ–ಪ್ರಮೋದ ಹಾಸ–ವಿಲಾಸಗಳ ಆಡಂಬರ ಹೆಚ್ಚಾಗಿ ತೋರಿ ಬರುತ್ತದೆ. ಉಪಾಸನಾ, ಆತ್ಮಶುದ್ಧಿ, ಸಾಮಾಯಿಕ, ದೇವದರ್ಶನ, ಸ್ವಾಧ್ಯಾಯಾದಿಗಳ ಅಭಾವ ಕಂಡುಬರುತ್ತದೆ ಹಾಗಾಗಬಾರದು.

**ಪರ್ವಗಳು ನಮ್ಮ ಸಂಸ್ಕೃತಿಯ ಅಂಗಗಳಾಗಿವೆ:**

ಪರ್ವ ತಿಥಿಗಳ ಆಚರಣೆಯಿಂದ 'ನಾವು ಯಾರು' ಎಂಬುದನ್ನು ಅರಿಯಲು ಸಹಾಯಕವಾಗುವುದು. ನಾವು ಆಯಾ ಪರ್ವ ತಿಥಿಗಳಿಗೆ ಸಂಬಂಧಿಸಿದ ಉಪಾಸಿಸಲ್ಪಡುವ ತೀರ್ಥಂಕರಾದಿ ದೇವತೆಗಳ ಉದಾತ್ತ ಭಾವನೆಗಳನ್ನು ಸ್ಮರಿಸಿ ಅವುಗಳನ್ನು ನಮ್ಮಲ್ಲಿ ಅಳವಡಿಸಿಕೊಳ್ಳಬೇಕು ಅದಕ್ಕಾಗಿ ನಿರಂತರ ಪ್ರಯತ್ನಿಸಬೇಕು. ಮಂದಿರಗಳಲ್ಲಿ ಅಥವಾ ಗುರುಗಳ ಬಳಿ ವಿನಯ ವೃತ್ತಿಯಿಂದ ಕುಳಿತು ಪರಿಶುದ್ಧವಾದ ಮನಸ್ಸಿನಿಂದ ಆತ್ಮ ನಿರೀಕ್ಷಣೆ ಮಾಡುತ್ತ ನಮ್ಮಲ್ಲಿರಬಹುದಾದ ದೋಷಗಳನ್ನು ದೂರ ಮಾಡುವುದೇ ಪರ್ವಗಳ ಮುಖ್ಯ ಅಂಗವಾಗಬೇಕು. ಹುಣ್ಣಿಮೆಗೆ ಜ್ಯೋತಿಷಿಗಳ ಅಭಿಪ್ರಾಯದಂತೆ 'ಪರ್ವ–ತಿಥಿ' ಎನ್ನುತ್ತಾರೆ. ಪೂರ್ಣಿಮೆಯ ಪರ್ವ ತಿಥಿಯಂದು ನಾವು ನಮ್ಮಲ್ಲಿರುವ ಅಪೂರ್ಣತೆಗಳನ್ನು ನೀಗಿಸಿಕೊಂಡು, ಪೂರ್ಣತೆಯ ಕಡೆಗೆ ಸಾಗಬೇಕು ಆಗ ಮಾತ್ರ ಪರ್ವ ತಿಥಿಗಳ ಆಚರಣೆ ಸಾರ್ಥಕವಾಗುವುದು.

## ಪರ್ವರಾಜ ದಶಲಕ್ಷಣ ಪರ್ವ

**ದಶಲಕ್ಷಣ ಧರ್ಮಗಳು:**

ಧರ್ಮಕ್ಕೆ ಹತ್ತು ಲಕ್ಷಣ (ಸ್ವರೂಪ) ಗಳಿವೆ. ಅಥವಾ ಧರ್ಮದ ಸಂಪೂರ್ಣ ಸ್ವರೂಪವೇ ಹತ್ತು ಪ್ರಕಾರವೆಂದರೂ ತಪ್ಪಲ್ಲ. ದಶಲಕ್ಷಣಗಳು ಧರ್ಮದ ಅಂಗಗಳಾಗಿವೆ. ಆದುದರಿಂದಲೇ ಉತ್ತಮ ಕ್ಷಮಾ, ಉತ್ತಮ ಮಾರ್ದವ, ಉತ್ತಮ ಆರ್ಜವ, ಉತ್ತಮ ಸತ್ಯ, ಉತ್ತಮ ಶೌಚ, ಉತ್ತಮ ಸಂಯಮ, ಉತ್ತಮ ತಪ, ಉತ್ತಮ ತ್ಯಾಗ, ಉತ್ತಮ ಆಕಿಂಚನ್ಯ, ಉತ್ತಮ ಬ್ರಹ್ಮಚರ್ಯ ಈ ಹತ್ತು ವಿಧದ ಧರ್ಮಾಂಗಗಳಿಗೂ 'ಉತ್ತಮ' ಎಂಬ ಪದವನ್ನು ಮೊದಲಿಗೆ ಜೋಡಿಸಿರುವುದರ ಮುಖ್ಯ ಉದ್ದೇಶವಾಗಿದೆ. ದಶವಿಧ ಧರ್ಮಗಳನ್ನು ಪೂಜಿಸುವಾಗಲೂ ಉತ್ತಮ ಕ್ಷಮಾ ಧರ್ಮಾಂಗಾಯ, ಉತ್ತಮ ಮಾರ್ದವ ಧರ್ಮಾಂಗಾಯ ಎಂಬೀ ಮಂತ್ರ ಪೂರ್ವಕ ಆ ಧರ್ಮಗಳ ಪ್ರಾಪ್ತಿಗಾಗಿ ಪ್ರಯೋಗಿಸುತ್ತಾರೆ.

**೧. ಉತ್ತಮ ಕ್ಷಮಾ ಧರ್ಮ:**

'ಉತ್ತಮ ಕ್ಷಮೆಯು' ಮೂರೂ ಲೋಕಗಳಲ್ಲಿರುವ ಧರ್ಮದ ಸಾರವಾಗಿದೆ. ಉತ್ತಮ ಕ್ಷಮೆಯಲ್ಲಿ ರತ್ನತ್ರಯಗಳು ಅಡಕವಾಗಿವೆ. ಆ ಧರ್ಮವು ಸಮ್ಯಗ್ದರ್ಶನ (ಒಳ್ಳೆಯ ಭಕ್ತಿ) ಸಮ್ಯಗ್‌ಜ್ಞಾನ (ಸರಿಯಾದ ಜ್ಞಾನ) ಸಮ್ಯಕ್‌ಚಾರಿತ್ರ (ನಿಜವಾದ ವೈರಾಗ್ಯ) ಈ ಮೂರು ಅಮೂಲ್ಯವಾದ ರತ್ನಹಾರವನ್ನು ಧರಿಸಿದೆ. ಉತ್ತಮ

ಕ್ಷಮೆಯು ದುರ್ಗತಿ ಹಾಗೂ ದುಃಖಗಳನ್ನು ನಿವಾರಣೆ ಮಾಡುತ್ತದೆ. ಉತ್ತಮ ಸದ್ಗುಣಗಳ ಸಹಚಾರಿಣಿಯಾಗಿದೆ ಉತ್ತಮ ಕ್ಷಮೆಯು ಋಷಿ ಮುನಿಗಳಿಗೆ ಪ್ರಿಯವಾಗಿದೆ. ಉತ್ತಮ ಕ್ಷಮೆಯು ವಿದ್ವಾಂಸರಿಗೆ ಭೂಷಣ ಅಥವಾ ಚಿಂತಾಮಣಿಯಂತಿದೆ. ಉತ್ತಮ ಕ್ಷಮೆಯಿಂದ ಮನಸ್ಸಿನ ಚಿಂತೆ ದೂರವಾಗಿ ಮನಸ್ಸು ಶಾಂತಗೊಂಡು ಸ್ಥಿರವಾಗುತ್ತದೆ. ಉತ್ತಮ ಕ್ಷಮೆಯು ಇಡೀ ಪ್ರಪಂಚದಲ್ಲೇ ಮನ್ನಿಸಲ್ಪಡುತ್ತದೆ, ಆದರಿಸಲ್ಪಡುತ್ತದೆ. ಇದು ಮಿಥ್ಯಾತ್ವವೆಂಬ ಅಂಧಕಾರವನ್ನು ದೂರ ಮಾಡಲು ಸೂರ್ಯನಂತಿದೆ. ಅಸಮರ್ಥರ ಬಗ್ಗೆ ಕ್ರೋಧ ಹೊಂದದೆ, ಕ್ಷಮೆಯನ್ನು ತೋರುವುದೇ ನಿಜವಾದ ಉತ್ತಮ ಕ್ಷಮೆಯೆನಿಸುತ್ತದೆ.

ಇನ್ನೊಬ್ಬರ ಸಿಟ್ಟಿನ ಮಾತುಗಳನ್ನು ಸಹನೆ ಮಾಡುವ ಗುಣ ಮತ್ತು ಬೇರೊಬ್ಬರ ದೂಷಣೆಗಳನ್ನು ಕೇಳಿಯೂ, ಅದನ್ನು ಬಹಿರಂಗ ಪಡಿಸದ ಮಹಾನ್ ಗುಣವು ಯಾರಲ್ಲಿದೆಯೋ, ಅವನೇ ನಿಜವಾಗಿ ಕ್ಷಮಾಶೀಲ! ಜಿನೇಂದ್ರ ಭಗವಂತನ ಚರಣಗಳಲ್ಲಿ ತನ್ನ ಮನಸ್ಸನ್ನು ಸ್ಥಿರೀಕರಿಸಿ ಸುಖ–ದುಃಖಗಳಲ್ಲಿ ಸಮ ಭಾವವನ್ನು ತಾಳುವುದೇ ಉತ್ತಮ ಕ್ಷಮೆಯಾಗಿದೆ.

ಉತ್ತಮ ಕ್ಷಮಾಗುಣದಿಂದ ಮಾನವನು ದೇವತೆಗಳು ಮತ್ತು ವಿದ್ಯಾಧರರಿಂದ ನಮಸ್ಕರಿಸಲ್ಪಡುತ್ತಾನೆ. ಮತ್ತು ಅವನಿಗೆ 'ಕೇವಲಜ್ಞಾನ' (ಸರ್ವಜ್ಞತ್ವ) ಪ್ರಾಪ್ತವಾಗಿ ನಿರಂಜನ ಪದವಿ ದೊರೆಯುವುದು.

**೨. 'ಉತ್ತಮ ಮಾರ್ದವ ಧರ್ಮ':**

'ಉತ್ತಮ ಮಾರ್ದವ' ಧರ್ಮವು ಮನುಷ್ಯನಲ್ಲಿ ಮೃದುತ್ವವನ್ನುಂಟುಮಾಡಿ 'ಮಾನ' (ಅಹಂಕಾರ) ಕಷಾಯವನ್ನು ಮರ್ದನ ಮಾಡುತ್ತದೆ. ದಯಾ ಧರ್ಮದ ಮೂಲ ಮಾರ್ದವವೇ ಆಗಿದೆ. ಇದು ಸರ್ವ ರಹಿತಕಾರಿ ಮತ್ತು ಗುಣಗಣಗಳ ಸಾರವಾಗಿದೆ. ಉತ್ತಮ ಮಾರ್ದವವು ಸಂಪೂರ್ಣ ವ್ರತ ಹಾಗೂ ಸಂಯಮಗಳ ಮೂಲಾಧಾರವಾಗಿದೆ.

ಈ ಉತ್ತಮ ಮಾರ್ದವ ಧರ್ಮವು ಪಂಚೇಂದ್ರಿಯ ಮತ್ತು ಮನಸ್ಸಿನ ಸ್ವೇಚ್ಛಾಚಾರ ಮತ್ತು ವಿಲಾಸಪ್ರಿಯತೆಯನ್ನು ದಂಡಿಸುತ್ತದೆ. ಇದು ಮನಸ್ಸೆಂಬ ಭೂಮಿಯ ಕರುಣೆ ಎಂಬ ಬಳ್ಳಿಯಾಗಿ ಹರಡುತ್ತದೆ. ಉತ್ತಮ ಮಾರ್ದವದಿಂದ 'ಜಿನೇಂದ್ರ ಭಕ್ತಿಯು' ಮತ್ತಷ್ಟು ಪ್ರಕಾಶಮಾನವಾಗಿ ಉಜ್ವಲವಾಗಿ ಬೆಳಗುತ್ತದೆ. ಕುಮತಿ ನಾಶಹೊಂದಿ ಮಾರ್ದವ ಧರ್ಮವು ವಿನಯದ ಕಡೆಗೆ ಒಯ್ಯುತ್ತದೆ. ಈ ಧರ್ಮದ ಪಾಲನೆಯಿಂದ ಮಾನವನು ವೈರ ವಿರೋಧಗಳನ್ನು ಶಮನ (ಶಾಂತ) ಗೊಳಿಸಲು ಸಮರ್ಥನಾಗುತ್ತಾನೆ.

ಉತ್ತಮ ಮಾರ್ದವ ಧರ್ಮದಿಂದ ಪರಿಣಾಮ ಶುದ್ಧಿಯಾಗುತ್ತದೆ. ಹಾಗೂ ಉಭಯ ಲೋಕ (ಇಹ ಮತ್ತು ಪರ) ಗಳಲ್ಲಿ ನಮಗೆ ಸರ್ವಸಿದ್ಧಿಗಳನ್ನು ನೀಡತ್ತದೆ. ಇದರಿಂದ ಜಿನ ಶಾಸನದ ಪರಿಜ್ಞಾನ ಪ್ರಾಪ್ತವಾಗಿ ಆತ್ಮ ಸ್ವರೂಪ ಮತ್ತು ಪರದ್ರವ್ಯಗಳ ಭೇದವು ಚೆನ್ನಾಗಿ ಅರಿವಿಗೆ ಬರುತ್ತದೆ. ಉತ್ತಮ ಮಾರ್ದವ ಧರ್ಮವು ಆತ್ಮನ ಸ್ವಾಭಾವಿಕ ಪರಿಣಾಮವಾಗಿದೆಯಲ್ಲದೆ ಸಮ್ಯಗ್ದರ್ಶನ ಪ್ರಾಪ್ತಿಗೆ ತುಂಬಾ ಸಹಾಯ

ಕವಾಗಿದೆ. ಆದುದರಿಂದ ಈ ಉತ್ತಮ ಮಾರ್ದವ ಧರ್ಮವನ್ನು ಸರಿಯಾಗಿ ಅರ್ಥ ಮಾಡಿಕೊಂಡು ಪಾಲಿಸಬೇಕು.

## ೩. ಉತ್ತಮ ಆರ್ಜವ ಧರ್ಮ:

ಉತ್ತಮ ಆರ್ಜವವು ಧರ್ಮದ ಶ್ರೇಷ್ಠ ಲಕ್ಷಣಗಳಲ್ಲಿ ಮುಖ್ಯವಾದುದು. ಇದು ಚಿತ್ತಸ್ಥೈರ್ಯವನ್ನು ನೀಡಿ ಪಾಪಗಳನ್ನು ದೂರಮಾಡಿ ಸುಖವನ್ನುಂಟುಮಾಡುತ್ತದೆ. ಆರ್ಜವ ಧರ್ಮ ಶ್ರವಣದಿಂದ ಮನಸ್ಸಿನಲ್ಲಿ ಆತ್ಮ ಚಿಂತನದ ಭಾವ ಉತ್ಪನ್ನವಾಗುತ್ತದೆ. ಪುಣ್ಯವು ಲಭಿಸುತ್ತದೆ. ವಂಚನೆ (ಕಾಪಟ್ಯ)ಯ ದುರ್ಗುಣವನ್ನು ದೂರ ಮಾಡಿ ಪರಿಶುದ್ಧನನ್ನಾಗಿಸುತ್ತದೆ. ಮನಸ್ಸಿನಲ್ಲಿಯ ಶಲ್ಯ (ಮುಳ್ಳು) ವನ್ನು ಕಿತ್ತು ಹಾಕುವುದಕ್ಕಾಗಿ ಪವಿತ್ರವಾದ ಆರ್ಜವ ಧರ್ಮದ ಸ್ಮರಣೆ ವಿಚಾರ ಮಾಡಬೇಕು. ಏಕೆಂದರೆ ಮಾಯಾವಿಯು ಮಾಡುವ ವ್ರತ ಜಪ ತಪಗಳೆಲ್ಲವೂ ವ್ಯರ್ಥ. 'ಉತ್ತಮ ಆರ್ಜವ ಧರ್ಮ'ವು ಮುಕ್ತಿ ನಗರಿಯ ಮಾರ್ಗವೆಂಬುದು ಸತ್ಯ! ಕುಟಿಲ ವಕ್ರ ಪರಿಣಾಮಗಳು ಈ ಧರ್ಮದಿಂದ ನಾಶ ಹೊಂದಿದಲ್ಲಿ ಧರ್ಮದ ನಿಜವಾದ ಸ್ವರೂಪವು ಬೆಳಕಿಗೆ ಬರುತ್ತವೆ. ಆರ್ಜವವು ದರ್ಶನ ಮತ್ತು ಜ್ಞಾನದ ಮೂಲ ಬೇರಿನಂತಿದೆ. ಅತೀಂದ್ರಿಯ ಸುಖದ ಕರಡಿಗೆಯಾಗಿದೆ. ಅತೀಂದ್ರಿಯ (ಇಂದ್ರಿಯ ಬಾಹ್ಯ) ಸುಖದ ಪ್ರಾಪ್ತಿಗೆ ನಾಂದಿಯಾಗಿದೆ. ಭವಸಾಗರವನ್ನು ದಾಟಲು ದೋಣಿಯಂತಿದೆ. ಯಾವಾತನು ಈ ಆರ್ಜವ ಧರ್ಮವನ್ನು ಆತ್ಮಗತವನ್ನಾಗಿ ಮಾಡುತ್ತಾನೋ ಅವನು ಈ ವಿಶಿಷ್ಟ ಧರ್ಮದ ಸ್ವರೂಪದಿಂದ ವೈರಿಗಳ ಹೃದಯದೊಳಗೂ ಪ್ರವೇಶ ಮಾಡಬಲ್ಲನು.

## ೪. ಉತ್ತಮ ಸತ್ಯ ಧರ್ಮ:

ಉತ್ತಮ ಸತ್ಯವು ಅಹಿಂಸಾ ರೂಪಿಯಾದ ದಯಾ ಧರ್ಮಕ್ಕೆ ಕಾರಣವಾಗಿದೆ. ದೋಷ ನಿವಾರಕವೂ, ಇಹ–ಪರ ಭವ (ಜನ್ಮ) ಗಳಲ್ಲಿ ಸುಖಕಾರಕವೂ, ಆಗಿದೆ. ಸತ್ಯ ವಾಣಿಯು ಜಗತ್ತಿನಲ್ಲೇ ಶ್ರೇಷ್ಠವಾಗಿದೆ. ಇದು ಲೋಕದಲ್ಲಿ ಅನುಪಮ ಧರ್ಮವೆನಿಸಿದೆ. ವಿಶ್ವಾಸದ ನೆಲೆಬೀಡಾಗಿದೆ. ಸತ್ಯವಾದಿಯು ಎಲ್ಲರ ನಂಬಿಕೆಗೆ ಅರ್ಹನಾಗುತ್ತಾನೆ. ಅಸತ್ಯವಾದಿಯನ್ನು ಯಾರು ನಂಬುವುದಿಲ್ಲ.

ಈ ಧರ್ಮ ಎಲ್ಲ ಧರ್ಮಗಳಲ್ಲೂ ಉತ್ತಮವೆನಿಸಿದೆ. ಸತ್ಯ ಪ್ರಪಂಚದಲ್ಲಿ ಗೌರವಕ್ಕೆ ಕಾರಣವಾಗಿದೆ. ಎಲ್ಲರಿಗೂ ಈ ಸತ್ಯ ಧರ್ಮವು ಮನಸ್ಸಿಗೆ ತೃಪ್ತಿ ಹಾಗೂ ಶಾಂತಿಯನ್ನು ನೀಡುತ್ತದೆ. ಸುಖ–ಸಂತೋಷವನ್ನುಂಟುಮಾಡುತ್ತದೆ. ಉತ್ತಮ ಸತ್ಯ ಧರ್ಮವು ಸಂಸಾರ ಮತ್ತು ಮುಕ್ತಿಗಳ ನಡುವೆ ಸೇತುವೆಯಂತಿದೆ. ಸತ್ಯದ ಕಾಂತಿಯಿಂದ ಮಾನವನು ಶೋಭಿಸುತ್ತಾನೆ. ಪುಣ್ಯವು ಸತ್ಯ ಧರ್ಮದಿಂದ ಬೆಳಗುತ್ತದೆ. ದೊರೆಯುತ್ತದೆ. ಎಲ್ಲ ಗುಣಗಳಿಗೂ ಸತ್ಯವು ಕಿರೀಟ ಪ್ರಾಯವೆನಿಸಿದೆ. ಸತ್ಯವಂತನನ್ನು ದೇವತೆಗಳೂ ಕೊಂಡಾಡುತ್ತಾರೆ.

ಉತ್ತಮ ಸತ್ಯದಿಂದ ಅಣುವ್ರತ ಮತ್ತು ಮಹಾವ್ರತಗಳು ಪಾಲಿಸಲ್ಪಡುತ್ತವೆ. ಕಷ್ಟಗಳು ನಿವಾರಣೆಯಾಗುತ್ತವೆ. ಸತ್ಯವಂತನು ಹಿತ–ಮಿತ ಭಾಷಿಯಾಗಿರುತ್ತಾನೆ. ಇನ್ನೊಬ್ಬರ ಮನ ನೋಯುವ ಮಾತನ್ನಾಡುವುದಿಲ್ಲ. ಮುನಿ ಮಾರ್ಗದಲ್ಲಿ ವಿಧಿ

ಸಲ್ಪಟ್ಟ ವಚನ-ಗುಪ್ತಿಯು ಸತ್ಯ ಮಹಾ ಧರ್ಮಕ್ಕೆ ಪೋಷಕವಾಗಿದೆ. ಮುನಿಗಳು ಸತ್ಯ ಧರ್ಮದ ಬಲದಿಂದಲೇ ಕರ್ಮಗಳ ನಿರ್ಜರೆ ಮಾಡುತ್ತಾರೆ.

**೫. ಉತ್ತಮ ಶೌಚ ಧರ್ಮ:**

ಧರ್ಮದ ಹತ್ತು ಅಂಗಗಳಲ್ಲಿ ಉತ್ತಮ ಶೌಚವು ಅಖಂಡವಾದ ಧರ್ಮಾಂಗವೆನಿಸಿದೆ. ಶುಚಿತ್ವವೇ ಶೌಚ, ಆ ಶುಚಿತ್ವವು ಬಾಹ್ಯ ಶರೀರಕ್ಕೆ ಮಾತ್ರ ಸೀಮಿತವಾಗಿಲ್ಲ. ಬಾಹ್ಯ ಶುಚಿತ್ವವು ಅಂತರಂಗ ಶುದ್ಧಿ (ಶುಚಿ)ಗೆ ನಿಮಿತ್ತವಾಗಿ ಉಪಲಕ್ಷಣವೆನಿಸಿದೆ. ಅದು ಜ್ಞಾನ-ದರ್ಶನೋಪಯೋಗ ಮಯವಾಗಿದೆ. ಯಾವ ಭವ್ಯಾತ್ಮರು. ಅಹರ್ನಿಶಿ ಶೌಚ ಧರ್ಮದ ಸ್ಮರಣೆ ಮಾಡುತ್ತಿರುತ್ತಾರೋ ಅಂಥವರು ಜರಾ-ಮೃತ್ಯುಗಳನ್ನು ಜಯಿಸಿ ತ್ರಿಜಗತ್ಪೂಜ್ಯ (ಸರ್ವಜ್ಞ) ರಾಗುತ್ತಾರೆ.

ಮನಶ್ಶುದ್ಧಿಗೆ ಮುಖ್ಯ ಕಾರಣ ಶೌಚ ಧರ್ಮವೇ ಆಗಿದೆ. ಶಾಸ್ತ್ರ-ಸ್ವಾಧ್ಯಾಯಾದಿಗಳಿಂದ ಈ ಅಮೂಲ್ಯ ಶೌಚ ಧರ್ಮವೆಂಬ ಧನವನ್ನು ವೃದ್ಧಿ ಪಡಿಸಿಕೊಳ್ಳಬೇಕು.

ಶೌಚ ಧರ್ಮದಿಂದ ಲೋಭ ಕಷಾಯ ಕಡಿಮೆಯಾಗುತ್ತದೆ. ಇದು ಭವ್ಯರ ತಪಸ್ಸಿನ ಫಲದಿಂದ ದೊರೆಯುತ್ತದೆ. ಬ್ರಹ್ಮಚರ್ಯಕ್ಕೂ ಇದರಿಂದ ತುಂಬಾ ಪ್ರಯೋಜನವುಂಟು. ಈ ಶೌಚ ಧರ್ಮವು ಮನಸ್ಸಿನ ಅಷ್ಟ (ಎಂಟು) ವಿಧವಾದ ಮದಗಳನ್ನು ನಿಗ್ರಹಿಸುತ್ತದೆ. ಶಾಸ್ತ್ರಾಧ್ಯಯನವೇ ಶೌಚ. ಸುಗುಣಗಳ ಅದು ಚಿಂತನೆಯೇ ಉತ್ತಮ ಶೌಚ ಧರ್ಮವಾಗಿದೆ.

**೬. ಉತ್ತಮ ಸಂಯಮ ಧರ್ಮ:**

'ಸಂಯಮ' ಧರ್ಮವು ಮಾನವರಿಗೆ ದುರ್ಲಭವಾಗಿದೆ. ಪುಣ್ಯಾತಿಶಯದಿಂದ ಯಾರಿಗಾದರೂ ಸಂಯಮವು ಪ್ರಾಪ್ತವಾಗಿ ಮತ್ತೆ ಅದನ್ನು ಭಂಗಪಡಿಸಿದಲ್ಲಿ ಅವನಷ್ಟು ಮೂರ್ಖ ಇನ್ನೊಬ್ಬನಿರಲಾರ. ಅಂತಹ ವ್ಯಕ್ತಿಯು ಈ ಭವಾಬ್ಧಿಯ ಸುಳಿಗೆ ಸಿಕ್ಕು ಭ್ರಮಣೆ (ಸುತ್ತುತಿರುಗು) ಮಾಡುತ್ತಲೇ ಇರಬೇಕಾಗುವುದು. ಹುಟ್ಟಿ-ಸತ್ತು, ಹುಟ್ಟಿ-ಸತ್ತು ಹುಟ್ಟು ಸಾವುಗಳಲ್ಲಿಯೇ ಮುಳುಗಿರುತ್ತಾನೆ. ಸಂಸಾರ ಸಾಗರದಿಂದ ಅಂಥವನಿಗೆ ಮುಕ್ತಿ ದೊರಕುವುದು ಹೇಗೆ ತಾನೆ ಸಾಧ್ಯ?

ಪಂಚ ಇಂದ್ರಿಯಗಳನ್ನು ದಮನ ಮಾಡುವುದೇ ಉತ್ತಮ ಸಂಯಮವೆನಿಸುತ್ತದೆ. ಕಷಾಯ (ಕಲುಷಿತ ಭಾವ) ಗಳ ತ್ಯಾಗ, ದುರ್ಧರ ತಪಸ್ಸು, ಷಡ್ರಸ (ಸಿಹಿ ಹುಳಿ ಇತ್ಯಾದಿ) ನಾಲಗೆ-ರುಚಿಯಲ್ಲಿ ಹಿಡಿತ, ವಿವೇಕ, ಉಪವಾಸಾದಿಗಳಿಂದ ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟಿರಬೇಕು. ಮನಸ್ಸಿನ ಮತ್ತು ಇಂದ್ರಿಯಗಳ ಲಾಲಸೆಗಳನ್ನು ಬಿಡಬೇಕು. ಕಾಯಕ್ಲೇಶ (ತಪಸ್ಸು) ದಿಂದ ಪರಿಗ್ರಹಗಳ-ಪರಿತ್ಯಾಗದಿಂದ 'ಉತ್ತಮ ಸಂಯಮ ಧರ್ಮ'ದ ಪಾಲನೆ ಸಾಧ್ಯ.

ತ್ರಸ-ಸ್ಥಾವರ ಜೀವಿಗಳ ರಕ್ಷಣೆಯನ್ನು ಸಂಯಮದ ಮೂಲಕ ಸಾಧಿಸಬಹುದು. ಶಾಸ್ತ್ರಗಳ ಧರ್ಮ ಸೂತ್ರಗಳನ್ನು ಓದಿ ಅರಿತರೆ ಸಂಯಮ ಪಾಲನೆ ಕಷ್ಟವೇನಲ್ಲ! ಯೋಗಿಗಳು ಚಾಪಲ್ಯವನ್ನು ತೊರೆದು ಇಂದ್ರಿಯಗಳನ್ನು ನಿಯಂತ್ರಿಸಿ ಉದ್ವೇಗವಿಲ್ಲದೆ

ಇಲ್ಲಿ-ಅಲ್ಲಿ ಪರ್ಯಟನ (ಸಂಚಾರ) ಮಾಡುವುದನ್ನು ಬಿಟ್ಟರೆ ಅದು ಸಂಯಮ! ಅನುಕಂಪ (ಕರುಣೆ) ಪರಮಾರ್ಥದ ಚಿಂತನೆಗಳಿಂದ ಸಂಯಮದ ಪಾಲನೆ ಸರಳ ವಾಗುವುದು. ಹೀಗೆ ಸಂಯಮವು ಸಮ್ಯಗ್ದರ್ಶನಕ್ಕೆ ಪೋಷಕವಾಗಿರುವುದರಿಂದ ಆತ್ಮ ಸ್ವಾತಂತ್ರ್ಯವೆನಿಸಿದ ಮುಕ್ತಿಯು ಮುಮುಕ್ಷುಗಳಿಗೆ ಪ್ರಾಪ್ತಿಯಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಆದ್ದರಿಂದಲೇ ಮಹರ್ಷಿಗಳು ಉತ್ತಮ ಸಂಯಮ ಧರ್ಮಕ್ಕೆ ಪ್ರಾಧಾನ್ಯತೆ ನೀಡಿದ್ದಾರೆ.

### ೭. ಉತ್ತಮ ತಪೋ ಧರ್ಮ:

ಉತ್ತಮ ಮನುಷ್ಯ ಜನ್ಮವನ್ನು ಪಡೆದು ಸಪ್ತ ತತ್ತ್ವಗಳನ್ನು ಅರಿತು ಮನಃ ಪೂರ್ವಕ ಪಂಚೇಂದ್ರಿಯಗಳನ್ನು ನಿಗ್ರಹಿಸಿ, ಸಂಸಾರದಲ್ಲಿ ವಿರಕ್ತಿ (ವೈರಾಗ್ಯ) ಹೊಂದಿ ಗೃಹ, ಸಂಪತ್ತು, ಧನ, ಧಾನ್ಯಾದಿ, ಸಮಸ್ತ ಪರಿಗ್ರಹಗಳನ್ನು ತ್ಯಾಗ ಮಾಡಿ ನಿಸ್ಸಂಗ ನಾಗಿ ವನಗಮನದ ಮೂಲಕ 'ಉತ್ತಮ ತಪೋ ಧರ್ಮವು' ಪಾಲಿಸಲ್ಪಡುತ್ತದೆ.

ಎಲ್ಲಿ ಪರಿಗ್ರಹಗಳ ತ್ಯಾಗವಿದೆಯೋ, ಅಲ್ಲಿ ತಪೋ ಧರ್ಮವಿದೆ. ಎಲ್ಲಿ ಮನ್ಮಥ (ಕಾಮದೇವ)ನ ಮಥನವಿದೆಯೋ, ಎಲ್ಲಿ ದಿಗಂಬರ ಯತಿವರ್ಯರ ದರ್ಶನವಿದೆಯೋ ಅಲ್ಲೇ ತಪೋ ಧರ್ಮವಿದೆ.

ತಪೋ ಧರ್ಮವು ಗಿರಿ–ಕಂದರ (ಬೆಟ್ಟ–ತಪ್ಪಲು) ಗಳಲ್ಲಿ ನೆಲಸಲು ನಿರ್ದೇಶಿ ಸುತ್ತದೆ. ಆ ಏಕಾಂತದಲ್ಲಿ ಕಠಿಣ ಉಪಸರ್ಗ (ಪರೀಷಹ) ಗಳನ್ನು ಸಹಿಸಬೇಕಾಗು ವುದು. ತಪೋ ಧರ್ಮವು ರಾಗ (ಪ್ರೀತಿ) ದ್ವೇಷ ಮೊದಲಾದ ದೋಷಗಳನ್ನು ಜಯಿಸುವುದು. ಭಿಕ್ಷೆಯ ಮೂಲಕ ಭೋಜನ ಸ್ವೀಕರಿಸಬೇಕು. ಇದಕ್ಕಾಗಿ ಗೃಹಸ್ಥರ ಪವಿತ್ರವಾದ ಗೃಹ [ಮನೆ] ಗಳಲ್ಲಿ ಭಕ್ತಿಯಿಂದ ನೀಡುವ ಸಮಯದಲ್ಲಿ ಸೀಮಿತವಾದ ನಿಯಮಿತವಾದ ಆಹಾರವನ್ನು ಸ್ವೀಕರಿಸಿ ಆಹಾರದ ಋಣ ತೀರಿಸಲು ಸ್ವಲ್ಪ ಹೊತ್ತು ಧರ್ಮೋಪದೇಶವನ್ನು ಮಾಡಬೇಕಾಗುವುದು.

ತಪಸ್ಸು ಪಂಚ ಸಮಿತಿಗಳ ಪಾಲನೆಯಾಗಿದೆ. ತಪಸ್ಸು ಮನೋಗುಪ್ತಿ, ವಚನ ಗುಪ್ತಿ, ಕಾಯಗುಪ್ತಿಗಳೆಂಬ ತ್ರಿಗುಪ್ತಿ [ರಕ್ಷಣೆ] ಗಳನ್ನು ಪಾಲಿಸಲು ಅತ್ಯಂತ ಸಹ ಕಾರಿಯಾಗಿದೆ. ಎಲ್ಲಿ ಶರೀರದಿಂದ ಭಿನ್ನವಾದ ಆತ್ಮನ ಬೋಧೆಯೋ ಅಲ್ಲೇ ತಪಸ್ಸಿದೆ. ಈ ಭವದ ವಿನಾಶ ಮತ್ತು ಜನ್ಮ–ಜರಾ–ಮರಣ ಅಂತ್ಯವಿದೆಯೋ ಅಲ್ಲೇ ಪರ ಮಾರ್ಥದ ತಪಸ್ಸು ನಿವಾಸ ಮಾಡುತ್ತದೆ. ಸ್ವ [ಆತ್ಮ] ಸ್ವರೂಪದ ಪರಿಜ್ಞಾನ ಹಾಗೂ ಕರ್ಮಕ್ಷಯವಿರುವಲ್ಲಿ ತಪಸು ಇರುತ್ತದೆ. ದೇವ ದೇವನಲ್ಲಿ ಭಕ್ತಿಯ ಸದ್ಭಾವ ದಲ್ಲಿ ತಪಸ್ಸಿದೆ. ಪ್ರವಚನ ಪ್ರವಣದಲ್ಲಿ ಏಕಾಗ್ರತೆ, ಹಾಗೂ ತತ್ತ್ವಗಳ ಜ್ಞಾನವೇ ತಪೋ ಧರ್ಮಕ್ಕೆ ಮುನ್ಸೂಚನೆಯಾಗಿದೆ. ತಪಸ್ಸಿನಿಂದ 'ಕೇವಲ ಜ್ಞಾನೋ'ತ್ಪತ್ತಿ ಯಾಗುತ್ತದೆ. ಮತ್ತು ಶಾಶ್ವತ ಸುಖವಾದ ಮೋಕ್ಷದ ಬಾಗಿಲು ತೆರೆಯುತ್ತದೆ. ಹೀಗೆ ಅತ್ಯಂತ ಮಹಿಮಾನ್ವಿತವಾದಧ ರ್ಮವೇ 'ಉತ್ತಮ ತಪೋ ಧರ್ಮ'ವಾಗಿದೆ.

### ೮. ಉತ್ತಮ ತ್ಯಾಗ ಧರ್ಮ:

ಉತ್ತಮ ತ್ಯಾಗವು ಧರ್ಮದ ಅಭಂಗ ಅಂಗವೆನಿಸಿದೆ. ತನ್ನ ಶಕ್ತಿಯನ್ನು

ಮೀರದೆ, ಬಚ್ಚಿಡದೆ ಭಕ್ತಿಪೂರ್ವಕ ತ್ಯಾಗ ಮಾಡುವುದು ಸರ್ವರಿಗೂ ಶ್ರೇಯಸ್ಕರ. 'ಶಕ್ತಿತಸ್ತ್ಯಾಗತಪಸೀ' ಎಂಬ ಸೂತ್ರದಂತೆ ತ್ಯಾಗಕ್ಕೆ ಅರ್ಹನಾದ ತಪೋ ಗುಣದಿಂದಿ ಕೂಡಿದ ಪವಿತ್ರ ಪಾತ್ರಕ್ಕೆ ದಾನ ಮಾಡಬೇಕೆಂದು ಆಚಾರ್ಯರ ಪ್ರಮಾಣವಚನ ವಿದೆ. ದಾನದ ಪಾತ್ರ ಪಾತ್ರತೆಯ ಮೇಲೆ ಪರಲೋಕದಲ್ಲಿ ಸದ್ಗತಿ ಅಥವಾ ನಿಕೃಷ್ಟ ಗತಿಗಳ ನಿರ್ಧಾರವಾಗುತ್ತದೆ. ತ್ಯಾಗದ ಮೂಲಕ ದುರ್ಗುಣಗಳು ದೂರವಾಗಿ ನಿರ್ಮಲ ಕೀರ್ತಿಯು ಪ್ರಾಪ್ತವಾಗುತ್ತದೆ. ತ್ಯಾಗವು (ದಾನ) ನಾಲ್ಕು ವಿಧವಾಗಿದೆ. ಮೊದಲನೆಯ ತ್ಯಾಗ 'ಅಭಯ ದಾನ'ವಾಗಿದೆ. ಇದರಿಂದ ಪರಜನ್ಮದಲ್ಲಿ ದುಃಖ ದೂರ ಹೊಂದಿ, ಸುಖಗಳ ಸಮೂಹವೇ ಮುತ್ತುತ್ತದೆ. 'ಶಾಸ್ತ್ರ ದಾನವು' ಎರಡನೆ ಯದು. ಇದರಿಂದ ನಿರ್ಮಲವಾದ ಜ್ಞಾನ (ಕೇವಲಜ್ಞಾನ)ವು ದೊರೆಯುವುದು. 'ಔಷಧ ದಾನ'ವು ಮೂರನೆಯದು. ಇದರಿಂದ ಮುಂದೆ ರೋಗ ನಮ್ಮನ್ನು ಬಾಧಿಸ ಲಾರದು. ನಾಲ್ಕನೆಯ ತ್ಯಾಗವೇ 'ಆಹಾರ ದಾನ'. ಆಹಾರದಾನದಿಂದ ಮಾನವ ನಿಗೆ ಮುಂದೆ ಧನ-ಸಂಪತ್ತಿಯು ವೃದ್ಧಿಯಾಗುವುದು. ಭವ್ಯಾತ್ಮರು ಈ ಮೇಲೆ ತಿಳಿ ಸಿದ ಚತುರ್ವಿಧ ಧಾನಗಳನ್ನು ಅವಶ್ಯ ಭಕ್ತಿ ಭಾವದಿಂದ ಮಾಡಬೇಕು.

## ೯. ಉತ್ತಮ ಆಕಿಂಚನ್ಯ ಧರ್ಮ:

ಉತ್ತಮ ಆಕಿಂಚನ್ಯ ಧರ್ಮವು ಧ್ಯಾನದ ಇನ್ನೊಂದು ಹೆಸರು. ಆ ಧ್ಯಾನವು ದೇಹ ಭಿನ್ನನಾದ ಆತ್ಮನ ಚಿಂತನೆಗೆ ಸಂಬಂಧ ಹೊಂದಿದೆ. ಆತ್ಮನು ಜ್ಞಾನಮಯನು. ನಿರಾಕಾರನು. ರೂಪ ರಸ ಗಂಧ ಸ್ಪರ್ಶರಹಿತನು. ಈ ಪ್ರಪಂಚದಲ್ಲಿ ಆವನಿಗೆ ತನ್ನ ದೆಂಬುದು ಬೇರೊಂದಿಲ್ಲ. ಶರೀರವು ಪುದ್ಗಲ (ಜಡ) ವಾಗಿದೆ: ಆತ್ಮನು ಚೇತನಾ ಮಯನು ಎಂಬಿತ್ಯಾದಿ ವಿಚಾರ ಮಂಥವನ್ನು ಏಕಾಂತದಲ್ಲಿ ನಡೆಸುವುದೇ ನಿಜವಾದ ಆಕಿಂಚನ್ಯ ಧರ್ಮವೆನಿಸುವುದು.

ಆಕಿಂಚನ್ಯವು ಸಂಗ್ರಹ ವಿರೋಧಿ ಧರ್ಮವಾಗಿದೆ. ಶುದ್ಧ ಧ್ಯಾನಕ್ಕೆ ಸಾಧನ ವಾಗಿದೆ. ಮಮತ್ವ ಮತ್ತು ಅಹಂಕಾರಗಳ ತ್ಯಾಗ ಮತ್ತು ರತ್ನತ್ರಯ ಪ್ರವೃತ್ತಿಯೇ 'ಆಕಿಂಚನ್ಯ'ವೆನಿಸುತ್ತದೆ. ಆಕಿಂಚನನಿಗೆ ತೃಣ ಮಾತ್ರವೂ ಪರಿಗ್ರಹವೆಂಬುದಿಲ್ಲ. ಸ್ವ-ಪರ ವಿಮರ್ಶೆಯು ಆಕಿಂಚನ್ಯವಾಗಿದೆ. ಇದರಿಂದ ಪಂಚ-ಪರಮೇಷ್ಠಿಗಳ ಭಕ್ತಿ ಪ್ರಕಟವಾಗುತ್ತದೆ. ದುಷ್ಟ ಸಂಕಲ್ಪಗಳ ತ್ಯಾಗ ಮತ್ತು ಅನುದ್ದಿಷ್ಟ ಭೋಜ ಇವು ಉತ್ತಮ ಆಕಿಂಚನ್ಯ ಧರ್ಮದ ಉಪಾಂಗಗಳಾಗಿವೆ.

## ೧೦. ಉತ್ತಮ ಬ್ರಹ್ಮಚರ್ಯ ಧರ್ಮ:

ಭವ್ಯಾತ್ಮರೇ! ಕಠಿನವಾದ ಹಾಗೂ ಶ್ರೇಷ್ಠವಾದ ಬ್ರಹ್ಮಚರ್ಯವನ್ನು ಪಾಲಿಸಿರಿ. ಆಸೆಗಳನ್ನು ತೊರೆಯಿರಿ. ಪಂಚೇಂದ್ರಿಯ ವಿಷಯ ವಾಸನೆಯಿಂದ ದೂರ ವಾಗಿರಿ. ಈ ಮನಸ್ಸೆಂಬ 'ಗಜರಾಜ'ನು ಸ್ತ್ರೀ ಸುಖದಾಸೆಗೆ ಹಾತೊರೆಯುತ್ತಾನೆ. ಅವನನ್ನು ಸಂಯಮವೆಂಬ ಅಂಕುಶ ಪ್ರಯೋಗದಿಂದ ಹಿಡಿತಕ್ಕೆ ತನ್ನಿ!

ಈ ಕಾಮ ವಿಕಾರವು ಮನಸ್ಸಿನಲ್ಲಿ ಉದ್ಭವಿಸಿ ಮಾನವನು ಮಾಡಬಾರದ ಎಲ್ಲಾ ಕುಕೃತ್ಯಗಳಿಗೆ ಬಲಿಯಾಗುತ್ತಾನೆ ಇಂಥವನು ನಿಂದ್ಯ ಹಾಗೂ ಜಡ ದೇಹಕ್ಕೆ

ಮೋಹಿತನಾಗಿ ತನ್ನ ಹಿತವನ್ನು ಉಪೇಕ್ಷಿಸುತ್ತಾನೆ. ಎಲ್ಲರ ನಿಂದೆಗೂ ಅಪಕೀರ್ತಿಗೂ ಭಾಜನನಾಗುತ್ತಾನೆ. ಮೋಹದ ಮೌಢ್ಯಕ್ಕೀಡಾಗಿ ಸ್ವ-ಸ್ತ್ರೀ, ಪರಸ್ತ್ರೀ ಎಂಬ ಭೇದ ವನ್ನೇ ಮರೆತು ಬಿಡುತ್ತಾನೆ. ಕ್ಷಣಿಕವಾದ ದೇಹ ಸುಖವನ್ನು ಬಯಸಿ, ನರಕಾದಿ ದುರ್ಗತಿಗಳನ್ನು ಹೊಂದುತ್ತಾನೆ. ಬ್ರಹ್ಮಚರ್ಯಕ್ಕೆ ಲೋಪ ತರುವ ಲೋಲುಪರಿಗೆ ಸದ್ಗತಿ ಇಲ್ಲ. ಹೀಗೆ ವಿವೇಕದಿಂದ ವಿವೇಚನೆ ಮಾಡಿ ಪ್ರೀತಿ ಪುರಸ್ಸರವಾಗಿ ಮನಸಾ, ವಾಚಾ, ಕರ್ಮಣಾ [ಮನ-ವಚನ-ಕಾಯ]ಗಳಿಂದ ಬ್ರಹ್ಮಚರ್ಯ ವ್ರತ ಪಾಲಿಸಿರಿ ಆತ್ಮ ಧ್ಯಾನವೇ ನಿಜವಾದ ಬ್ರಹ್ಮಚರ್ಯ. ಬ್ರಹ್ಮ ಅಂದರೆ ಆತ್ಮ. ಬ್ರಹ್ಮಚರ್ಯದ ಬಲದಿಂದ ಭವಸಾಗರವನ್ನು ದಾಟಿ ಆತ್ಮ ಬ್ರಹ್ಮನ ಬಳಿ ಸಾಗಿ ನಿಮ್ಮ ಜೀವನವನ್ನು ಪಾವನ ಗೊಳಿಸಿರಿ. ಬ್ರಹ್ಮಚರ್ಯವಿಲ್ಲದ ಜಪ-ತಪ-ವ್ರತಗಳೆಲ್ಲವೂ ವ್ಯರ್ಥ! ಆದ್ದ ರಿಂದ ವ್ರತಗಳ ರಾಜನಂತಿರುವ ಉತ್ತಮ ಬ್ರಹ್ಮಚರ್ಯವನ್ನು ನಿಮ್ಮ ನಿಜ ಜೀವನ ದಲ್ಲಿ ಅಳವಡಿಸಿಕೊಂಡು ಅಮರ ಸುಖ [ಮುಕ್ತಿ ಸುಖ]ಕ್ಕೆ ಭಾಗಿಯಾಗಿರಿ!



ವಿದ್ಯಾನಂದ ವಾಣಿ

## ಭಾವಶುದ್ಧಿ – ಆತ್ಮಶುದ್ಧಿ

ಮಂತ್ರ ಶಕ್ತಿ, ಧರ್ಮ ಧ್ಯಾನ, ಪೂಜಾ ಪಾಠ, ಇವೆಲ್ಲ ಪರಿಣಾಮ ವಿಶುದ್ಧಿಗೆ ಕಾರಣವಾಗಿವೆ. ದ್ರವ್ಯ ಪೂಜೆ, ಭಾವ ಪೂಜೆಗಳು ಭಾವ ಶುದ್ಧಿಗೆ ಕಾರಣವಾಗಿವೆ. ಭಾವ ಶುದ್ಧಿ ಯಿಂದ ಆತ್ಮ ಶುದ್ಧಿಯಾಗುವುದು.

---

## ಯಾರು ಅಧ್ಯಾತ್ಮವಾದಿ?

ಚರ್ಮ ತೊಳೆಯುತ್ತಿರುವವರೆಲ್ಲ ಚರ್ಮಕಾರರು. ಅಧ್ಯಾ ತ್ಮವಾದಿ ಯಾರೋ ಅವನೇ ಅಂತರಾತ್ಮ. ಅಂತರಂಗ ಶುದ್ಧ ವಾಗಬೇಕು. ಕ್ರೋಧ, ಮಾನ, ಮಾಯ, ಲೋಭ ಇತ್ಯಾದಿ ಹೊಲಸು ಅಂತರಂಗದಲ್ಲಿ ತುಂಬಿದೆ. ಇದನ್ನು ತೊಳೆಯಬೇಕು. ಆಗ ಅಂತರಾತ್ಮರಾಗುವರು.

# 4. ಜಿನ ಮಂದಿರಗಳು ಆಧ್ಯಾತ್ಮಿಕ ಪ್ರಯೋಗ ಶಾಲೆ.

—ಮುನಿಶ್ರೀ ವಿದ್ಯಾನಂದರು.

'ಉಪಚಾರದಿಂದ ಅಸಂಯುತ ಸಮ್ಯಗ್ದೃಷ್ಟಿಯು ಮೋಕ್ಷಸ್ಥನೆಂದು ಹೇಳಲಾಗುತ್ತದೆ.

–ಪಂ। ಟೋಡರ್‌ಮಲ್ ಮೋ । ಪ್ರ.9

ಚತುರ್ಥ ಗುಣಸ್ಥಾನ ವರ್ತಿಯು ಶಾಸ್ತ್ರಾಭ್ಯಾಸ, ಆತ್ಮ ಚಿಂತನೆ ಮೊದಲಾದ ಕಾರ್ಯಗಳನ್ನು ಮಾಡುತ್ತಾನೆ. ಅಲ್ಲಿಯೂ ನಿರ್ಜರೆಯಾಗುವುದಿಲ್ಲ. ಕರ್ಮ ಬಂಧನ ಅಲ್ಲಿ ಆಗುತ್ತದೆ. ಮತ್ತೆ ಪಂಚಮ ಗುಣಸ್ಥಾನ ವರ್ತಿಯು ವಿಷಯ ಸೇವನಾದಿಗಳನ್ನು ಮಾಡುತ್ತಾನೆ. ಅಲ್ಲಿಯೂ ಗುಣಶ್ರೇಣಿ ನಿರ್ಜರೆಯಾಗುತ್ತದೆ. ಸ್ವಲ್ಪ ಮಟ್ಟಿಗೆ ಕರ್ಮ ಬಂಧವೂ ಆಗುತ್ತದೆ. ಅಲ್ಲದೆ ಪಂಚಮ ಗುಣಸ್ಥಾನ ವರ್ತಿಯು ಉಪವಾಸ ಮತ್ತು ಪ್ರಾಯಶ್ಚಿತ್ತಾದಿ ತಪವನ್ನಾಚರಿಸುತ್ತಿದ್ದರೂ ಆ ಕಾಲದಲ್ಲೂ ಅವನಿಗೆ ನಿರ್ಜರೆಯು ಸ್ವಲ್ಪ ಮಟ್ಟಿಗೆ ಆಗುತ್ತದೆ. ಆರನೆಯ ಗುಣಸ್ಥಾನ ವರ್ತಿಯು ಆಹಾರ, ವಿಹಾರ ಕ್ರಿಯೆ ಮಾಡುತ್ತಾನೆ. ಆ ಸಮಯದಲ್ಲೂ ಅವನಿಗೆ ಹೆಚ್ಚು ನಿರ್ಜರೆಯಾಗುತ್ತದೆ. (ಮೋಕ್ಷಮಾರ್ಗ ಪ್ರಕಾಶಕ 7/341)

**ಮೂರ್ತಿ ಪೂಜೆಯು ಸಾತ್ವಿಕ ಭಕ್ತಿಯಾಗಿದೆ:**

ಅಕ್ಷರಾವಗಮ ಲಬ್ಧಯೇ ಯಥಾಸ್ಥೂಲ ವರ್ತುಲ ದೃಕ್ಷತ್ಪರಿಗ್ರಹಃ ।
ಶುದ್ಧಬುದ್ಧಪರಿಲಬ್ಧಯೇ ತಥಾ ದಾರುಮೃಣ್ಮಯ ಶಿಲಾಮಯಾರ್ಚನಮ್ ॥

–ಗೀತಾ ರಹಸ್ಯ ಪೃ. 413

ಅಕ್ಷರ ಪರಿಚಯ ಮಾಡಿಸಲು ವಿದ್ಯಾರ್ಥಿ–ವಿದ್ಯಾರ್ಥಿನಿಯರ ಮುಂದೆ ಚಿಕ್ಕ ಚಿಕ್ಕ ಮರಗಳನ್ನು ಜೋಡಿಸುತ್ತ ಅಕ್ಷರಾಕಾರ ತೋರಿಸುತ್ತಾರೆ. ಇದೇ ರೀತಿ ಶುದ್ಧ ಬುದ್ಧ ಪರಮಾತ್ಮನ ಜ್ಞಾನ ಉಂಟುಮಾಡಲು ಮರ, ಮಣ್ಣು, ಮತ್ತು ಕಲ್ಲುಗಳಿಂದ ಮೂರ್ತಿ ರಚನೆ ಮಾಡಲಾಗುತ್ತದೆ.

**ಜಿನ ಮುದ್ರೆಯಿಂದ ಪಾಪ ನಾಶ:**

ಗರಾಪಹಾರಿಣೀ ಮುದ್ರಾ ಗರುಡಸ್ಯ ಯಥಾ ತಥಾ ।
ನಿಜಸ್ಯಾಪ್ಯೇನಸೋ ಹಂತ್ರೀ ದುರಿತಾರಾತಿ ಪಾತಿನಃ ॥

–ಆಚಾರ ಸಾರ 9–27

ಗರುಡ ಮುದ್ರೆಯ ದರ್ಶನ ಮಾತ್ರದಿಂದ ಸರ್ಪ ವಿಷವು ನಿವಾರಣೆಯಾಗುವಂತೆ ಜಿನ ಮುದ್ರೆಯ ದರ್ಶನದಿಂದ ಪಾಪಗಳ ನಾಶವಾಗುತ್ತದೆ.

ವಿಘ್ನಾಃ ಪ್ರಣಶ್ಯಂತಿ ಭಯಂ ನ ಜಾತು ನು ದುಷ್ಟ ದೇವಾಃ ಪರಿಲಂಘಯಂತಿ ।
ಅರ್ಥಾನ್ಯಥೇಷ್ಟಾಶ್ಚ ಸದಾ ಲಭಂತೇ ಜಿನೋತ್ತಮಾನಾಂ ಪರಿಕೀರ್ತನೇನ ॥

ಛಕ್ಖಂಡಾಗಮ ಜೀವಟ್ಠಾಣಮ್ 1|1|1| 21 ಪೃಷ್ಠ-41

ಜಿನೇಂದ್ರ ದೇವರ ಗುಣಗಳ ಕೀರ್ತನೆ ಮಾಡುವುದರಿಂದ ವಿಘ್ನಗಳು ನಾಶ

ವಾಗುತ್ತವೆ. ಎಂದೂ ಭಯಬರುವುದಿಲ್ಲ, ದುಷ್ಟ ದೇವತೆಗಳು ಪೀಡಿಸುವುದಿಲ್ಲ ನಿರಂತರವೂ ಯಥೇಷ್ಟವಾಗಿ ಪದಾರ್ಥಗಳ ಪ್ರಾಪ್ತಿಯಾಗುತ್ತದೆ.

**ಣಮೋಕಾರ ಮಂತ್ರದ ಮಹತ್ತ್ವ:**

'ಸರಾಗ ಸಂಜಮೋ ಗುಣ ಸೇಢಿಣಿಜ್ಜರಾ ಏ ಕಾರಣಂ ತೇಣ ಬಂಧಾದೋ ಮೋಕ್ಖೋ ಅಸಂಖೇಜ್ಜಗುಣೋತ್ತಿ ಸರಾಗ ಸಂಜಮೋ ಮುಣೀಣಂ ಪಟ್ಟಣಂ ಜುತ್ತ ಮಿದಿ ಣ ಪಚ್ಚವಟ್ಠಾಣಂ ಕಾದವ್ವಂ। ಅರಹಂತ ಣಮೋಕ್ಕಾರೋ ಸಪಹಿಯ ಬಂಧಾದೋ ಅಸಂಖೇಜ್ಜ ಗುಣಕಮ್ಮಕ್ಖಯ ಕಾರ ಒತ್ತಿ ತಥ್ಯವಿ ಮುಣೀಣಂ ಪವುತ್ತಿ ಪಸಂಗಾದೋ'

ಉಕ್ತಂ ಚ– ಅರಹಂತ ಣಮೋಕ್ಕಾರೋ ಭಾವೇಣ ಜೋ ಕರೇದಿ ಪಯಡಿಮದೀ।
ಸೋ ಸವ್ವದುಕ್ಖ ಮೋಕ್ಖಂ ಪಾವದಿ ಅಚಿರೇಣ ಕಾಲೇಣ॥

–ಜಯಧವಲಾ.

ಸರಾಗ ಸಂಯಮವು ಗುಣಶ್ರೇಣಿ ನಿರ್ಜರೆಗೆ ಕಾರಣವೆನ್ನುವುದಾದರೆ, ಅದರಿಂದ ಬಂಧದ ಅಪೇಕ್ಷೆಯಿಂದ ಮೋಕ್ಷ ಅಂದರೆ ಕರ್ಮಗಳ ನಿರ್ಜರೆಯು ಅಸಂಖ್ಯಾತ ಗುಣ ಆಗುತ್ತದೆ. ಆದುದರಿಂದ ಸರಾಗ ಸಂಯಮದಲ್ಲಿ ಮುನಿಗಳ ಪ್ರವೃತ್ತಿ ಇರುವುದು ಯೋಗ್ಯವೆಂದು ನಿಶ್ಚಯಿಸಲೂ ಸಾಧ್ಯವಿಲ್ಲ. ಏಕೆಂದರೆ ಅರಹಂತ ನಮಸ್ಕಾರವು ತತ್ಕಾಲದ ಬಂಧಕ್ಕಿಂತ ಅಸಂಖ್ಯಾತ ಗುಣ ಕರ್ಮ ನಿರ್ಜರೆಗೆ ಕಾರಣವಾಗುವುದು. ಆದುದರಿಂದ ಸರಾಗ ಸಂಯಮದಂತೆ ನಮಸ್ಕಾರ ಮಂತ್ರದಲ್ಲೂ ಮುನಿಗಳ ಪ್ರವೃತ್ತಿ ಉಂಟಾಗುತ್ತದೆ. ಯಾವ ವಿವೇಕಿಯಾದ ಜೀವವು ಭಾವ ಪೂರ್ವಕವಾಗಿ ಅರಹಂತನಿಗೆ ನಮಸ್ಕರಿಸುವುದೋ ಅದು ಅತ್ಯಂತ ಶೀಘ್ರವಾಗಿ ದುಃಖಗಳಿಂದ ಮುಕ್ತವಾಗುತ್ತದೆ ಎಂದು ಹೇಳಿದ್ದಾರೆ.

**ಶುಭ ಪರಿಣಾಮವು ಅಧರ್ಮವಲ್ಲ**

''ಸುಹ ಸುದ್ಧ ಪರಿಣಾಮೇಹಿಕಮ್ಮಕ್ಖಯಾಭಾವೇ ತಕ್ಖಯಾಣುವವತ್ತೀದೋ''

–ಆಚಾರ್ಯ ವೀರಸೇನ, ಜಯಧವಲಾ ಪೃ.6

ಶುಭ ಮತ್ತು ಶುದ್ಧ ಈ ಎರಡೂ ಪ್ರಕಾರದ ಭಾವಗಳು ಕರ್ಮಕ್ಷಯಕ್ಕೆ ಕಾರಣವಾಗಿವೆ. ಹೀಗಲ್ಲವಾದರೆ ಕರ್ಮಗಳ ಕ್ಷಯವೇ ಆಗಲಾರದು.

ಶುದ್ಧೋಪಯೋಗಿಯಂತೆ ಶುಭೋಪಯೋಗಿಗಳಿಗೂ ಧರ್ಮ ಪರಿಣತ ಆತ್ಮನ ರೂಪದಲ್ಲಿ ಕಾಣಲಾಗುತ್ತದೆ. ಅಮೃತಚಂದ್ರರೂ ಈ ಕುರಿತು–

ಯದಾ ತು ಧರ್ಮ ಪರಿಣತ ಸ್ವಭಾವೋऽಪಿ ಶುಭೋಪಯೋಗ ಪರಿಣತ್ಯಾ ಸಂಗಚ್ಛತೇ॥

ಪ್ರವಚನಸಾರ ಗಾ-11

ಎಂದು ನಿರ್ದೇಶಿಸುತ್ತ ಶುಭೋಪಯೋಗ ಪರಿಣತಿಯನ್ನು ಸಹ ಧರ್ಮದೊಳಗೆ ಅಡಕಗೊಳಿಸಿದ್ದಾರೆ. ಅಶುಭೋಪಯೋಗದಂತೆ ಅದನ್ನು ಅಧರ್ಮವೆಂದು ಹೇಳಿಲ್ಲ. (ಸ್ವಾಧ್ಯಾಯವೂ ಕೂಡ ಶುಭೋಪಯೋಗವಾಗಿರುವುದರಿಂದ ಅದನ್ನು ಆಗಮದಲ್ಲಿ ಅಧರ್ಮವೆಂದು ಪರಿಗಣಿಸಿಲ್ಲ)

"ಸಮ್ಯಗ್ದೃಷ್ಟಿಯ ಅನುರಾಗವು ಧರ್ಮಾತ್ಮ ಪುರುಷರಲ್ಲೂ, ಧಾರ್ಮಿಕ ಕಥೆಗಳಲ್ಲೂ ಧರ್ಮಾಯತನದಲ್ಲೂ ಇರುತ್ತದೆ. ಪಂ | ಸದಾಸುಖ 57

"ಲೋಹೋಸಿಯಾ ಪೇಜ್ಜಂ ತಿರಯಣ ಸಾಹಣ ವಿಸಯ ಲೋಹಾದೋ ಸಗ್ಗಾಪವಗ್ಗಾಣಮುಪ್ಪತ್ತಿ ದಂಸಣಾದೋ"

ಸೂತ್ರ 342 ಜಯಧವಲಾ ಪೃಷ್ಠ 185

ಅರ್ಥ– ಲೋಭ ಕಥಂಚಿತ್ ಪೆಜ್ಜವಾಗಿದೆ. ಏಕೆಂದರೆ ಹಲತ್ರಯ ಸಾಧನ ವಿಷಯುಕವಾದ ಲೋಭದಿಂದ ಸ್ವರ್ಗ-ಮೋಕ್ಷಗಳ ಪ್ರಾಪ್ತಿಯಾಗುವುದು.

"ಅರಹಂತ ಸಿದ್ಧಪಡಿಮಾಣಂ———ಪಣಮೋ"

ಆಚಾರ್ಯ ಕುಂದಕುಂದ 1/27 ಮೂ.

"ಜಿಣಪಡಿಮಾಣಂ ಪಣಮುಂ ಕರೇಹ।" ಜ್ಞಾತಾ ಸೂತ್ರಾಂಗ (119)

"ಜಿನಪ್ರತಿಮಾ ಇತ್ಯರ್ಥಃ" ಅಭಯದೇವ (1825)

## ವೈದಿಕ – ಮತ

"ನ ತಸ್ಯ ಪ್ರತಿಮಾ ಅಸ್ತಿ" ಯಜುರ್ವೇದ 32/3

ಶ್ವೇತಾಶ್ವತರೋಪನಿಷತ್ | 4/19

ಅವನಿಗೆ ಯಾವ ಪ್ರತಿಮೆಯೂ ಇಲ್ಲ.

## ಮೂರು ಕಾರಣಗಳಿಂದ ಪ್ರಥಮ ಸಮ್ಯಗ್ದರ್ಶನ ಉತ್ಪನ್ನವಾಗುತ್ತದೆ

"ತೀಹಿ ಕಾರಣೇಹಿ ಪಢಮ ಸಮ್ಮತ್ತದೇಂತಿ ಕೇಈ ಜಾಇಸ್ಸರಾ, ಕೇಈ ಸೋದೂಣ ಕೇಈ ಜಿಣಬಿಂಬದಟ್ಠೂಣ" ॥ 30 ॥

ಜೀವಟ್ಠಾಣ ಧವಲಾ ಚೂಲಿಕಾ, ಆಚಾರ್ಯ ಪುಷ್ಪದಂತ, ಭೂತಬಲಿ ಧವಲಾ

ಮೂರು ಕಾರಣಗಳಿಂದ ಪ್ರಥಮ ಸಮ್ಯಕ್ತ್ವ ಉತ್ಪನ್ನವಾಗುತ್ತದೆ. ಎಷ್ಟೋ ಮಂದಿಗೆ ಜಾತಿ ಸ್ಮರಣೆಯಿಂದ, ಅನೇಕರಿಗೆ ಧರ್ಮೋಪದೇಶ ಶ್ರವಣದಿಂದ, ಮತ್ತೆ ಕೆಲವರಿಗೆ ಜಿನಬಿಂಬ ದರ್ಶನದಿಂದ ಸಮ್ಯಕ್ತ್ವ ಉತ್ಪನ್ನವಾಗುವುದು.

"ಜಿಣಬಿಂಬದಂಸಣೇಣ, ಣಿಧತ್ತಣಿಕಾಚಿದಸ್ಸ, ವಿಮಿಚ್ಛತ್ತಾದಿಕಮ್ಮಕಲಾವಸ್ಸಖಯ ದಂಸಣಾದೋ" –ಧವಲಾ ಸಿದ್ಧಾಂತ ಗ್ರಂಥ

## ದಾನ ಮತ್ತು ಪೂಜೆ ನಿತ್ಯಕ್ರಿಯೆಗಳಾಗಿವೆ

"ತಂಜಹಾದಾಣಂ, ಪೂಯಾ, ಸೀಲಮುವವಾಸೋ ಚೇದಿ ಚಉವ್ವಿಹಸಾವಯ ಧಮ್ಮೋ" –ಜಯಧವಲಾ ಸೂತ್ರ 82, ಭಾಗ 1, ಪೃಷ್ಠ 50

ದಾನ, ಪೂಜೆ, ಶೀಲ ಮತ್ತು ಉಪವಾಸ ಇವು ನಾಲ್ಕು ಶ್ರಾವಕ ಧರ್ಮಗಳಾಗಿವೆ.

"ದಾಣಂ ಪೂಯಾ ಮುಕ್ಖಂ ಸಾವಯ ಧಮ್ಮೇಣ ಸಾವಯಾ ತೇಣ ವಿಣಾ"

"ರಯಣಸಾರ 10"

ಶ್ರಾವಕರ ಧರ್ಮಕ್ರಿಯೆಗಳಲ್ಲಿ ದಾನ ಮತ್ತು ಪೂಜೆ ಇವೆರಡು ಮುಖ್ಯವಾದವುಗಳು. ದಾನ-ಪೂಜೆಗಳಿಲ್ಲದೆ ಯಾವನೂ ಶ್ರಾವಕನಾಗಲಾರ.

ನಿತ್ಯೇ ನೈಮಿತ್ತಿಕೇ ಚೈವಂ ಜಿನಬಿಂಬ ಮಹೋತ್ಸವೇ ।
ಶೈಥಿಲ್ಯಂ ನೈವ ಕರ್ತವ್ಯಂ ತತ್ವಜ್ಞೈಸ್ತದ್ವಿಶೇಷತಃ । ೧ ॥

ಪಂಚಾಧ್ಯಾಯಿಾ 2, 739

## ಗಂಧೋದಕಾಭಿಶಂಸನಮ್

ಇದೇ ರೀತಿ ಶ್ರಾವಕನು ನಿತ್ಯ ಮತ್ತು ನೈಮಿತ್ತಿಕ ಜಿನಬಿಂಬ ಮಹೋತ್ಸವದಲ್ಲಿ ಶಿಥಿಲತೆ (ನ್ಯೂನತೆ) ತರಬಾರದು. ಅದರಲ್ಲೂ ತತ್ತ್ವವನ್ನು ಬಲ್ಲ ತತ್ತ್ವವೇತ್ತರು ಮುಖ್ಯವಾಗಿ ಶೈಥಿಲ್ಯ ಉಂಟಾಗದ ಹಾಗೆ ಎಚ್ಚರದಿಂದಿರಬೇಕು.

ಮಾನನೀಯಾ ಮುನೀಂದ್ರಾಣಾಂ ಜಗತಾಮೇಕಪಾವನೀ ।
ಸಾವ್ಯಾದ್ ಗಂಧಾಂಬುಧಾರಾಸ್ಮಾನ್ ಯಾ ಸ್ಮ ವ್ಯೋಮಾಪಗಾಯತೇ ॥

(ಆದಿ) ಮಹಾಪುರಾಣ 13/195

ಮುನೀಂದ್ರರಿಗೆ ಮಾನ್ಯವಾಗಿರುವ, ಲೋಕದಲ್ಲೇ ಅತ್ಯಂತ ಪವಿತ್ರವಾಗಿರುವ, ಆಕಾಶ ಗಂಗೆಯಂತೆ ನಿರ್ಮಲವಾದ ಜಿನೇಂದ್ರ ಭಗವಂತನ ಅಭಿಷೇಕ ಜಲವು ನಮ್ಮ ರಕ್ಷಣೆ ಮಾಡಲಿ.

## ಭಗವಂತನ ಸಮಕ್ಷ ದ್ರವ್ಯವನ್ನು ಅರ್ಪಿಸುವುದು

"ಕೇವಲಿಗಳ ಅಥವಾ ಪ್ರತಿಮೆಯ ಮುಂದೆ ಅನುರಾಗ (ಭಕ್ತಿ)ದಿಂದ ಉತ್ತಮ ವಸ್ತುಗಳನ್ನು ಅರ್ಪಿಸುವುದರಲ್ಲಿ ದೋಷವಿಲ್ಲ. ಧರ್ಮಾನುರಾಗದಿಂದ ಜೀವನ ಹಿತವೇ ಆಗುತ್ತದೆ."

ಪಂ. ಟೋಡರ್‌ಮಲ್ ಮೋಕ್ಷಮಾರ್ಗ ಪ್ರಕಾಶಕ 5/241

ತಪಸ್ವಿ ಗುರು ಚೈತ್ಯಾನಾಂ ಪೂಜಾಪಲೋಪ ಪ್ರವರ್ತನಮ್ ।
ಅನಾಥ ದೀನ ಕೃಪಣ ಭಿಕ್ಷಾದಿ ಪ್ರತಿಷೇಧನಮ್ ॥

ಆಚಾರ್ಯ ಅಮೃತಚಂದ್ರ ತತ್ತ್ವಾರ್ಥಸಾರ 4/55

ತಪಸ್ವಿಗಳು, ಗುರುಗಳು ಹಾಗೂ ಜಿನ ಪ್ರತಿಮೆಯ ಪೂಜೆಯನ್ನು ತಡೆಯುವುದು ಅನಾಥ-ದೀನ-ದಲಿತ-ದರಿದ್ರರಿಗೆ ಭಿಕ್ಷೆ ಕೊಡದಿರುವುದರಿಂದ ಅಂತರಾಯ ಕರ್ಮದ ಆಸ್ರವ (ಬರುವಿಕೆ)ಕ್ಕೆ ನಿಮಿತ್ತವಾಗಿದೆ.

"ಸಾರಂಭಇಂಣ್ಣವಣಾಇಯಹಂ ಜೇ ಸಾವಜ್ಜ ಭಣಂತಿ ।
ದಂಸಣಂ ತೇಹಿಂ ವಿಣಾಸಿಯಉ ಇತ್ಥಣ ಕಾಯಉ ಭಂತಿ ॥"

ಸಾವಯಧಮ್ಮದೋಹಾ 204

ಯಾರು ಅಭಿಷೇಕಾದಿ ಸಮಾರಂಭಗಳನ್ನು ದೋಷ ಪೂರ್ಣವೆಂದು ಹೇಳುತ್ತಾರೋ ಅವರಿಂದ ಸಮ್ಯಗ್ದರ್ಶನ ನಾಶವಾಯಿತೆಂಬುದರಲ್ಲಿ ಸಂದೇಹವಿಲ್ಲ.

## ಅಂತಹ ಗೃಹಸ್ಥರಿಗೆ ಧಿಕ್ಕಾರವಿರಲಿ

ಜಿನೇಂದ್ರಂ ನ ಪಶ್ಯಂತಿ ಯೇ ನ ಪೂಜಯಂತಿ ಸ್ತುವಂತಿನ ।
ನಿಷ್ಫಲಂ ಜೀವಿತಂ ತೇಷಾಂ ತೇಷಾಂ ಧಿಕ್ ಚ ಗೃಹಾಶ್ರಮಮ್ ॥

ಆಚಾರ್ಯ ಪದ್ಮನಂದಿ ಪಂಚವಿಂಶತಿ 6/15

ಯಾವ ಜೀವನು ಭಕ್ತಿಯಿಂದ ಭಗವಂತನ ದರ್ಶನ ಮಾಡುವುದಿಲ್ಲವೋ, ಭಗವಂತನನ್ನು ಪೂಜಿಸುವುದಿಲ್ಲವೋ, ಸ್ತುತಿಸುವುದಿಲ್ಲವೋ ಅವನ ಗೃಹಸ್ಥಾಶ್ರಮಕ್ಕೆ ಧಿಕ್ಕಾರ. ಅವನ ಜೀವನ ನಿಷ್ಫಲವಾಗಿದೆ.

ಅಗ್ರತೋ ಜಿನದೇವಸ್ಯ ಸ್ತೋತ್ರ ಮಂತ್ರಾರ್ಚನಾದಿಕಮ್ ।
ಕುರ್ಯಾನ್ನ ದರ್ಶಯೇತ್ ಪೃಷ್ಠಂ ಸಮ್ಮುಖಂ ದ್ವಾರಲಂಘನಮ್ ॥

ಪ್ರಾಸಾದಮಂಡನ 2/34, ಪೃಷ್ಠ 35

ಜಿನೇಂದ್ರ ಭಗವಂತನ ಮುಂದೆ ಸ್ತೋತ್ರ, ಮಂತ್ರ, ಪೂಜೆ ಮಾಡಿ ಹೊರಗೆ ಹೊರಡುವ ವೇಳೆ ತನ್ನ ಬೆನ್ನು ತೋರಿಸಬಾರದು. ಮುಂಭಾಗದಲ್ಲೇ ಹಿಂಗಾಲುಗಳಿಂದ ನಡೆಯುತ್ತ ದ್ವಾರವನ್ನು ದಾಟಬೇಕು.

**ಮೂರ್ತಿ ಪೂಜಾ ನಿಷೇಧದ ನಿರಾಕರಣೆ:**

'ದೇವೇಂದ್ರನು ಜನ್ಮ ಕಲ್ಯಾಣ ಸಮಯದಲ್ಲಿ ಭೂರಿ ಭೂರಿ (ತುಂಬಾ) ಜಲದಿಂದ ಭಗವಂತನ ಅಭಿಷೇಕ ಮಾಡಿದನು. ಸಮವಸರಣದಲ್ಲಿ ದೇವತೆಗಳು ಹೂಮಳೆ (ಪುಷ್ಪ ವೃಷ್ಟಿ) ಸುರಿಸಿ, ಚಾಮರ ಬೀಸಿದರು. ಇವರೆಲ್ಲ ಮಹಾ ಪಾಪಿಗಳೇ? ಇಲ್ಲ ಇದು ಅವರ ವ್ಯವಹಾರ ಎನ್ನುವುದಾದರೆ ಕ್ರಿಯೆಯ ಫಲವು ಅವರಿಗೆ ಲಭಿಸದೆ ಹೋಗುವುದಿಲ್ಲ. ಇಂದ್ರಾದಿಗಳು ಸಮ್ಯಗ್‌ದೃಷ್ಟಿಗಳಾಗಿರುವುದರಿಂದ ಈ ಪಾಪ ಕಾರ್ಯಗಳನ್ನು ಅವರು ಹೇಗೆ ಮಾಡುತ್ತಾರೆ? ಅದು ಧರ್ಮಕಾರ್ಯವೆಂದಾದರೆ ನೀವು ಅದನ್ನು ಏಕೆ ನಿಷೇಧ ಮಾಡುತ್ತೀರಿ? ತೀರ್ಥಂಕರರ ವಂದನೆಗಾಗಿ ರಾಜರು ಹೋಗುತ್ತಾರೆ. ಸಾಧುಗಳ ವಂದನೆ ದರ್ಶನಕ್ಕಾಗಿ ದೂರ ದೂರದ ವರೆಗೆ ಗಮನ ಮಾಡುತ್ತೀರಿ. ಸಿದ್ಧಾಂತದ ಉಪದೇಶವನ್ನು ಕೇಳಲು ಹೋಗುತ್ತಿರಿ. ಆಗ ಮಾರ್ಗ ಸಂಚಾರದಲ್ಲಿ ಹಿಂಸೆ ಸಂಭವಿಸುತ್ತದೆ. ಸಾಧರ್ಮಿಗಳಿಗೆ ಭೋಜನ ಮಾಡಿಸುತ್ತೀರಿ. ಸಾಧು ಸಂತರ ಮರಣ ಸಂಭವಿಸಿದಾಗ ಅವರ ಸಂಸ್ಕಾರಾದಿ ಕಾರ್ಯಗಳನ್ನು ಮಾಡುತ್ತೀರಿ. ಸಾಧುಗಳೊಂದಿಗೆ ಉತ್ಸವ (ಮೆರವಣಿಗೆ) ಮೊದಲಾದ ಕಾರ್ಯಗಳಲ್ಲಿ ಭಾಗಿಗಳಾಗುತ್ತೀರಿ. ಇವೆಲ್ಲಾ ಪ್ರವೃತ್ತಿಗಳು ಇಂದಿಗೂ ನಡೆದು ಬರುತ್ತಿವೆ. ಇವುಗಳಲ್ಲೂ ಹಿಂಸೆಯು ಅನಿವಾರ್ಯವಾಗುತ್ತದೆ. ಆದರೆ ಈ ಎಲ್ಲಾ ಕಾರ್ಯಗಳು ಧರ್ಮದ ಸಲುವಾಗಿ ನಡೆಯುತ್ತದೆ. ಬೇರೆ ಯಾವ ಪ್ರಯೋಜನವೂ ಇರುವುದಿಲ್ಲ.'

–ಮೋಕ್ಷ ಮಾರ್ಗ ಪ್ರಕಾಶಕ 5 ಪೃಷ್ಠ-243

ಸುಶ್ರದ್ಧಾ ಮಮ ತೇ ಸ್ತುತಿರಪಿ ತ್ವಯ್ಯರ್ಚನಂ ಚಾಪಿ ತೇ ।
ಹಸ್ತಾವಂಜಲಯೇ ಕಥಾಶ್ರುತಿರತಃ ಕರ್ಣೋಕ್ಷಿ ಸಂಪ್ರೇಕ್ಷತೇ ॥
ಸುಸ್ತುತ್ಯಾಂ ವ್ಯಸನಂ ಶಿರೋನತಿಪರಂ ಸೇವೇದೃಶೀ ಯೇನ ಮೇ ।
ತೇಜಸ್ವೀ ಸುಜನೋऽಹಮೇವ ಸುಕೃತೀ ತೇನೈವ ತೇಜಃ ಪತೇ ॥

–ಸ್ತುತಿವಿದ್ಯಾ ಸಮಂತಭದ್ರಃ

ಹೇ! ತೇಜಃಪುಂಜದ ಒಡೆಯನಾದ ಜಿನೇಂದ್ರನೇ! ನನಗೆ ತಮ್ಮ ಮತದಲ್ಲಿ ಒಳ್ಳೆಯ ಶ್ರದ್ಧೆ (ನಂಬಿಕೆ) ಇದೆ. ನನ್ನ ಸ್ತುತಿಯು ತಮ್ಮ ಪರವಾಗಿಯೇ ಇದೆ. ತಮ್ಮ

ಪೂಜೆಯನ್ನೇ ಮಾಡುತ್ತಿದ್ದೇನೆ. ತಮ್ಮ ಮುಂದೆ ನನ್ನ ಕೈಗಳು ಅಂಜಲಿಬದ್ಧವಾಗಿವೆ. ನನ್ನ ಕಿವಿಗಳು ತಮ್ಮ ಕಥೆಯನ್ನು ಕೇಳುವುದರಲ್ಲಿ ಲೀನವಾಗಿವೆ. ಕಣ್ಣುಗಳು ತಮ್ಮ ದರ್ಶನವನ್ನೇ ಮಾಡುತ್ತಿವೆ. ತಮ್ಮ ಸ್ತುತಿ ಪ್ರಾರ್ಥನೆ ಮಾಡುವುದೇ ನನಗೊಂದು ಚಟವಾಗಿ ಬಿಟ್ಟಿದೆ. ನನ್ನ ಮಸ್ತಕವು ತಮ್ಮ ಪಾದಾರವಿಂದಗಳಿಗೆ ಬಾಗಿ ನಮಸ್ಕರಿಸುತ್ತಿದೆ. ನಾನು ನನ್ನ ಕಣ್ಣು, ಕಿವಿ, ಮನ, ವಚನ, ಕಾಯಗಳಿಂದ ಭಕ್ತಿ ಪೂರ್ವಕ ತಮ್ಮ ಸೇವೆ ಗೈಯುತ್ತಿದ್ದೇನೆ. ಆದುದರಿಂದಲೇ ನಾನು ಮಹಾ ಪುಣ್ಯಶಾಲಿಯೆನಿಸಿದ್ದೇನೆ.



ವಿದ್ಯಾನಂದ ವಾಣಿ

## ಆತ್ಮಕ್ಕೆ ಹಿಡಿದ ತುಕ್ಕನ್ನು ಹೇಗೆ ಕಳೆಯಬೇಕು ?

ಮಣ್ಣಿನಲ್ಲಿ ಬಿದ್ದ ಕಬ್ಬಿಣ ತುಕ್ಕು ಹಿಡಿಯುವಂತೆ ಇಪ್ಪತ್ತನಾಲ್ಕು ಗಂಟೆಯೂ ಸಂಸಾರದ ಮಾತುಗಳನ್ನು ಕೇಳಿ ಕೇಳಿ ಆತ್ಮನಿಗೆ ತುಕ್ಕು ಹಿಡಿದಿದೆ. ಆ ತುಕ್ಕು ತೆಗೆಯಬೇಕಾದರೆ ಪೂಜೆ, ಪಾಠ, ಭಜನೆ, ಕೀರ್ತನೆ, ಜಪ, ಇತ್ಯಾದಿ ಹೊರತು ಬೇರೆ ಮಾರ್ಗವೇ ಇಲ್ಲ.

---

## ಆತ್ಮ ಚೈತನ್ಯಮಯ

ಈ ಶರೀರಕ್ಕೆ ಬೆಲೆಯಿರುವುದು ಒಳಗಿರುವ ಚೈತನ್ಯಮಯ ಆತ್ಮನಿಂದಲೇ. ಹೆಣವನ್ನು ಯಾರೂ ಅಪ್ಪಿಕೊಳ್ಳುವುದಿಲ್ಲ. ಪ್ರೀತಿ ಮಾಡುವುದು ಒಳಗಿರುವ ಆತ್ಮವನ್ನೇ. ಇದಕ್ಕೆ ಪ್ರಮಾಣವೇನೆಂದರೆ, ಒಬ್ಬನು ಸತ್ತನಂತರ 'ನೋಡಪ್ಪ, ತಡವಾಗುತ್ತಿದೆ ಇದನ್ನು ಬೇಗ ಇಲ್ಲಿಂದ ಎಬ್ಬಿಸಿ' ಎನ್ನುತ್ತೇವೆ. ಪ್ರೀತಿ, ವಾತ್ಸಲ್ಯ ಇವೆಲ್ಲ ಒಳಗಿದ್ದ ಆತ್ಮನಿಂದಲೇ ಎಂದು ಇದರಿಂದ ಸಿದ್ಧವಾಗುವುದಿಲ್ಲವೇ?



# 5. ಜಿನದೇವನ ಅಭಿಷೇಕ.

(1) ಜಿನಾಭಿಷೇಕವು ಜಿನಪೂಜೆಯ ಪ್ರಥಮ ಮತ್ತು ಪ್ರಮುಖ ಅಂಗವೆಂದು **ಮಾಘನಂದಿ** ಆಚಾರ್ಯರು ರಚಿಸಿದ ಅಭಿಷೇಕ ಪಾಠಗಳಲ್ಲಿ ಹೇಳಲಾಗಿದೆ.

(2) 'ಣ್ಹಾಣೇಣ' (ಸ್ನಾನೇನ) ಇತ್ಯಾದಿ ಪದಗಳಿಂದ ಜಿನಾಭಿಷೇಕದ ಮಹತ್ವವು ಪ್ರಾಚೀನ ಪ್ರಾಕೃತ ಭಕ್ತಿ ಪಾಠಗಳಲ್ಲಿ ವಿಸ್ತೃತವಾಗಿ ವರ್ಣಿಸಲ್ಪಟ್ಟಿದೆ.

(3) "ಅಭಿಷೇಕ ಮಹಂ ನಿತ್ಯಂ ಸುರನಾಥಾಃ ಸಮಂಸುರೈಃ ।
ದ್ವಿದ್ವಿಪ್ರಹರ ಪರ್ಯಂತಮೇ ಕೈಕದಿಶಿ ಶಾಂತಯೇ ॥" —ಸಿದ್ಧಾಂತಸಾರ.

ಲೋಕಶಾಂತಿಗಾಗಿ ದೇವೇಂದ್ರರು ದೇವತೆಗಳೊಂದಿಗೆ ನಿತ್ಯವೂ ಒಂದೊಂದು ದಿಕ್ಕಿನಲ್ಲಿ ಎರಡೆರಡು ಪ್ರಹರ (ಕಾಲವಿಶೇಷ) ಕಾಲ ಜಿನಬಾಲಕನಿಗೆ ಅಭಿಷೇಕ (ಸ್ನಾನ) ಮಾಡುತ್ತಿದ್ದರೆಂದು ಭಾವವು.

## ಶಾಂತಿ ಮಂತ್ರ ಪ್ರಭಾವ:

ಜಿನಾಭಿಷೇಕ ವಿಧಾನವನ್ನು ಭಕ್ತಿಯಿಂದ ಮನಃಶಾಂತಿ ಪೂರ್ವಕ ಮುಗಿಸಿದ ಮೇಲೆ "ಓಂ ನಮೋಽರ್ಹತೇ ಭಗವತೇ ಅರ್ಹನ್ ಮಮ ಪಾಪಂ ಖಂಡಖಂಡ, ದಹ ದಹ, ಪಚ ಪಚ, ಪಾಚಯ ಪಾಚಯ, ಹಂ ಝಂ, ಝ್ವೀಂ ಝ್ವೀಂ, ಕ್ಷ್ವೀಂ ಕ್ಷ್ವೀಂ ಹಂಸಃ ಝಂ ವಂ ಹ್ವಃ ಪಃ ಕ್ಷಾಂ ಕ್ಷೀಂ ಕ್ಷೂಂ ಕ್ಷೇಂ ಕ್ಷೈಂ ಕ್ಷೋಂ ಕ್ಷೌಂ ಕ್ಷಂ ಕ್ಷಃ ಹ್ರಾಂ ಹ್ರೀಂ ಹ್ರೂಂ ಹ್ರೇಂ ಹ್ರೈಂ ಹ್ರೋಂ ಹ್ರೌಂ ಹ್ರಂ ಹ್ರಃ ದ್ರಾಂ ದ್ರೀಂ ದ್ರಾವಯ ದ್ರಾವಯ ನಮೋಽರ್ಹತೇ ಭಗವತೇ ಶ್ರೀಮತೇ ಠಠ ಮಮ ಶ್ರೀರಸ್ತು, ಸಿದ್ಧಿರಸ್ತು, ತುಷ್ಟಿರಸ್ತು, ಪುಷ್ಟಿರಸ್ತು, ಶಾಂತಿರಸ್ತು, ಕಾಂತಿರಸ್ತು, ಕಲ್ಯಾಣಮಸ್ತು, ಮನಃಸಮಾಧಿರಸ್ತು, ದೀರ್ಘಾಯುರಸ್ತು ಸ್ವಾಹಾ" ಇತ್ಯಾದಿ ಜಲಧಾರಾಪೂರ್ವಕ ತನ್ನ ಮತ್ತು ಲೋಕದ ಶಾಂತಿಯನ್ನು ಬಯಸುತ್ತ (ಬೀಜ ಮಂತ್ರಾಕ್ಷರಗಳೊಂದಿಗೆ) ಹೇ ಭಗವನ್ ಅರಹಂತ ಪರಮೇಷ್ಠಿಯೇ ನನಗೆ (ಪೂಜಿಸುವವನಿಗೆ) ಸಂಪತ್ತು, ಸಿದ್ಧಿ, ಸಂತೃಪ್ತಿ, ಪುಷ್ಟಿಯಾಗಲಿ, ಶಾಂತಿ-ಕಾಂತಿ ಉಂಟಾಗಲಿ, ಮಂಗಳವಾಗಲಿ, ಮನಸ್ಸಿನ ಏಕಾಗ್ರತೆ (ಸಮಾಧಿ) ಪ್ರಾಪ್ತವಾಗಲೆಂದೂ, ದೀರ್ಘಾಯುವಿರಲೆಂದೂ ಪ್ರಭುವಿನ ಮುಂದೆ ಪ್ರಾರ್ಥಿಸಬೇಕು.

ಕ್ಷೇಮಂ ಸರ್ವಪ್ರಜಾನಾಂ ಪ್ರಭವತು ಸತತಂ ಧಾರ್ಮಿಕೋ ಭೂಮಿಪಾಲಃ ।
ಕಾಲೇ ಕಾಲೇ ಚ ಸಮ್ಯಗ್ವರ್ಷತು ಮಘವಾ ವ್ಯಾಧಯೋಯಾಂತು ನಾಶಮ್ ।
ದುರ್ಭಿಕ್ಷಂ ಚೋರಮಾರೀಕ್ಷಣಮಪಿ ಜಗತಾಮಾಸ್ಮಭೂಜ್ಜೀವಲೋಕೇ ।
ಜೈನೇಂದ್ರಂ ಧರ್ಮಚಕ್ರಂ ಪ್ರಭವತು, ಸತತಂ, ಸರ್ವಸೌಖ್ಯ ಪ್ರದಾಯಿ ॥

ಪ್ರಜೆಗಳಿಗೆ ಧಾರ್ಮಿಕ ರಾಜ್ಯದಲ್ಲಿ ಕಾಲ ಕಾಲಕ್ಕೆ ಮಳೆ-ಬೆಳೆಗಳಾಗಿ, ರೋಗ, ದುರ್ಭಿಕ್ಷ, ಕಳ್ಳಕಾಕರ ಭಯ, ಸಾಂಕ್ರಾಮಿಕ ರೋಗ ಮೊದಲಾದ ಅನಿಷ್ಟಗಳು ಒಂದು ಕ್ಷಣಕಾಲ ಸಹ ಬಾರದೆ ಇರಲಿ. ಜಿನೇಂದ್ರ ದೇವನ ಧರ್ಮಚಕ್ರವು ಸರ್ವರಿಗೂ ಸರ್ವಕಾಲದಲ್ಲೂ ಸೌಖ್ಯವನ್ನು ನೀಡುವಂತಾಗಲಿ ಎಂದು ಭಾವ.

# ಜಿನ ಪೂಜಾ ಮಹತ್ತ್ವ

1) ಗೃಹಸ್ಥರು ಸರ್ವವಿರತರಲ್ಲ! ಆದುದರಿಂದ ಶುದ್ಧಾತ್ಮಾಚರಣದ ಪ್ರಕಾಶವು ಶ್ರಾವಕರಲ್ಲಿ ಇಲ್ಲವಾಗಿದೆ. ಆದುದರಿಂದ ಅವರಿಗೆ ಕಷಾಯೋದಯದಿಂದ ರಾಗ ಸಂಯೋಗವಿದ್ದರೂ ಶುಭೋಪಯೋಗದ ಮೂಲಕ ನಿರಂತರ ಶುದ್ಧಾತ್ಮನ ಅನುಭವ ಮಾಡುವುದರಿಂದ ಪರಂಪರೆಯಿಂದ ಮೋಕ್ಷ ಪ್ರಾಪ್ತಿಯ ಮಾರ್ಗ ತೆರೆದಿದೆ. ಸ್ಫಟಿಕ ಮಣಿಯ ಮೂಲಕ ನೇರವಾಗಿ ಬೀಳುವ ಸೂರ್ಯ ಪ್ರಕಾಶವು ಪಾಪವೆಂಬ ಕಟ್ಟಿಗೆಯಲ್ಲಿ ಬೆಂಕಿ ಉಂಟುಮಾಡುವಂತೆ ಶುಭ ಪರಿಣಾಮದಿಂದ ಪರಂಪರೆಯಾಗಿ ಮುಕ್ತಿ ಅವರಿಗೆ ದೊರೆಯುತ್ತದೆ. ಮುನಿಗಳ ಸೇವೆ, ದಾನ–ಪೂಜಾದಿಗಳು ಗೃಹಸ್ಥರ ಮುಖ್ಯ ಧರ್ಮಗಳಾಗಿವೆ. ಚಿತ್–ಚಮತ್ಕಾರ ಭಾವನೆಯಿಂದ ಕೂಡಿರುವ ವಿಷಯ ಕಷಾಯಗಳ ನಿಮಿತ್ತದಿಂದ ಉಂಟಾಗುವ ಆರ್ತ, ರೌದ್ರ ಧ್ಯಾನಗಳ ಪರಿಣಾಮವಾಗಿ ಆತ್ಮಾಶ್ರಿತವಾದ ನಿಶ್ಚಯ ಧರ್ಮಕ್ಕೆ ಅವಕಾಶ ದೊರಿಯುವುದಿಲ್ಲ. –ಪ್ರವಚನಸಾರ 3-64

2) ಜಿನೇಂದ್ರ ಭಗವಂತರ ಚರಣಕಮಲಗಳಲ್ಲಿ ಅರ್ಪಿಸುವ ಪೂಜೆಯು ಕಾಮ ಭಾವನೆಯನ್ನು ದೂರ ಮಾಡಿ ಇಚ್ಛಿತ ಫಲವನ್ನು ನೀಡುತ್ತದೆ. ಆದುದರಿಂದ ಭಕ್ತ್ಯಾದರಗಳಿಂದ ಗೃಹಸ್ಥನು ನಿತ್ಯ ಪೂಜೆಯನ್ನು ತಪ್ಪದೆ ಮಾಡಬೇಕು.

–ಆಚಾರ್ಯ ಸಮಂತಭದ್ರರ ರತ್ನಕರಂಡಕ ಶ್ರಾವಕಾಚಾರ ಶ್ಲೋಕ 119

3) ಯಾವನು ಮುನಿಗಳಿಗೆ ದಾನ ನೀಡಿಲ್ಲವೋ, ಜಿನೇಂದ್ರ ದೇವನ ಪೂಜೆಯನ್ನು ಮಾಡಿಲ್ಲವೋ ಅಂಥವನಿಗೆ ಮುಕ್ತಿಯ ಪ್ರಾಪ್ತಿ ಹೇಗೆ ತಾನೇ ಸಾಧ್ಯ? ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು, ಧರ್ಮ, ಜಿನಶಾಸ್ತ್ರ, ಜಿನಪ್ರತಿಮಾ, ಜಿನಚೈತ್ಯಾಲಯ [ಜಿನ ಮಂದಿರ] ಹೀಗೆ ನವ [ಒಂಭತ್ತು] ದೇವತೆಗಳಿಗೆ ಜೈನ ಧರ್ಮದಲ್ಲಿ ಪೂಜೆ ಮಾಡಲಾಗುತ್ತದೆ. ಈ ದೇವತಾ ಸ್ವರೂಪಗಳಲ್ಲಿ ಅರಹಂತ, ಸಿದ್ಧರ ಪೂಜೆಯೇ ಮುಖ್ಯವಾದುದರಿಂದ ದೇವಸ್ಥಾನಗಳಲ್ಲಿ ಜಿನ [ಅರಹಂತ] ಪ್ರತಿಮೆಗಳನ್ನು ಪ್ರತಿಷ್ಠಾಪಿಸಿ ಮೂರ್ತಿವಾನ್ ಅರಹಂತ ತೀರ್ಥಂಕರರ ಪೂಜೆಯು ಎಲ್ಲಾ ಕಡೆ ಪ್ರಚಲಿತವಾಗಿದೆ. ಕುಂದ ಕುಂದಾಚಾರ್ಯರ ಶಿಷ್ಯರಾದ ಶ್ರೀಜಯಸೇನರಿಂದ ರಚಿತವಾದ **ಪ್ರತಿಷ್ಠಾ–ಪಾಠ**ದ ಅನುಸಾರ ಜಿನ ಪೂಜೆಯಲ್ಲಿ ಪ್ರಮುಖ ಅಂಗವಾಗಿ ಮೊದಲು ಜಿನ ಪ್ರತಿಮೆಗೆ ಅಭಿಷೇಕ ನಡೆಯುತ್ತದೆ. ಅನಂತರ ಅಷ್ಟ ವಿಧವಾದ ಉತ್ತಮ ದ್ರವ್ಯಗಳಿಂದ ಪೂಜಿಸಬೇಕು. ಮೂರ್ತಿ ಪ್ರತಿಷ್ಠೆಯಲ್ಲಿ, ಗರ್ಭ, ಜನ್ಮ, ತಪ, ಜ್ಞಾನ ಮತ್ತು ಮೋಕ್ಷ ಹೀಗೆ ಪಂಚ [ಐದು] ಕಲ್ಯಾಣಗಳು ನಡೆಯುತ್ತವೆ. ಗುರುಗಳು ಮಂತ್ರನ್ಯಾಸದಿಂದ ಮೂರ್ತಿಗೆ ಪ್ರಾಣ ಪ್ರತಿಷ್ಠೆ ಮಾಡಿದ ಮೇಲೆ ಜಿನ ವೇದಿಕೆಯ ಮೇಲೆ ಜಿನೇಶ್ವರನ ಪ್ರತಿಮೆಯನ್ನು ವಿಧಿ ಪೂರ್ವಕ ಸ್ಥಾಪಿಸಲಾಗುತ್ತದೆ.

4) ನಿತ್ಯಪೂಜಾ ವಿಧಾನಾರ್ಥಂ ಸ್ಥಾಪಯೇನ್ಮಂದಿರೇನವೇ ।
ಪುರಾಣೇ ತತ್ರ ಭಾಂಡಾಽಗಾರೇ ಸಂಸ್ಥಾಪಯೇದ್ಧನಮ್ ॥
ರಥಯಾತ್ರಾಂ ಪುರೀಕೃತ್ಯಾಽಭಿಷೇಕ ಮಹೋತ್ಸವಮ್ ।
ಸಂಪಾದ್ಯ ಸಂಘಭಕ್ತಿಂ ಚ ಕುರ್ವೀತ ಯಾಜಕೋತ್ತಮಃ ॥

–ಜಯಸೇನ ಪ್ರತಿಷ್ಠಾಪಾಠ

ನಿತ್ಯಪೂಜೆ, ರಥಯಾತ್ರೆ, ಅಭಿಷೇಕ ಶ್ರಾವಕ(ಗೃಹಸ್ಥ) ಮಾಡುತ್ತಿರಬೇಕು. ಇದು ಅವನ ಕರ್ತವ್ಯಗಳಲ್ಲಿ ಸಮ್ಮಿಲಿತವಾಗಿದೆ. ಜಿನಪ್ರತಿಮೆಗಳ ಪೂಜೆ ಮತ್ತು ರಕ್ಷಣೆಗಾಗಿ ಧನಭಂಡಾರ (ಧ್ರುವನಿಧಿ) ಗುಪ್ತ ದ್ರವ್ಯಾದಿಗಳನ್ನು ತೆಗೆದಿರಿಸಬೇಕು. ಯಾಜಕೋತ್ತಮನು ನವೀನ ಮಂದಿರಗಳ ನಿರ್ಮಾಣ ಮಾಡಿಸಿ ನೂತನ ಪ್ರತಿಮೆಯ ಪ್ರತಿಷ್ಠಾಪನೆ ಮಾಡಿಸುವಾಗ ಪೂರ್ವಭಾವಿಯಾಗಿ ಮಂದಿರ ರಕ್ಷಣೆಗಾಗಿ ಧನದ ನಿಕ್ಷೇಪ(ಗುಪ್ತನಿಧಿ)ವನ್ನು ಮೊದಲೇ ಇಟ್ಟಿರಬೇಕು ಮತ್ತು ಮುನಿ, ಆರ್ಯಿಕಾ, ಶ್ರಾವಕ, ಶ್ರಾವಿಕಾ ಎಂಬ ನಾಲ್ಕು ಸಂಘಗಳಿಗೆ ಸತ್ಕರಿಸಬೇಕು.

## ಗಂಧೋದಕದ ಫಲ

ಹೇ ಜಿನೇಂದ್ರ ದೇವ! ತಾವು ಮಿಂದ ಶುದ್ಧೋದಕ ನನ್ನ ಕಣ್ಣು, ಹಣೆಗಳ ಮೇಲೆ ಸೇಚನೆ ಮಾಡಿಗೊಂಡರೆ ನನ್ನ ಸಂಸಾರದ ಸಂತಾಪ ದೂರವಾಗುವುದು. ಪಾಪಗಳು ಪರಿಹಾರ ಹೊಂದುವವು. ತಮ್ಮ ಅಭಿಷೇಕದ ವಿಧಿ ಪೂರ್ಣಗೊಂಡ ಮೇಲೆ, ಶುದ್ಧ ಗಂಧೋದಕದಿಂದ ಒದ್ದೆಯಾದ ನನ್ನ ಕಣ್ಣುಗಳು ಸಫಲಗೊಳ್ಳುವವು. ನನ್ನ ಮಾನವ ಜನ್ಮ ಸಾರ್ಥಕವಾಗುವುದು. ನನ್ನ ಹಣೆಯ ಮೇಲೆ ಬಿದ್ದ ಗಂಧೋದಕವು ಅಶುಭ ಕರ್ಮ (ಕೆಟ್ಟ ಹಣೆಬರಹ)ವನ್ನು ನಾಶಗೊಳಿಸುವುದು.

## ಅಭಿಷೇಕ ಪಾಠ

ಹೀಗೆ ಜಿನೇಂದ್ರನ ಅಭಿಷೇಕದ ಗಂಧೋದಕದ ಮಹತ್ತ್ವವನ್ನು ಪೂರ್ವಾಚಾರ್ಯರು ವರ್ಣಿಸಿದ್ದಾರೆ.

## ಅಷ್ಟದ್ರವ್ಯ ಪೂಜಾಫಲ

ಜಲದಿಂದ ಸಂಸಾರ ಸಂತಾಪ ದೂರವಾಗಿ ಗಂಧ ಲೇಪನದಿಂದ ಸುಗಂಧ ಶರೀರ (ದೇವಗತಿ)ವೂ, ಅಕ್ಷತೆಯಿಂದ ಅಕ್ಷಯ ಮೋಕ್ಷವೂ, ಪುಷ್ಪದಿಂದ ಸ್ವರ್ಗ ಸುಖವೂ, ಚರುವಿನಿಂದ ಅನಂತ ಸೌಖ್ಯವೂ, ದೀಪದಿಂದ ಜ್ಞಾನ ಪ್ರಕಾಶವೂ, ಧೂಪದಿಂದ ಸರ್ವ ಪಾಪಗಳ ನಾಶವೂ, ಫಲದಿಂದ ಇಚ್ಛಿತ ಫಲವೂ, ಅರ್ಘ್ಯದಿಂದ ಅಮೂಲ್ಯ ಮುಕ್ತಿ ಸುಖವೂ, ಶಾಂತಿಧಾರೆಯಿಂದ ಲೋಕ ಶಾಂತಿಯೂ ಲಭಿಸಲೆಂದು ಭಕ್ತಿ ಭಾವದಿಂದ ಪ್ರಾರ್ಥಿಸಿ ಜಿನಚರಣ ಕಮಲಗಳ ಮೇಲೆ ಬೊಗಸೆ(ಅಂಜಲಿ) ತುಂಬ ಹೂವನ್ನರ್ಪಿಸಬೇಕು. ಇದರಿಂದ ಸರ್ವಾರ್ಥ ಸಿದ್ಧಿ ದೊರೆಯುವುದು.

---

ವಿದ್ಯಾನಂದ ವಾಣಿ

## ಸಂಯಮದ ಫಲ

ಗಾಡಿ ಎಷ್ಟೇ ಚೆನ್ನಾಗಿದ್ದರೂ ಬ್ರೇಕ್ ಇಲ್ಲದಿದ್ದರೆ ಎಲ್ಲಾದರೂ ಹಳ್ಳಕ್ಕೆ ಬೀಳಬಹುದು. ಜೀವನದಲ್ಲಿ ಸಂಯಮವಿದ್ದರೆ ಮಾತ್ರ ಆತ್ಮನ ಉನ್ನತಿ ಮಾಡಿಕೊಳ್ಳಬಹುದು. ಬ್ರೇಕ್ ಇಲ್ಲದ ಕಾರು ಹೇಗೆ ಹೊಂಡದಲ್ಲಿ ಬೀಳುವುದೋ, ಹಾಗೆಯೇ ಸಂಯಮವಿಲ್ಲದ ಮನುಷ್ಯನೂ ಹೊಂಡದಲ್ಲಿ ಬೀಳುವನು.

# 6. ಅಭೀಕ್ಷ್ಣ ಜ್ಞಾನೋಪಯೋಗ.

ಅಜ್ಞಸ್ಯ ದುಃಖೌಘಮಯಂ ಜ್ಞಸ್ಯಾನಂದಮಯಂ ಜಗತ್ ।
ಅಂಧಂ ಭುವನಮಂಧಸ್ಯ ಪ್ರಕಾಶಂತು ಸ ಚಕ್ಷುಷಃ ॥ —ಸೂಕ್ತಿ.

## ಪ್ರಕಾಶದಿಂದ ದೃಷ್ಟಿ, ಪ್ರಕಾಶದಿಂದಲೇ ಅಭಯ:

ಜ್ಞಾನವೇ ಬೆಳಕು, ಅಜ್ಞಾನವೇ ಕತ್ತಲೆ. ಅಜ್ಞಾನವು ಮೃತ್ಯು ಹಾಗೂ ಜ್ಞಾನವು ಅಮರವಾಗಿದೆ. ಜ್ಞಾನದಿಂದ ಮನುಷ್ಯನು ಎಲ್ಲಾ ವಸ್ತುಗಳ ಗುಣ ಸ್ವಭಾವವನ್ನು ಅರಿಯುತ್ತಾನೆಯೇ ಹೊರತು ಅಜ್ಞಾನದಿಂದಲ್ಲ. ಕತ್ತಲೆಯಲ್ಲಿ ನಡೆಯುವುದರಿಂದ ಕಲ್ಲು ಎಡವಿ ಬೀಳಬಹುದು ಅಥವಾ ಹಾವನ್ನು ತುಳಿಯಬಹುದು. ಬೆಳಕು ಅವನಲ್ಲಿ ಇದ್ದರೆ ಕಲ್ಲಾಗಲಿ, ಹಾವಾಗಲಿ, ಮುಳ್ಳಾಗಲೀ ಗೋಚರವಾಗುತ್ತದೆ ಮತ್ತು ಅವನು ಅವಘಡದಿಂದ ಪಾರಾಗುತ್ತಾನೆ. ಪೂರ್ವದಲ್ಲಿ ಸೂರ್ಯೋದಯ ವಾಗುತ್ತಲೇ ಪಕ್ಷಿಗಳು ಗಗನದಲ್ಲಿ ಹಾರಾಡಲಾರಂಭಿಸುತ್ತವೆ. ಏಕೆಂದರೆ ಅವುಗಳಿಗೆ ಬೆಳಕು ದೃಷ್ಟಿಯನ್ನೊದಗಿಸುತ್ತದೆ. ಋಷಿಗಳು ಋಗ್ವೇದದಲ್ಲಿ ಸೂರ್ಯೋದಯವನ್ನು ವರ್ಣಿಸುತ್ತಾರೆ. ಕೈ ಜೋಡಿಸಿಕೊಂಡು "ತಮಸೋಮಾ ಜ್ಯೋತಿರ್ಗಮಯ" "ಕತ್ತಲೆ ಯಿಂದ ಬೆಳಕಿನೆಡೆಗೆ ನಮ್ಮನ್ನು ಕರೆದೊಯ್ಯು" ಎಂದು ದೇವರಲ್ಲಿ ಬೇಡಿಕೊಳ್ಳುತ್ತಾರೆ. ಏಕೆಂದರೆ ನಮಗೆ ಎಲ್ಲಾ ಕೆಲಸಗಳನ್ನು ಮಾಡಲೂ ಬೆಳಕು ಬೇಕೇ ಬೇಕು. ಬಟ್ಟೆ ತೆಗೆದುಕೊಳ್ಳುವಾಗ ದೀಪದ ಎದುರಿಗೆ ಹಿಡಿಸಿಕೊಳ್ಳುತ್ತೇವೆ. ಏಕೆಂದರೆ ವಸ್ತ್ರವು ಕೃತ್ರಿಮವೂ ಆಗಿರಬಹುದು. ಹಾಗೆಯೇ ಜ್ಞಾನಿಯಾದವನು ಚಿಂತನೆಯ ಮೂಲಕ ವಸ್ತು ಸ್ಥಿತಿಗಳನ್ನು ತಿಳಿಯುತ್ತಾನೆ. ದೇಹದಲ್ಲಿ ಎಲ್ಲಾ ಅಂಗಗಳೂ ಶ್ರೇಷ್ಠವಾಗಿದ್ದರೂ ಕಣ್ಣುಗಳ ಸ್ಥಾನ ಬಹಳ ಹಿರಿದಾಗಿದೆ. ಕಣ್ಣುಗಳಿಲ್ಲವಾದರೆ ಸಂಸಾರದ ಆಗುಹೋಗುಗಳನ್ನು ನಾವು ನೋಡಲಾರೆವು. "ಹಿತಂ ಹಿತ್ವಾಽಹಿತೇ ಸ್ಥಿತ್ವಾ ದುರ್ಧೀರ್ದುಃಖಾಯತೇ ಭೃಶಂ" (ಆತ್ಮಾನುಶಾಸನ 946) (ಕೆಟ್ಟ ಬುದ್ಧಿಯು ಮನುಷ್ಯನನ್ನು ಕೆಟ್ಟ ದಾರಿಗೆ ಕರೆದೊಯ್ಯುತ್ತದೆ.) ಭರ್ತೃಹರಿಯು ವಿದ್ಯೆಯಿಲ್ಲದವರನ್ನು ಪಶು ಎಂದು ಹೇಳಿದ್ದಾನೆ. ಮೃಗಗಳೊಂದಿಗಾದರೂ ಇರಬಹುದು. ಆದರೆ ಮೂರ್ಖನೊಡನೆ ಇರಲು ತುಂಬಾ ಕಷ್ಟ ಎಂದು ಹೇಳಿದ್ದಾನೆ. ಜ್ಞಾನದಿಂದಲೇ ಜೀವನ ಕಲೆ, ಆತ್ಮ ಪರಮಾತ್ಮಗಳ ವಿಮರ್ಶೆ, ವಿಜ್ಞಾನ ಇತ್ಯಾದಿಗಳನ್ನು ತಿಳಿಯಬಹುದೇ ಹೊರತು ಅಜ್ಞಾನದಿಂದಲ್ಲ.

## ಜ್ಞಾನ— ಸ್ವಲ್ಪ ತನ್ನಿಂದ ಹಾಗೂ ಸ್ವಲ್ಪ ಇತರರಿಂದ ದೊರೆಯುತ್ತದೆ:

ಅಜ್ಞಾನಿಯನ್ನು ಕರೆದು ಉತ್ತಮ ಹಣ್ಣುಗಳನ್ನು ತರಲು ಹೇಳಿದರೆ ಸಿಹಿ ಹಣ್ಣುಗಳನ್ನು ಬಿಟ್ಟು ಹುಳಿ ಹಣ್ಣುಗಳನ್ನು ತರುತ್ತಾನೆ. ಯಾಕೆಂದರೆ ಅವನಿಗೆ ಅದರೊಳಗಿನ ಭೇದ ಗೊತ್ತಿಲ್ಲ. ಅವನಿಗೆ ಯಾವ ರೀತಿಯ ಅನುಭವವೂ ಇರುವುದಿಲ್ಲ. ಶಾಲೆಯಲ್ಲಿ ಜೀವನದ ಬಗ್ಗೆ ಶಿಕ್ಷಣ ನೀಡಿ ಉತ್ತಮ ಜೀವನವನ್ನು ಹೇಗೆ ಮಾಡಬಹುದೆಂದು ತಿಳಿಸುತ್ತಾರೆ. ಹೀಗೆ ಜ್ಞಾನವು ಸ್ವಲ್ಪ ಅನುಭವದಿಂದಲೂ ಬೇರೆಯವರನ್ನು ನೋಡಿಯೂ ಕಲಿಯಬೇಕು.

## ಅಡಗಿಕೊಂಡಿರುವ ಜ್ಞಾನ

"ಹಿತಾನುಬಂಧಿ ಶಾಸನಂ" ತನಗೆ ಬೇಕಾದ ವಿಷಯಗಳ ಬಗ್ಗೆ ವ್ಯಕ್ತಿಯು ಜ್ಞಾನದಿಂದ ತಿಳಿದುಕೊಳ್ಳುತ್ತಾನೆ. ಜ್ಞಾನವೆಂದರೆ ಬೆಳಕು, ಪ್ರಕಾಶ. ಪ್ರಕಾಶವು ದೀಪ, ಸೂರ್ಯ ಅಥವಾ ಬೆಂಕಿಯಿಂದ ಉಂಟಾಗುತ್ತದೆ. ದೀಪದಿಂದ ಬೆಳಕು ಸಿಗುತ್ತದೆಂದು ಅದರಿಂದ ಕೈಗೆ ಸಿಕ್ಕಿದ ವಸ್ತುವನ್ನು ಸುಡುವುದಲ್ಲ, ಅದು ದೀಪದ ಗುಣವನ್ನು ದುರುಪಯೋಗಪಡಿಸಿದಂತೆ. ಹಾಗೆಯೇ ನಮ್ಮ ಜ್ಞಾನವನ್ನೂ ನಾವು ಸತ್ಕಾರ್ಯಗಳಿಗೆ ಉಪಯೋಗಿಸಬೇಕು. ವಿಜ್ಞಾನದಿಂದ ಒಳಿತನ್ನೂ ಕೆಡುಕನ್ನೂ ಮಾಡಬಹುದು. ಆದರೆ ವಿನಾಶ ಮಾಡಿದರೆ ದೀಪವಿದ್ದೂ ಬಾವಿಗೆ ಬಿದ್ದಂತೆಯೇ ಆಗುತ್ತದೆ. ಅಂದರೆ ಕೆಟ್ಟ ಕೆಲಸಗಳನ್ನು ಮಾಡಬಾರದು. ನಮ್ಮ ಶ್ರಮವನ್ನು ಅದಕ್ಕಾಗಿ ಹಾಳು ಮಾಡಬಾರದು. ಅಜ್ಞಾನಿಯೊಬ್ಬ ನಾನು ತುಂಬಾ ಬುದ್ಧಿವಂತನೆಂದುಕೊಂಡು ಇದ್ದರೆ ಜ್ಞಾನಿಯು ಅವನನ್ನು ಸುಲಭವಾಗಿ ಸೋಲಿಸಬಹುದು. ಜ್ಞಾನವನ್ನು ಯಾರೂ ಕಸಿಯಲಾಗುವುದಿಲ್ಲ. ಜ್ಞಾನವನ್ನು ತನ್ನ ಆತ್ಮೋನ್ನತಿಗೆ ಉಪಯೋಗಿಸಬೇಕು. ಬೆಂಕಿ ಮತ್ತು ಉಷ್ಣತೆ, ನೀರು ಹಾಗೂ ಅದರ ಶೀತದಂತೆ ಗುಣಗಳು ಗುಣಿಯಲ್ಲಿ (ಮನುಷ್ಯನಲ್ಲಿ ಸೇರಿದ್ದರೇನೆ) ಅವನಿಗೆ ಸದ್ಗುಣಿ ಎಂದು ಹೇಳುತ್ತಾರೆ. ಜ್ಞಾನ ಸಂಪಾದಿಸಲು ತುಂಬಾ ಕಷ್ಟ ಪಡಬೇಕು. ಸರಿಯಾಗಿ ಮಣ್ಣಿನ ಕೊಡವನ್ನು ಸುಡದಿದ್ದರೆ ನೀರಿನಲ್ಲಿ ಅದು ಕರಗಿ ಹೋಗುತ್ತದೆ. ಹಾಗೆಯೇ ಜ್ಞಾನವನ್ನೂ ಕಷ್ಟಪಟ್ಟು ಸಂಪಾದಿಸದಿದ್ದರೆ ಜೀವನದಲ್ಲಿ ಬರುವ ತೊಂದರೆಗಳನ್ನು ನಿವಾರಿಸಿಕೊಳ್ಳಲು ತುಂಬಾ ಕಷ್ಟವಾಗುತ್ತದೆ.

## ಪ್ರಮಾದವೇ ಮೃತ್ಯು:

ಜ್ಞಾನವನ್ನು ಮನುಷ್ಯನಾದವನು ಸಂಪಾದಿಸಬೇಕು. 'ಆತ್ಮಾನುಶಾಸನ [64]ರಲ್ಲಿ 'ಜ್ಞಾನವೇ ದುರ್ಲಭ. ಅದನ್ನು ಈ ಜನ್ಮದಲ್ಲಿಯೇ ಪಡೆಯದಿದ್ದರೆ ಇನ್ನೊಂದು ಜನ್ಮದಲ್ಲಿ ಸಿಗುವುದು ತುಂಬ ಕಷ್ಟ'' ಎಂದು ಆಚಾರ್ಯ 'ಗುಣಭದ್ರರು' ಹೇಳಿದ್ದಾರೆ. ಯಾಕೆಂದರೆ ಇನ್ನೊಂದು ಜನ್ಮದಲ್ಲಿ ನಾವು ಯಾರಾಗಿ [ಯಾವ ಪರ್ಯಾಯದಲ್ಲಿ] ಹುಟ್ಟುತ್ತೇವೆಂದು ಹೇಳಲು ಸಾಧ್ಯವಿಲ್ಲ. ಅದಕ್ಕೆ ಯಾವ ಪ್ರಮಾಣ ಪತ್ರವೂ ಇಲ್ಲ. 'ಪ್ರಮಾದಂ ವೈ ಮೃತ್ಯು ಮಹಂ ಬ್ರವೀಮಿ' [ಸಾಯುವುದು ಮೃತ್ಯುವಲ್ಲ ಪ್ರಮಾದವೇ ಮೃತ್ಯು] ಎಂದು ಆಚಾರ್ಯರು ಹೇಳಿದ್ದಾರೆ. ಧೈರ್ಯಶಾಲಿಗೆ ಮೃತ್ಯು ಹಲವು ಬಾರಿ ಬರುವುದಿಲ್ಲ. ಆದರೆ ಹೇಡಿಗೆ ಕ್ಷಣ ಕ್ಷಣವೂ ಮೃತ್ಯು ಬರುತ್ತದೆ.

## ಪರಿಗ್ರಹಗಳನ್ನು ಬಿಡಬೇಕು

ಆಸೆಯಿಂದ ರಾಗ ದ್ವೇಷಗಳು ಉಂಟಾಗುತ್ತವೆ. ಜ್ಞಾನವೆಂಬ ಬೆಂಕಿಯು ರಾಗ ದ್ವೇಷಗಳನ್ನು ಸಂಪೂರ್ಣವಾಗಿ ಸುಡುತ್ತದೆ. ರೋಗವನ್ನು ಹೋಗಲಾಡಿಸಲು ಶಸ್ತ್ರ ಕ್ರಿಯೆ ಹೇಗೆ ಅಗತ್ಯವೋ ಹಾಗೆಯೇ ಮೋಹವನ್ನು ಜ್ಞಾನವು ಹೋಗಲಾಡಿಸುತ್ತದೆ. ಶಾಸ್ತ್ರಗಳನ್ನೋದಿಯೂ ವ್ಯಕ್ತಿಯು ಮೋಹವನ್ನು ಬಿಡದಿದ್ದರೆ ಅವನು ಮಾಡಿದ ಕೆಲಸವು ವ್ಯರ್ಥ. ಆತ್ಮ ಹಿತವನ್ನು ಅರಿತ ವ್ಯಕ್ತಿಯು ಯಾರಿಂದಲೂ ಯಾವುದೇ

ರೀತಿಯ ದಾನ ಸ್ವೀಕರಿಸುವುದಿಲ್ಲ. ಅಜ್ಞಾನಿಗೆ ಇಂದ್ರಿಯಗಳಿದ್ದೂ ಇಲ್ಲದಂತೆ. ಜ್ಞಾನಿಯಾದವರೋ ಅವನ್ನು ತನ್ನ ಉಪಯೋಗದಲ್ಲಿ ತರುತ್ತಾನೆ. ಉಪನಿಷತ್ತಿನಲ್ಲಿ "ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತ ಚಕ್ಷುರಮೃತತ್ವ ಮಿಚ್ಛನ್" ಸಂಸಾರದ ಎಲ್ಲಾ ಪ್ರಾಣಿಗಳೂ ತಮ್ಮ ಇಂದ್ರಿಯಗಳನ್ನು ಬಹಿರ್ಮುಖವಾಗಿಟ್ಟುಕೊಂಡು ಜಗತ್ತಿನ ಆನಂದವನ್ನು ಪಡೆಯುತ್ತವೆ. ಆದರೆ ಕೆಲವು ವ್ಯಕ್ತಿಗಳು ಕೇವಲ ಬಹಿರ್ಮುಖರಾಗದೆ ಅಂತರ್ಮುಖಿಗಳಾಗಿ ಆತ್ಮ ಧ್ಯಾನದಲ್ಲಿ ತೊಡಗುತ್ತಾರೆ. "ನ ತಸ್ಯ ಕಾರ್ಯ ಕರಣಂಚ ವಿದ್ಯತೆ" ಅಂಥವರ ಅಂತರಂಗ ಹಾಗೂ ಬಹಿರಂಗಗಳು ಆತ್ಮನ ಧ್ಯಾನದಲ್ಲೀ ಮುಳುಗಿರುತ್ತವೆ. ಜಗತ್ತಿನ ಎಲ್ಲಾ ಸುಖಗಳನ್ನೂ ಮರೆತು ಇರುವಂಥ ಇಂತಹ ವ್ಯಕ್ತಿಗಳಿಗೆ ಜ್ಞಾನಪ್ರಾಪ್ತಿಯುಂಟಾಗುತ್ತದೆ. ಆಚಾರ್ಯ ಸಮಂತಭದ್ರರು ಪರಂಪರಾಗತವಾಗಿ ಬರುವ ಜ್ಞಾನವು ಅದ್ಭುತ. ಆದುದರಿಂದ ಯಾವುದೇ ಮುನಿಗಳ ಜ್ಞಾನದ ಬಗ್ಗೆ ಹೇಳುತ್ತಾ ಪಂಡಿತ 'ದೌಲತ್‌ರಾಮಜೀ'ಯವರು 'ಛಹಢಾಲ'ದಲ್ಲಿ ಹೀಗೆ ಹೇಳುತ್ತಾರೆ–

ಜಗ ಸುಹಿತಕರ್, ಸಬ್ ಅಹಿತಕರ್, ಶ್ರುತಿಸುಖದ್ ಸಬ್ ಸಂಶಯಹರೈ ।
ಭ್ರಮರೋಗ, ಹರ್‌ಜಿನ್‌ಕೆ ವಚನ್ ಮುಖಚಂದ್ರ ಸೆ ಅಮೃತ್‌ಝುರೇ ॥

**ಹೇಯೋಪಾದೇಯವಿಜ್ಞಾನ:**

ಮುನಿಗಳು ಸಮಾಜಕ್ಕೆ ಒಳಿತನ್ನು ಮಾಡುತ್ತಾರೆಯೇ ಹೊರತು ಕೆಡುಕನ್ನಲ್ಲ. ಅಂತಹವು ಅವರ ಮನಸ್ಸಿನಲ್ಲೂ ಇರುವುದಿಲ್ಲ. ಜನರಿಗಿರುವ ಸಂದೇಹಗಳನ್ನು ಅವರು ನಿವಾರಿಸುತ್ತಾರೆ. ಸಮಾಜಕ್ಕುಂಟಿರುವ ಭ್ರಮೆಯನ್ನು ಹೋಗುವಂತೆ ಮಾಡಿ ಮೋಕ್ಷವನ್ನು ಹೇಗೆ ಪಡೆಯಬಹುದೆಂದು ತಿಳಿಸಿ ಹೇಳುತ್ತಾರೆ. ಜಿನೇಂದ್ರರ ಮಾತುಗಳನ್ನು ನಮಗೆ ಸ್ಪಷ್ಟವಾಗುವಂತೆ ಹೇಳುತ್ತಾರೆ.

**ಜ್ಞಾನದ ಗೌರವ:**

ಒಳ್ಳೆಯ ಕೆಲಸವು ಗೌರವಕ್ಕೆ ಪಾತ್ರವಾಗುತ್ತದೆ. ಬರೀ ನೋಡಲು ಸುಂದರವಾಗಿದ್ದರೆ ಯಾರೂ ಗೌರವವನ್ನು ಕೊಡುವುದಿಲ್ಲ. ಜ್ಞಾನವು ಅಜ್ಞಾನವನ್ನು ಹೋಗಲಾಡಿಸುತ್ತದೆ. ಜ್ಞಾನಿಯ ಕೆಲಸವನ್ನು ನೋಡಿದಾಗ ಅವನ ಜ್ಞಾನವನ್ನು ತಿಳಿದುಕೊಳ್ಳಬಹುದು. ಅದೇ ರೀತಿ ಅಜ್ಞಾನಿಯ ಕೆಲಸವನ್ನು ನೋಡಿ ಅವನ ಜ್ಞಾನದ ಮಟ್ಟವನ್ನು ಅಳೆಯಬಹುದು. ಜಿಂಕೆಯ ಸ್ವಭಾವವನ್ನು ಅಳೆಯಲಾಗುವುದಿಲ್ಲ. ಜಿಂಕೆ ಹಾಗೂ ಉಷ್ಣತೆ ಒಂದರಲ್ಲೊಂದು ಅಡಕವಾಗಿರುವಂತೆ ಜ್ಞಾನವೂ ಜ್ಞಾನಿಯಲ್ಲಿ ಅಡಕವಾಗಿದ್ದರೆ ಅಂತಹ ಜ್ಞಾನವು ಕೃತಾರ್ಥವೆಂದು ತಿಳಿಯಬಹುದು. ಉರಿಯುವ ದೀಪವನ್ನು ನೋಡಿ ಇದು ಸುಡುತ್ತದೆಯೋ ಎಂದು ಪ್ರತ್ಯಕ್ಷವಾಗಿ ಯಾರೂ ನೋಡಲು ಆಸೆ ಪಡುವುದಿಲ್ಲ. ಯಾಕೆಂದರೆ ಅದು ಸುಡುವುದೆಂದು ಎಲ್ಲರಿಗೂ ಗೊತ್ತು. ಮುನಿಗಳು ಮೋಕ್ಷಕ್ಕಾಗಿ ಕೆಲಸ ಮಾಡುತ್ತಿರುತ್ತಾರೆಯೇ ಹೊರತು ಬೇರೆ ಯಾವ ಇಚ್ಛೆಯೂ ಅವರಿಗಿಲ್ಲ. ಅವರು ಇಂದ್ರಿಯ ನಿಗ್ರಹ ಮಾಡಿ ಕಠೋರ ತಪಸ್ಸನ್ನು ಇದಕ್ಕಾಗಿ ಕೈಗೊಳ್ಳುತ್ತಾರೆ.

## ಜ್ಞಾನಾಗ್ನಿಯಲ್ಲಿ ಸಮರ್ಪಣೆ

ಅಗ್ನಿಯು ಕಟ್ಟಿಗೆಯನ್ನು ಸುಟ್ಟು ಹೊರಕ್ಕೂ ಒಳಕ್ಕೂ ಶಾಖ(ಬಿಸಿ)ವನ್ನು ನೀಡುತ್ತದೆ. ಹಾಗೆಯೇ ಜ್ಞಾನಾಗ್ನಿಯು ನಾವು ಮಾಡಿದ ಕರ್ಮಗಳನ್ನು ಕ್ಷಯಿಸುವಂತೆ ಮಾಡುತ್ತದೆ. ನಮ್ಮ ದೋಷಗಳನ್ನು ಪರಿಹರಿಸುತ್ತದೆ. ಈ ಜಗತ್ತಿಗೆ ಬಂದ ಮೇಲೆ ಪ್ರಾಪಂಚಿಕ ಆಸೆಗಳನ್ನು ತೊರೆದು ಶಾಸ್ತ್ರಗಳನ್ನು ಓದಬೇಕು. ಇದರಿಂದ ಒಳಿತಾಗುತ್ತದೆ ಎಂದು ಗುಣಭದ್ರರು ಹೇಳಿದ್ದಾರೆ. ಜನರು ಶಾಸ್ತ್ರಗಳನ್ನು ಓದಿ ಅದನ್ನು ಪ್ರದರ್ಶನಕ್ಕಿಡುತ್ತಾರೆ. ಇಂಥವರು ಯಾವತ್ತಿಗೂ ಒಳ್ಳೆಯ ವ್ಯಕ್ತಿಗಳೆಂದು ಪರಿಗಣಿಸಲ್ಪಡುವುದಿಲ್ಲ. ಶಾಸ್ತ್ರಗಳನ್ನು ಓದುವಾಗ ಇಂಥವರಿಗೆ ಆನಂದವುಂಟಾಗದೆ ಕೇವಲ ಹೊರಗಿನ ಪ್ರದರ್ಶನಕ್ಕೋಸ್ಕರ ಓದುತ್ತಾರೆ. ವಿದ್ಯಾದೇವತೆಯು ಬ್ರಹ್ಮಜ್ಞಾನಿಯೊಬ್ಬನ ಬಳಿ ಬಂದು ತನ್ನನ್ನು ರಕ್ಷಿಸುವಂತೆ ಕೇಳಿಕೊಂಡಾಗ ಅವನಿಗೆ ಆಶ್ಚರ್ಯವಾಗುತ್ತದೆ. ಅವನು ನಾನು ನಿನ್ನನ್ನು ಹೇಗೆ ರಕ್ಷಿಸಲಿ? ಎಂದು ಕೇಳಿದ್ದಕ್ಕೆ ವಿದ್ಯಾದೇವತೆಯು 'ಇಂದ್ರಿಯ ಲೋಲುಪರಿಗೆ ಸುಳ್ಳು ಹೇಳುವವರಿಗೆ ನಾನು ಒಲಿಯಬಾರದು' ಎಂದು ಹೇಳಿದಳಂತೆ ಅಂದರೆ ಒಳ್ಳೆಯ ವ್ಯಕ್ತಿಗಳಿಗೆ ವಿದ್ಯೆಯು ಸಿದ್ಧಿಸುತ್ತದೆ ಎಂದು ಅರ್ಥ. ಹೀಗೆಂದು ಋಗ್ವೇದದಲ್ಲಿ ಹೇಳಲಾಗಿದೆ. ಗುರುವು ಶಿಷ್ಯನನ್ನು ವಿದ್ಯೆ ಕಲಿಸುವ ಮೊದಲೇ ಪರೀಕ್ಷಿಸಬೇಕು. ವಿದ್ಯೆಯು ಅಪಾತ್ರದಾನವಾಗಬಾರದು. ವಿದ್ಯೆಯನ್ನು ಸಂಪಾದಿಸಿ ಆತ್ಮನಲ್ಲಿರುವ ಕೊಳೆ (ಕಶ್ಮಲ)ಗಳನ್ನು ಹೊರಹಾಕಬೇಕು.

## ಮೂರು ಗ್ರಾಹ್ಯ ವಿಷಯಗಳು ಹಾಗೂ ಮೂರು ತ್ಯಾಜ್ಯ ವಿಷಯಗಳು:

ಬೆಂಕಿಯು ಕುಂಡದಿಂದ ಹೊರ ಚಾಚಿ ಹೇಗೆ ಪ್ರಜ್ವಲಿಸುತ್ತದೋ ಅದೇ ರೀತಿ ಜ್ಞಾನವು ಕೂಡಾ ಇತರರಿಗೆ ಪ್ರಯೋಜನವಾಗುವಂತೆ ಇರಬೇಕು. ಅಹಿಂಸೆಯನ್ನು ಪಾಲಿಸಿ ಇತರ ಪ್ರಾಣಿಗಳಿಗೆ ನೋವಾಗದಂತೆ ಎಚ್ಚರವಹಿಸಬೇಕು. ಎಲ್ಲರ ಬಗ್ಗೆಯೂ ಮೈತ್ರೀ ಭಾವನೆಯನ್ನು ತೋರಿಸಬೇಕು. ಜ್ಞಾನಿಗಳಲ್ಲಿ ಎಲ್ಲರ ಬಗೆಗೂ ಒಳ್ಳೆಯ ಭಾವನೆಯಿರುತ್ತದೆ. ಜ್ಞಾನವು ಲೌಕಿಕವಾದ ಸುಖಗಳನ್ನು ಮಾತ್ರ ಕೊಡುವುದಲ್ಲದೆ ಅಲೌಕಿಕ ಸುಖವನ್ನು ಪಡೆಯುವಂತೆ ಮಾಡುತ್ತದೆ. 'ರತ್ನಕರಂಡಕ'ದಲ್ಲಿ ತಪಸ್ವಿಗಳಿಗಾಗಿ ಮೂರು ತ್ಯಾಜ್ಯಗಳನ್ನೂ ಮೂರು ಗ್ರಾಹ್ಯಗಳನ್ನೂ ಹೇಳಿದ್ದಾರೆ. ಪರಿಗ್ರಹ, ಕೃಷ್ಯಾದಿ, ಆರಂಭ ಹಾಗೂ ಆಸೆ ಇಟ್ಟುಕೊಳ್ಳದಿರುವುದೇ ಆ ಮೂರು ವಿಷಯಗಳು.

## ಅಭೀಕ್ಷ್ಣತೆ ಜ್ಞಾನದ ಧ್ರುವೀಕರಣದ ಕ್ರಿಯೆ:

ಜ್ಞಾನದಿಂದಲೇ ಧರ್ಮವನ್ನಾಚರಿಸಬಹುದಾಗಿದೆ. ಧರ್ಮವನ್ನು ಪಾಲಿಸಲು, ಅಧರ್ಮವನ್ನು ನೀಗಿಸಲು ಉಪದೇಶ ಮುಖ್ಯ ಪಾತ್ರವನ್ನು ವಹಿಸುತ್ತದೆ. ಇದಕ್ಕಾಗಿ ಸರ್ವಾರ್ಥಸಿದ್ಧಿ ಗ್ರಂಥಗಳಲ್ಲಿ ಮುನಿಗಳು ಆತ್ಮ ಧ್ಯಾನದಲ್ಲಿ ಮಗ್ನರಾಗಿರಬೇಕೆಂಬ ನಿಯಮವನ್ನು ಉಲ್ಲೇಖಿಸಲಾಗಿದೆ. ಪಶುಗಳು ವಿಶ್ರಾಂತಿ ಕಾಲದಲ್ಲಿ ಮೆಲುಕು ಹಾಕುತ್ತವೆ. ಹಾಗೆಯೇ ಜ್ಞಾನಿಗಳು ಆಗಾಗ ವಿಚಾರ ಮಂಥನ ನಡೆಸುವುದನ್ನು ಅಭೀಕ್ಷ್ಣ ಜ್ಞಾನೋಪಯೋಗವೆನ್ನುತ್ತೇವೆ. ವಿದ್ಯೆಯ ಬಗ್ಗೆ 'ಸೂಕ್ತಿ'ಯು, 'ನೂರು ಬಾರಿ

ಅಭ್ಯಾಸ ಮಾಡುವುದರಿಂದ ವಿದ್ಯೆ ಬರುತ್ತದೆ. ಸಾವಿರ ಬಾರಿ ಅಭ್ಯಾಸ ಮಾಡುವುದರಿಂದ ಸ್ಥಿರವಾಗಿ ನಿಲ್ಲುತ್ತದೆ ಎಂದು ಹೇಳುತ್ತದೆ. ಮನಸ್ಸು ಚಂಚಲ. ಅದನ್ನು ಸ್ಥಿರವಾಗಿರುವಂತೆ ಮಾಡಬೇಕು. ಜ್ಞಾನವನ್ನು ನಾವು ಕಷ್ಟಪಟ್ಟು ಸಂಪಾದಿಸಬೇಕು.

**ಎಲ್ಲಾ ಆಗುವುದು ಆತ್ಮನಿಂದಲೇ:**

ಜ್ಞಾನ ಪಿಪಾಸೆ ಯಾವತ್ತೂ ಕಡಿಮೆಯಾಗುವುದಿಲ್ಲ. ಚಿಂತನೆ, ಸ್ವಾಧ್ಯಾಯ, ತಪ, ಸಂಯಮ ಇತ್ಯಾದಿಗಳ ಸಹಾಯದಿಂದ ಜ್ಞಾನವನ್ನು ಪಡೆಯುತ್ತೇವೆ. ಜ್ಞಾನಿಗಳು ಸಂಯಮಿಗಳಾಗಿ, ಅಚಲರಾಗಿರುತ್ತಾರೆ. ಕನ್ನಡಿಯು ಹೇಗೆ ಬಿಂಬವನ್ನು ಪ್ರತಿಬಿಂಬಿಸುತ್ತದೋ ಹಾಗೆಯೇ ಮನಸ್ಸು ನಮ್ಮ ಆತ್ಮನನ್ನು ಪ್ರತಿಬಿಂಬಿಸುತ್ತದೆ

**ಜ್ಞಾನಾರ್ಜನೆಯಲ್ಲಿ ಮಗ್ನರಾಗಿರುವರು:**

ಜ್ಞಾನಾರ್ಜನೆಯನ್ನು ಮಾಡಲು ಸರಸ್ವತಿಯು ಮಾರ್ಗದರ್ಶನವನ್ನು ಮಾಡುತ್ತಾಳೆ. ಕಣಾದ ಮಹರ್ಷಿಗಳು ಅಧ್ಯಯನ ನಡೆಸುತ್ತಾ ನಡೆಯುತ್ತಿರುವಾಗ ಬಾವಿಗೆ ಬಿದ್ದರು. ಅಲ್ಲೂ ಅವರು ಅಧ್ಯಯನ ನಡೆಸುವುದು ಕಂಡು ಸರಸ್ವತಿಗೆ ಸಂತೋಷವಾಯಿತು. ವರವಾಗಿ ಅವರಿಗೆ ನಡೆಯುವಾಗ ಓದಲು ಸಹಾಯವಾಗುವಂತೆ, ಕಾಲುಗಳಿಗೂ ಕಣ್ಣುಗಳೆರಡನ್ನು ಕೊಟ್ಟಳು. ವಾಚಸ್ಪತಿಗೆ 20 ವರ್ಷಗಳ ದೀರ್ಘ ಅಧ್ಯಯನ ಕಾಲದಲ್ಲಿ ಮನೆಯಲ್ಲಿ ಪತ್ನಿಯಿದ್ದಾಳೆ ಎಂಬ ವಿಷಯವೂ ಮರೆತು ಹೋಗಿತ್ತು. ಆಮೇಲೆ ಅವರಿಗೆ ಹೆಂಡತಿಯ ನೆನಪಾಯಿತು. ವಿದ್ಯಾ ಮಗ್ನರಾಗಿರುವವರು ಜಗತ್ತನ್ನೇ ಮರೆತು ಅಧ್ಯಯನದಲ್ಲಿ ಮಗ್ನರಾಗಿರುತ್ತಾರೆ.

**ದಾರಿ ದೀಪ:**

ಅಭೀಕ್ಷ್ಣ ಜ್ಞಾನೋಪಯೋಗವೆಂದರೆ ಜೀವಾದಿ ದ್ರವ್ಯಗಳ ಬಗ್ಗೆ ಸಮ್ಯಗ್-ಜ್ಞಾನದಲ್ಲಿ ಮಗ್ನರಾಗಿರುವುದು. ಅಭೀಕ್ಷ್ಣ ಅಂದರೆ ನಿರಂತರವಾಗಿ ಮಗ್ನವಾಗಿರುವುದು ಎಂದರ್ಥ. ಜ್ಞಾನೋಪಯೋಗವೆಂದರೆ ಎರಡರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಒಂದು ಜ್ಞಾನದ ಉಪಯೋಗ, ಎರಡನೆಯದು ಜ್ಞಾನ ಪೂರ್ವಕ ಆತ್ಮನ ಉಪಯೋಗ. ಜ್ಞಾನ ಚೇತನ ಮತ್ತು ದರ್ಶನ ಚೇತನಗಳೆರಡು ಜೀವನದ ಲಕ್ಷಣಗಳಾಗಿವೆ. ಜ್ಞಾನ ದರ್ಶನವು ಚಾರಿತ್ರ್ಯ ಪಾಲನೆಯನ್ನು ಮಾಡುತ್ತದೆ. ಅಥವಾ ಜ್ಞಾನೋಪಯೋಗವೆಂದರೆ ಸಮ್ಯಗ್ದರ್ಶನದ ಮೂಲಕ ಹೊಸ್ತಿಲ ಮೇಲಿಟ್ಟ ದೀಪವು ಹೊರಗೂ ಒಳಕ್ಕೂ ಹೇಗೆ ಬೆಳಕನ್ನು ಚೆಲ್ಲುತ್ತದೋ ಅದೇ ರೀತಿ ಜ್ಞಾನೋಪಯೋಗ ಶಬ್ದವು ದರ್ಶನ ಮತ್ತು ಚಾರಿತ್ರ್ಯಗಳ ಬಗ್ಗೆ ವಿವರಣೆ ನೀಡುತ್ತದೆ.

**ಜ್ಞಾನವಿಲ್ಲದ ಚಾರಿತ್ರ್ಯ ವ್ಯರ್ಥ.**

ಜ್ಞಾನವನ್ನು ಒಳ್ಳೆಯ ರೀತಿಯಲ್ಲಿ ಜೀವನದಲ್ಲಿ ಅಳವಡಿಸದಿದ್ದರೆ ಜನರು ಕೆಟ್ಟ ಕೆಲಸಗಳನ್ನು ಮಾಡುತ್ತಾರೆ. ಅನರ್ಥಗಳುಂಟಾಗುತ್ತವೆ. ಖಡ್ಗವನ್ನು ಮಸೆದಂತೆಯೇ ಆತ್ಮಜ್ಞಾನದಲ್ಲಿ ತನ್ನನ್ನು ಹರಿತಗೊಳಿಸುವುದು ಮೋಕ್ಷಕ್ಕೆ ಮಾರ್ಗವಾಗಿರುತ್ತದೆ. ಸಮ್ಯಗ್ದರ್ಶನದ ಫಲವೇ ಸಮ್ಯಕ್ ಜ್ಞಾನ ಮತ್ತು ಸಮ್ಯಕ್ ಚಾರಿತ್ರ್ಯ

ಗಳಾಗಿವೆ. ಜ್ಞಾನದ ವಿನಾ ಚಾರಿತ್ರ್ಯವು ವ್ಯರ್ಥ. ವೀತರಾಗ ಮುದ್ರೆಯನ್ನು ಧರಿಸಿಕೊಂಡು ಆತ್ಮೋನ್ನತಿಯಲ್ಲಿ ತೊಡಗಬೇಕು.

**ಸರ್ವೋಚ್ಚ ಸ್ಥಿತಿ**

"ನ ಹಿ ಜ್ಞಾನೇನ ಸದೃಶಂ, ಪವಿತ್ರಮಿಹ ವಿದ್ಯತೇ." ಜ್ಞಾನಕ್ಕೆ ಸರಿಯಾದ ವಸ್ತುವು ಬೇರೊಂದಿಲ್ಲ. ಇದರಿಂದ ಸ್ವ-ಪರ, ವಿವೇಕ, ಆತ್ಮದ ಕುರಿತಾದ ಮಾಹಿತಿ ಸಿಗುತ್ತದೆ. ಅಂದರೆ ಜ್ಞಾನವನ್ನು ಉಪಯೋಗಿಸಿಕೊಳ್ಳುವುದರ ಮೇಲೆ ಅವಲಂಬಿಸಿದೆ. ಇದಕ್ಕಾಗಿಯೇ ಸಾಧುಗಳು ಆತ್ಮಧ್ಯಾನದಲ್ಲಿ ಮಗ್ನರಾಗಿರುತ್ತಾರೆ.

**ಜ್ಞಾನಿಯು ಅಂಧಕಾರದಲ್ಲಿ ಮುಳುಗುವುದಿಲ್ಲ**

ಸ್ವಾಧ್ಯಾಯವು ಜ್ಞಾನೋಪಯೋಗದ ದಾರಿಯಾಗಿದೆ. ಜ್ಞಾನದಿಂದ ಜಗತ್ತಿನ ಎಲ್ಲಾ ವಸ್ತುಗಳ ಪರಿಚಯುವನ್ನು ನಾವು ಮಾಡಿಕೊಳ್ಳುತ್ತೇವೆ. ಅಭೀಕ್ಷ್ಣ ಜ್ಞಾನೋಪಯೋಗವು ಅಂಧಕಾರದಲ್ಲಿ ಮುಳುಗಿಸುವುದಿಲ್ಲ. ಯಾಕೆಂದರೆ ಜ್ಞಾನವು ನಮ್ಮನ್ನು ಯಾವಾಗಲೂ ಜಾಗೃತವಾಗಿರುವಂತೆ ಮಾಡುತ್ತದೆ.

**ಅವಿಚಲ ಜ್ಞಾನನಿಷ್ಠಾ:**

ಅಭೀಕ್ಷ್ಣ ಜ್ಞಾನೋಪಯೋಗವು ಆತ್ಮಶಾಂತಿಯನ್ನು ನೀಡಿ ಚಿಂತೆಯಿಲ್ಲದಂತೆ ಮಾಡುತ್ತದೆ. ಅದು ಪ್ರಾಪಂಚಿಕ ಸುಖವನ್ನು ಮರೆಯುವಂತೆ ಮಾಡುತ್ತದೆ. ಪಾಣಿನಿಯು ಶಿಷ್ಯರಿಗೆ ಸಂಸ್ಕೃತ ವ್ಯಾಕರಣ ಕಲಿಸುತ್ತಿದ್ದಾಗ ಹುಲಿ ಬಂತು. ಶಿಷ್ಯರು ಭಯಭೀತರಾದರೂ ಪಾಣಿನಿ ಗಾಬರಿಗೊಳ್ಳಲಿಲ್ಲ, ಅವರು ವ್ಯಾಘ್ರ ಶಬ್ದದ ನಿರೂಪಣೆಯನ್ನು ಕಂಡುಕೊಂಡರು. 'ವ್ಯಾಜಿಘ್ರತಿ ಇತಿ ವ್ಯಾಘ್ರಃ' ವಾಸನೆ ಹಿಡಿದು ವಸ್ತು ಪರಿಚಯ ಮಾಡಿಕೊಳ್ಳುವುದಕ್ಕೆ ವ್ಯಾಘ್ರ ಎನ್ನುತ್ತೇನೆ. ನಾವು ಜ್ಞಾನ ಸಂಪಾದಿಸಬೇಕಾದರೆ ಹೊರ ಜಗತ್ತಿನ ಬಗ್ಗೆ ಮರೆತು ಆತ್ಮಧ್ಯಾನದಲ್ಲೇ ತೊಡಗಿರಬೇಕು.

**ಸಂಯಮ:**

ಜ್ಞಾನದಿಂದ ಸಂಯಮವು ಒಳ್ಳೆಯ ರೀತಿಯಲ್ಲಿ ಪಾಲಿಸಲ್ಪಡುತ್ತದೆ. ದೇಹ, ಮನಸ್ಸು, ಮಾತು ಇವುಗಳನ್ನು ಸಂಯಮವಾಗಿಟ್ಟುಕೊಳ್ಳದಿದ್ದರೆ ಅವನನ್ನು ಚಂಚಲ ಮನಸ್ಸಿನವನೆಂದು ಕರೆಯುತ್ತಾರೆ. ಜ್ಞಾನದಿಂದ ಒಳ್ಳೆಯದು, ಕೆಟ್ಟದರ ಪರಿಚಯ ನಮಗಾಗುತ್ತದೆ. ಲೋಕ ಹಾಗೂ ಪರಲೋಕಕ್ಕೆ ಜ್ಞಾನವೇ ಮಾರ್ಗದರ್ಶಕವಾಗಿರುತ್ತದೆ. ಸೂರ್ಯ ಪ್ರಕಾಶಿಸುತ್ತಿರುವಾಗ ಹೇಗೆ ನಮಗೆಲ್ಲಾ ವಸ್ತುಗಳೂ ಗೋಚರವಾಗುತ್ತವೆಯೋ ಹಾಗೆಯೇ ಜ್ಞಾನವು ಭೌತಿಕ, ಆಧ್ಯಾತ್ಮಿಕಗಳ ಬಗ್ಗೆ ವ್ಯಾಖ್ಯಾನ (ಪರಿಚಯ) ನೀಡುತ್ತದೆ. ಭಗವಂತನಿಗೂ ಕೇವಲ ಜ್ಞಾನ ಪ್ರಾಪ್ತವಾದುದರಿಂದಲೇ ಮುಕ್ತಿ ಸಿಕ್ಕಿತು. ಆದುದರಿಂದ ನಾವೂ ಜ್ಞಾನವನ್ನು ಸರಿಯಾದ ದಾರಿಯಲ್ಲಿ ಉಪಯೋಗಿಸಬೇಕು.



# 7. ಅಪರಿಗ್ರಹದಿಂದ ಭ್ರಷ್ಟಾಚಾರ ಉನ್ಮೂಲನೆ

## ಭಾರತವು ಒಂದು ಉನ್ನತ ರಾಷ್ಟ್ರ:

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿ 38 ವರ್ಷಗಳು ಕಳೆದವು. ಈ ಸಮಯದಲ್ಲಿ ಭಾರತವೂ ಇತರ ರಾಷ್ಟ್ರಗಳಂತೆ ತಾನೂ ಉನ್ನತವಾದ ರಾಷ್ಟ್ರವೆಂದು ತೋರಿಸಿ ಕೊಟ್ಟಿದೆ. ವಿಶ್ವಶಾಂತಿ ಸ್ಥಾಪಿಸಲು, ಕಲಹಗಳನ್ನು ನಿವಾರಿಸುವಲ್ಲಿ ಹಾಗೂ ವಿರೋಧಿ ಗಳಿಗೂ ಸದ್ಭಾವನೆ ತೋರಿಸುವುದರ ಬಗ್ಗೆ ಅದು ಅಪಾರವಾಗಿ ಶ್ರಮಿಸಿದೆ. ಭಾರತದ ನೀತಿಯು ಇತರ ರಾಷ್ಟ್ರಗಳ ಮೇಲೆ ಪ್ರಭಾವ ಬೀರುವುದರಲ್ಲಿ ಸಫಲವಾಗಿದ್ದು ಪ್ರಪಂಚ ದಲ್ಲೇ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ.

ಭಾರತವಲ್ಲಿಂದು ಭ್ರಷ್ಟಾಚಾರವು ವ್ಯಾಪಕವಾಗಿ ಹರಡಿಕೊಂಡಿದೆ. ಭ್ರಷ್ಟಾ ಚಾರವೆಂದರೆ ಶೀಲವಿಲ್ಲದಿರುವಿಕೆ ಎಂದರ್ಥ. ಅಪವಿತ್ರತೆ, ನೈತಿಕತೆ ಇತ್ಯಾದಿ ಆಚಾರ-ವಿಚಾರಗಳಲ್ಲಿ ನಾವು ಅಧಃಪತನವನ್ನಿಂದು ಕಾಣುತ್ತೇವೆ. ಇದು ನಾವು ರಾಷ್ಟ್ರಕ್ಕೆ ಮಾಡುವ ದ್ರೋಹವಾಗಿದೆ. ಭ್ರಷ್ಟಾಚಾರವೆಂದರೆ ಮಾನವನು ಮಾನವ ನಿಗೆ, ಸಮಾಜವು ಸಹ ಸಮಾಜಕ್ಕೆ ಮಾಡುವ ದ್ರೋಹವಾಗಿದೆ. ನಾವು ಭ್ರಷ್ಟಾ ಚಾರಿಗಳಾದರೆ ನಮ್ಮ ಶೀಲ, ನಡತೆ, ನೀತಿ, ಆದರ್ಶಗಳೆಲ್ಲವೂ ನಾಶವಾಗುತ್ತವೆ. ಆಸೆಯೇ ಭ್ರಷ್ಟಾಚಾರಕ್ಕೆ ಮೂಲ ಕಾರಣ. ಭ್ರಷ್ಟಾಚಾರಿಗೆ ತಾನು ಮಾಡುವ ತಪ್ಪು ಅರಿವಿಗೆ ಬರುವುದಿಲ್ಲ. ಭ್ರಷ್ಟಾಚಾರಿಗಳನ್ನು ಕೇವಲ ಹೃದಯ ಪರಿವರ್ತನೆಯ ಮೂಲಕ ಮಾತ್ರ ಬದಲಾಯಿಸಲು ಸಾಧ್ಯ. ಬೇರೆ ಯಾವ ವಿಧಾನಗಳೂ ಇಲ್ಲ.

## ಭ್ರಷ್ಟಾಚಾರದಲ್ಲಿ ಸಕ್ರಿಯ ತತ್ತ್ವ

ಭ್ರಷ್ಟಾಚಾರಿಯು ಸಮಾಜವು ಮಾಡಿದ ನಿಯಮಗಳನ್ನು ಸರಿಯಾಗಿ ಪಾಲಿಸು ವುದಿಲ್ಲ. ವೈಯಕ್ತಿಕ ಸುಖವನ್ನೇ ನೋಡಿಕೊಂಡಿರುತ್ತಾನೆ. ಪರಮಾತ್ಮನತ್ತ ಅವನ ಮನಸ್ಸು ವಾಲದೆ ಕೇವಲ ಭೌತಿಕ ಆಸೆಗಳತ್ತಲೇ ವಾಲುತ್ತಿರುತ್ತದೆ. ರಾಜಕೀಯ ದಲ್ಲಿ ಇಂಥವರು ನಾಲ್ಕು ಜನಕ್ಕೆ ಒಳ್ಳೆಯದಾದ ಕೆಲಸ ಮಾಡುವುದಿಲ್ಲ. ಕೇವಲ ಜನರ ಶೋಷಣೆ ಮಾಡುತ್ತಾರೆ. ಆರ್ಥಿಕ ವಿಷಮತೆಯು ಆರಂಭವಾಗುವುದೇ ಭ್ರಷ್ಟಾಚಾರದಿಂದ. ಭ್ರಷ್ಟಾಚಾರದಲ್ಲಿ ತೊಡಗುವುದರಿಂದ ಭಿಕಾರಿಯೂ, ಅಲ್ಪ ಸಮಯದಲ್ಲೇ ಕೋಟ್ಯಧೀಶನಾಗಬಹುದು. ಆದರೆ ಸರಿಯಾದ ಮಾರ್ಗ(ದಾರಿ) ಹಿಡಿದು ಕೋಟ್ಯಧೀಶನಾಗಲು ತುಂಬಾ ಸಮಯಬೇಕು. ಭ್ರಷ್ಟಾಚಾರಿಯು ಧನಿಕ ನಾಗಲು ಹಲವರಿಗೆ ಅನೇಕ ತರಹದ ಹಿಂಸೆಯನ್ನು ಕೊಡುತ್ತಾನೆ. ಆಚಾರ ವಿಚಾರಗಳನ್ನು ಬದಿಗಿರಿಸುತ್ತಾನೆ. ಇಂತಹ ಮಾರ್ಗದಲ್ಲಿ ನಡೆಯುವುದರಿಂದ ಅವನು ಕೋಟ್ಯಧೀಶನಾಗುತ್ತಾನೆ. ''ಆತ್ಮಾನುಶಾಸನ''ದಲ್ಲಿ ಹೀಗೆ ಹೇಳುತ್ತಾರೆ:

''ಶುದ್ಧೈರ್ಧನೈರ್ವಿವರ್ಧಂತೇ ಸತಾಮಪಿ ನ ಸಂಪದಃ ।
ನ ಹಿ ಸ್ವಚ್ಛಾಂಬುಭಿಃಪೂರ್ಣಾಃ ಕದಾಚಿದಪಿ ಸಿಂಧವಃ'' ॥ 34 ॥

ಅರ್ಥಾತ್ ಒಳ್ಳೆಯ ದಾರಿಯಿಂದ ಸಜ್ಜನರ ಶ್ರೀಮಂತಿಕೆ ಹೆಚ್ಚಾಗುವುದಿಲ್ಲ. ಮಳೆ ಯಿಂದ ಹೊಂಡದಲ್ಲಿ ನೀರು ತುಂಬದೆ ಹೊಲಸು ನೀರೂ ಜೊತೆಗೆ ತುಂಬಲು

ಸಹಾಯವಾಗುತ್ತದೆ. ತಾತ್ಪರ್ಯವೇನೆಂದರೆ ಒಳ್ಳೆಯ ರೀತಿಯಿಂದ ಶ್ರೀಮಂತ ನಾಗುವುದು ಕನಸೇ ಸರಿ. ಲೋಭವು ಭ್ರಷ್ಟಾಚಾರದ ಮೂಲ. ಇದು ಇಡೀ ದೇಶವನ್ನೇ ಹಾಳು ಮಾಡುತ್ತದೆ.

**ಮಹಾವೀರ ತೀರ್ಥಂಕರರ ಆಚಾರಗಳ ಮಹತ್ವ:**

ಜನರ ಸದಾಚರಣೆಯಿಂದ ಒಳ್ಳೆಯ ಸಮಾಜವನ್ನು ನಿರ್ಮಿಸಬಹುದಾಗಿದೆ. ತೀರ್ಥಂಕರರು ಭ್ರಷ್ಟಾಚಾರವನ್ನು ನಿವಾರಿಸಲು ಕೆಲವು ನಿಯಮಗಳನ್ನು ಮಾಡಿದ್ದಾರೆ. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹಗಳೇ ಆ ಐದು ನಿಯಮಗಳಾಗಿವೆ. ವ್ರತದ ಆರಂಭ ಅಹಿಂಸೆಯಿಂದ ತೊಡಗಿ ಅಪರಿಗ್ರಹದಲ್ಲಿ ಮುಕ್ತಾಯವಾಗುತ್ತದೆ. ಪರಿಗ್ರಹ ಸಂಗ್ರಹಿಸುವುದರಿಂದ ಸತ್ಯದ ಲೋಪ ಹಾಗೂ ಹಿಂಸೆಗಳಾಗುತ್ತವೆ. ಅಪರಿಗ್ರಹಿಯು ವಿಶ್ವದ ಎಲ್ಲ ಪ್ರಾಣಿಗಳ ಬಗೆಗೂ ಸಹಾನು ಭೂತಿ ವ್ಯಕ್ತಪಡಿಸುತ್ತಾನೆ. ಒಳ್ಳೆಯ ದಾರಿಯಿಂದಲೇ ಧನ ಸಂಪಾದನೆಯನ್ನೂ ಮಾಡುತ್ತಾನೆ ಮತ್ತು ಯಾವಾಗಲೂ ಸತ್ಯವನ್ನೇ ಹೇಳುತ್ತಾನೆ. ಆದಾಯ ತೆರಿಗೆ ಯನ್ನು ಸರಿಯಾಗಿ ಪಾವತಿ ಮಾಡುತ್ತಾನೆಯೇ ಹೊರತು ವಂಚಿಸುವುದಿಲ್ಲ. ಒಳ್ಳೆಯ ರೀತಿಯಿಂದ ಸಂಪಾದಿಸಿದ ಧನವನ್ನು ಸದ್ವಿನಿಯೋಗ ಮಾಡುತ್ತಾನೆ. ಅಪರಿಗ್ರಹ ವನ್ನು ಪಾಲಿಸುವುದರಿಂದ ಮಹಾವೀರ ತೀರ್ಥಂಕರ ಐದೂ ನಿಯಮಗಳನ್ನೂ ಪಾಲಿಸಿದಂತಾಗುತ್ತದೆ.

ಪರಿಗ್ರಹ ಸಂಗ್ರಹ ಮಾಡುವವರು ಹೊಟ್ಟೆಬಾಕರಂತೆ. ಯಾಕೆಂದರೆ ಅವರು ಯಾವತ್ತೂ ಧನ ಸಂಗ್ರಹದಲ್ಲೇ ಮಗ್ನರಾಗಿರುತ್ತಾರೆ. ಅಂಥವರೇ ಸಮಾಜದಲ್ಲಿ ದಾನ ವೀರರೆಂದು ಕರೆಯಲ್ಪಡುತ್ತಾರೆ. ಅನ್ಯಾಯದಿಂದ ಸಂಪಾದಿಸಿದ ಹಣವನ್ನು ಸಭೆಗಳಲ್ಲಿ ದಾನ ಮಾಡಿ ಜಯಘೋಷ ಮಾಡಿಸಿಕೊಳ್ಳುತ್ತಾರೆ. ಶಾಸ್ತ್ರಗಳಲ್ಲಿ ಅನ್ಯಾಯದ ಧನ ಸಂಗ್ರಹಣೆಯನ್ನು ಕುರಿತು ಈ ರೀತಿ ಹೇಳಿದ್ದಾರೆ.

'ತ್ಯಾಗಾಯ ಶ್ರೇಯಸೇ ವಿತ್ತಮವಿತ್ತಃ ಸಂಚಿನೋತಿ ಯಃ ।
ಸ್ವಶರೀರಂ ಸ ಪಂಕೇನ ಸ್ನಾಸ್ಯಾಮೀತಿ ವಿಲಂಪತಿ ॥'

'ಜನರು ಸ್ನಾನ ಮಾಡುತ್ತಾರೆ. ಸ್ನಾನದಿಂದ ಮೈಗಂಟಿದ ಕೊಳೆ ಹೋಗುತ್ತದೆ. ಆದರೆ ಸ್ನಾನ ಮಾಡಲಿಕ್ಕಾಗಿಯೇ ಯಾರೂ ಕೆಸರಿನಲ್ಲಿ ಹೋಗಿ ಬೀಳುವುದಿಲ್ಲ. ಹಾಗೆಯೇ ಜನರು ದಾನ ಮಾಡುವುದು ಪುಣ್ಯ ಸಂಪಾದನೆಗಾಗಿಯೇ ಹೊರತು ಹೆಸರಿ ಗಾಗಿ ಅಲ್ಲ.

ಭ್ರಷ್ಟಾಚಾರವನ್ನು ನೀಗಿಸುವುದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಅದಕ್ಕಾಗಿ ಅವನು ದುಡಿಯಬೇಕು. ಹಿಂದಿನ ಕಾಲದಲ್ಲಿ ಶಾಸಕರು ಜನರ ಒಳಿತಿಗಾಗಿ ಕೆಲಸ ಮಾಡುತ್ತಿದ್ದರು. ಅವರು ಮಾಡುವ ಮೊದಲು ಹೇಳುತ್ತಿರಲಿಲ್ಲ. ಆದರೆ ಇಂದು ಮಾಡುವ ಮೊದಲೇ ಡಂಗುರ ಸಾರುತ್ತಾರೆ, ಪ್ರಚಾರ ಮಾಡುತ್ತಾರೆ. ಆಲಸಿಗಳು ಕೆಲಸ ಮಾಡಲು ಒಳ್ಳೆಯ ಮುಹೂರ್ತವನ್ನು ಎದುರು ನೋಡುತ್ತಾ ಇರುತ್ತಾರೆ. ಅವರಿಗೆ ಕೆಲಸ ಶುರು ಮಾಡಲು ಆಗುವುದೇ ಇಲ್ಲ. ಪರಿಶ್ರಮಿಗಳು ಯಾವತ್ತೂ ಕಾರ್ಯ ಮಗ್ನರಾಗಿಯೇ ಇರುತ್ತಾರೆ. ಸಮಯವನ್ನು ಅವರಿಗೆ ಸರಿಬಂದಂತೆ ಹೊಂದಿಸಿ

ಕೊಳ್ಳುತ್ತಾರೆ. ಪ್ರತಿಯೊಬ್ಬರೂ ಭ್ರಷ್ಟಾಚಾರ ನಿವಾರಣೆಗಾಗಿ ತಮ್ಮಿಂದ ಆದಷ್ಟು ಸಹಕಾರ ನೀಡಬೇಕು. ನಮ್ಮ ಶರೀರವು ಕೊಳೆಯಲಾರಂಭಿಸಿದರೆ ಅದನ್ನು ಕೂಡಲೇ ಶಸ್ತ್ರಚಿಕಿತ್ಸೆಗೊಳಪಡಿಸುತ್ತೇವೆ. ಹಾಗೆಯೇ ರಾಷ್ಟ್ರಕ್ಕಂಟಿದ ಭ್ರಷ್ಟಾಚಾರವನ್ನು ನಿವಾರಿಸದೆ ಹಾಗೆಯೇ ಬಿಟ್ಟರೆ ಸಮಾಜವನ್ನದು ಹಾಳುಮಾಡುತ್ತದೆ.

**ಅತಿಯಾದ ಪರಿಗ್ರಹ ನರಕದ ಸಹವಾಸದಂತೆ:**

ನಾವು ಮುಂದೆ ಒಂದು ಸದಾಚಾರದ ವಾತಾವರಣವನ್ನು ನಿರ್ಮಿಸಬೇಕು. ತತ್ತ್ವಾರ್ಥ ಸೂತ್ರದ 6ನೆಯ ಅಧ್ಯಾಯದಲ್ಲಿ ಅತಿಯಾದ ಪರಿಗ್ರಹದಿಂದ ನರಕಪ್ರಾಪ್ತಿಯಾಗುತ್ತದೆ ಎಂದು ಹೇಳಿದ್ದಾರೆ. (ಸೂತ್ರ 15) ಅನಾಚಾರಗಳು ಪರಿಗ್ರಹಿಗಳ ಮನಸ್ಸಿನಲ್ಲಿ ಬೆಳೆಯುತ್ತ ಇರುತ್ತವೆ ಆದರಿಂದ ಸಮಾಜವು ಹಾಳಾಗುತ್ತದೆ. ಭ್ರಷ್ಟಾಚಾರಿಗಳು ಕಳಬೆರಕೆ ಮಾಡುತ್ತಾರೆ. ನ್ಯಾಯ ನೀಡುವಲ್ಲಿ ಪಕ್ಷಪಾತ ಮಾಡುತ್ತಾರೆ. ಇದು ದೇಶವಿಡೀ ವ್ಯಾಪಿಸುತ್ತದೆ. ಆದುದರಿಂದ ಅದು ಬೆಳೆಯುವ ಮೊದಲೇ ಅದಕ್ಕೆ ಪರಿಹಾರ ಕಂಡುಕೊಳ್ಳಬೇಕು.

**ಸೌಮ್ಯದಲ್ಲಿ ಎಲ್ಲಾ ಅಡಗಿವೆ:**

ನಮ್ಮ ದೇಶದ ಪರಂಪರೆಯು ಆಧ್ಯಾತ್ಮಿಕದ್ದಾಗಿದೆ. **"ಜೀವಿಸಿರಿ ಹಾಗೂ ಇತರರನ್ನೂ ಜೀವಿಸಗೊಡಿರಿ"** ಎಂಬ ಸೂತ್ರವು ನಮಗೆ ಹಿಂದಿನಿಂದಲೇ ಬಂದುದಾಗಿದೆ. ಎಲ್ಲಾ ಜನರು ಸುಖವಾಗಿರಲಿ, ವಿಶ್ವದ ಎಲ್ಲರೊಂದಿಗೂ ಬಂಧು ಪ್ರೇಮವಿರಬೇಕು. ತ್ಯಾಗವೇ ಶ್ರೇಷ್ಠವೆಂದು ಯಾರು ತಿಳಿದುಕೊಂಡಿದ್ದಾರೋ ಅಂಥವರೇ ಭ್ರಷ್ಟಾಚಾರಿಗಳಾಗಿರುವುದು ಬೇಸರದ ಸಂಗತಿ. ಗಾಂಧೀಜಿಯವರು ಕೂಡಾ ಅಪರಿಗ್ರಹವನ್ನು ಪಾಲಿಸುತ್ತಿದ್ದರು. ಅವರು ಸರಳ ಜೀವನ ನಡೆಸಿ ಮಹತ್ತ್ವದ ವಿಷಯಗಳ ಬಗ್ಗೆ ಚಿಂತಿಸುತ್ತಿದ್ದರು. ಅವರ ಜೀವನವು ಅಪರಿಗ್ರಹಕ್ಕೊಂದು ಉದಾಹರಣೆ. ದಿಗಂಬರ ಮುನಿಗಳು ನಗ್ನರಾಗಿದ್ದುಕೊಂಡು ಸಾತ್ವಿಕ ಜೀವನಕ್ಕೆ ಪ್ರೇರಣೆ ನೀಡುತ್ತಿದ್ದಾರೆ. ಇಂತಹ ಸಂತರು ಸಂಚರಿಸುವ ದೇಶದಲ್ಲಿ ಭ್ರಷ್ಟಾಚಾರವಿದೆಯೆಂದು ಕೇಳುವಾಗ ಆಶ್ಚರ್ಯವಾಗುತ್ತದೆ. ದೇವಸ್ಥಾನಗಳಲ್ಲಿ 'ಸಾಮ್ಯಂಮೇ ಸರ್ವ ಭೂತೇಷು' ಎಂದು ಹೇಳಿ ಮೆಟ್ಟಲಿಳಿದು ಬಂದಾಗ ಮರೆಯುತ್ತೇವೆ. ನಾವು ಹೇಳುವುದೇ ಒಂದು, ಮಾಡುವುದು ಇನ್ನೊಂದು.

**ಮನಸ್ಸಿನಲ್ಲಿ ಬೆಳೆಯುತ್ತಿರುವ ಕಲುಷಿತ:**

ವಿದ್ಯಾನಂದರು ಪರಿಗ್ರಹವನ್ನು ತ್ಯಜಿಸಿ, ಜೀವನದ ಸುಖ ದುಃಖಗಳನ್ನು ಇತರರೊಡನೆ ಹಂಚಿಕೊಂಡು ಇರಬೇಕೆಂದು ಕರೆ ನೀಡುತ್ತಾರೆ. ಮನಸ್ಸಿನಲ್ಲಿಂದು ಕೆಟ್ಟ ವಿಚಾರಗಳೇ ಬೆಳೆಯುತ್ತಿವೆ. ಧರ್ಮ, ನೀತಿ, ಸದಾಚಾರದಲ್ಲಿ ಮನಸ್ಸನ್ನು ತೊಡಗಿಸಬೇಕು. ಜನರಲ್ಲಿರುವ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಬೇಕು. ನಮ್ಮಿಂದ ಸಾಧ್ಯವಾದಷ್ಟು ಭ್ರಷ್ಟಾಚಾರವನ್ನು ನೀಗಿಸುವ ಪ್ರಯತ್ನ ಮಾಡಬೇಕು. ದಾನ ಧರ್ಮಗಳಲ್ಲಿ ತೊಡಗಿರಿ ಎಂದು ವಿದ್ಯಾನಂದರು ಜನರಿಗೆ ಕರೆ ನೀಡುತ್ತಾರೆ.

**ಭ್ರಷ್ಟಾಚಾರವನ್ನು ನೀಗಿಸಲು ಸರಕಾರದ ಪ್ರಯತ್ನ:**

ಸರಕಾರವು ಭ್ರಷ್ಟಾಚಾರ ನಿವಾರಣೆಗಾಗಿ ದುಡಿಯುತ್ತಿದೆ. ಭ್ರಷ್ಟಾಚಾರದ ನಿರ್ಮೂಲನೆಯನ್ನು ಜನರು ಎದುರು ನೋಡುತ್ತಿದ್ದಾರೆ. ಒಂದು ವೇಳೆ ಭ್ರಷ್ಟಾಚಾರವಿಡೀ ನಿವಾರಣೆಗೊಂಡಾಗ ಜನರು ಸುಖೀ ಜೀವನವನ್ನು ನಡೆಸಬಹುದು. ಆದರೆ ಇದನ್ನು ನಿವಾರಿಸಲು ನೂರಾರು ವಿಘ್ನಗಳು ತಡೆಯೊಡ್ಡುತ್ತವೆ. ಆದರೂ ಸರಕಾರ ಇದರಿಂದ ವಿಮುಖವಾಗಿಲ್ಲ. ಅದಕ್ಕಾಗಿಯೇ ಶ್ರಮಿಸುತ್ತಿದೆ. ಕರ್ತವ್ಯ ನಿರತರಾದ ಶಾಸಕರಿಗೆ ಅಧಿಕಾರ ಸಿಕ್ಕಿದರೆ ಅವರು ಪ್ರಗತಿಗಾಗಿಯೇ ದುಡಿಯುತ್ತಾರೆಯೇ ಹೊರತು ತಮ್ಮ ಸ್ವಾರ್ಥಕ್ಕಲ್ಲ.

**ಕರ್ತವ್ಯ ಪಾಲನೆಯಿಂದ ಒಳ್ಳೆಯ ಭಾವನೆಗಳ ವಿಕಾಸ:**

ಒಳ್ಳೆಯ ಭಾವನೆಗಳು ಕರ್ತವ್ಯ ಪಾಲನೆಯಿಂದುಂಟಾಗುತ್ತವೆ. ಒಳ್ಳೆಯ ಭಾವನೆಯಲ್ಲಿ ಯಾರು ಮಗ್ನರಾಗಿರುತ್ತಾರೋ ಅವರು ಜೀವನದಲ್ಲಿ ಸುಖ ಪಡೆಯುತ್ತಾರೆ. ಭಾವನೆಗಳು ಹಸಿ ಮಣ್ಣಿನ ಗಡಿಗೆ ಇದ್ದಂತೆ. ಆ ಗಡಿಗೆಯನ್ನು ಸುಟ್ಟರೇನೆ ಹೆಚ್ಚು ಕಾಲ ಉಪಯೋಗಕ್ಕೆ ಬರುತ್ತದೆ. ಹಾಗೆಯೇ ಒಳ್ಳೆಯ ಭಾವನೆಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಜನರ ಉಪಯೋಗಗಳಿಗಾಗಿ ಆ ಭಾವನೆಗಳನ್ನು ವಿನಿಯೋಗಿಸಬಹುದಾಗಿದೆ. ನೀತಿಕಾರರು ಭ್ರಷ್ಟಾಚಾರದ ಬಗ್ಗೆ ತಿರಸ್ಕಾರ ವ್ಯಕ್ತ ಪಡಿಸುತ್ತಾರೆ.

**ಭ್ರಷ್ಟಾಚಾರ ನಿವಾರಿಸಲು ಐದು ಸೂತ್ರಗಳು:**

1) ಪಾಠಪುಸ್ತಕಗಳನ್ನು ಆಧರಿಸಿ ನೀತಿ, ಸದಾಚಾರಗಳ ಬಗ್ಗೆ ವಿದ್ಯಾರ್ಥಿಗಳಿಗೆ ಸಾತ್ವಿಕ ಭಾವನೆಯು ಹುಟ್ಟುವಂತೆ ಮಾಡಬೇಕು. ಇದರಿಂದ ಭ್ರಷ್ಟಾಚಾರವನ್ನು ನಿವಾರಿಸಬಹುದು.

2) ನಗರಗಳಲ್ಲಿ ಸದಾಚಾರಗಳ ಬಗ್ಗೆ ತಿಳಿಸುವ ಸಮಿತಿಗಳನ್ನು ಕಟ್ಟಬೇಕು. ಯಾವುದೇ ಕುಂದು ಕೊರತೆಗಳ ಬಗ್ಗೆ ಕೂಡಲೇ ತೀವ್ರವಾಗಿ ಪರಿಶೀಲನೆ ನಡೆಸಬೇಕು.

3) ಸರಕಾರವು ವಸ್ತುಗಳ ಬೆಲೆಯನ್ನು ನಿಗದಿಪಡಿಸಿ ಅವುಗಳು ಯೋಗ್ಯ ಬೆಲೆಯಲ್ಲಿ ದೊರಕುವಂತೆ ಮಾಡುವುದರಿಂದ ಕಾಳಸಂತೆಯನ್ನು ನಿವಾರಿಸಬಹುದು.

4) ಅಶ್ಲೀಲ ಸಿನೆಮಾ ಹಾಗೂ ಸಾಹಿತ್ಯಗಳನ್ನು ಪ್ರತಿಬಂಧಿಸಬೇಕು.

5) ಒಳ್ಳೆಯ ವ್ಯಕ್ತಿಗಳಿಗೆ ಸನ್ಮಾನ ಮಾಡಿ, ಭ್ರಷ್ಟಾಚಾರಿಗಳಿಗೆ ಶಿಕ್ಷೆ ನೀಡಬೇಕು.



## ೮. ಸಲ್ಲೇಖನಾ.

ಪ್ರಪಂಚದಲ್ಲಿ 'ಜನ್ಮ ಜಯಂತಿ'ಗಳನ್ನಾಚರಿಸುತ್ತಾರೆ. ಹೊಸದಾಗಿ ಹುಟ್ಟಿದ ಮಗುವನ್ನು ಸ್ವಾಗತಿಸುತ್ತ ಅವನ 'ಹುಟ್ಟು ಹಬ್ಬ'ವನ್ನು ಮರೆಯದೆ ಮಾಡುತ್ತಾರೆ. ಎಲ್ಲರೂ ಜೀವನವನ್ನು ಪ್ರೀತಿಸುತ್ತಾರೆ. ಪ್ರತಿಯೊಂದು ಪ್ರಾಣಿಯೂ ಹೆಚ್ಚು ಕಾಲ ಜೀವಿಸಲು ಅಪೇಕ್ಷಿಸುತ್ತದೆ. 'ಶತಾಯುಷಿ'ಯಾಗೆಂದು ಹಿರಿಯರು ಆಶೀರ್ವದಿಸುತ್ತಾರೆ. ಸಾಮಾನ್ಯ ರೋಗ ಬಂದರೂ, ಚಿಕಿತ್ಸೆ ಮತ್ತು ಉಪಚಾರಗಳ ವ್ಯವಸ್ಥೆ ಮಾಡಲಾಗುತ್ತಿದೆ. ಹೆಚ್ಚೇನು? ಪ್ರಪಂಚದ ಹೆಚ್ಚಿನ ಎಲ್ಲಾ ವ್ಯಾಪಾರಗಳೂ ಜೀವಿಸುವುದಕ್ಕಾಗಿಯೇ ನಡೆಯುತ್ತವೆ. ಔಷಧಿ ರಸ-ರಸಾಯನಗಳನ್ನು ಸೇವಿಸುವುದು, ಜೀವಿಸುವುದಕ್ಕಾಗಿ, ಆಮೋದ-ಪ್ರಮೋದ (ಸುಖಸಾಧನ)ಗಳೆಲ್ಲ ಜೀವನವನ್ನು ಸುಖಮಯವನ್ನಾಗಿ ಮಾಡುವುದಕ್ಕಾಗಿ, ನಗರ, ಗಲ್ಲಿ(ಓಣಿ), ಅಂಗಡಿ, ಮನೆ ಇವೆಲ್ಲ ಬದುಕುವುದಕ್ಕಾಗಿಯೇ ಇವೆ. ತನ್ನ ಸುಖ-ಸೌಕರ್ಯಗಳಿಗಾಗಿ ನಾನಾ ರೀತಿಯ ಹೊಸ-ಹೊಸ ಆವಿಷ್ಕಾರ (ಸಂಶೋಧನೆಯ ಫಲ)ಗಳನ್ನು ಕಂಡು ಹಿಡಿದಿದ್ದಾರೆ. ಜೀವನವು ಮರಣದಲ್ಲಿ ಅಂತ್ಯಗೊಳ್ಳುವುದೆಂಬುದನ್ನು ಅರಿತಿದ್ದರೂ ಮಾನವನು ಭೋಗ ವಿಲಾಸಗಳಲ್ಲೇ ಮೈಮರೆತಿದ್ದಾನೆ. ಮನಸ್ಸಿನಲ್ಲಿ ತಾನು ಚಿರಂಜೀವಿಯೆಂದೇ ಭಾವಿಸುತ್ತಾನೆ. ಅರಳಿದ ಹೂವು, ಮಾಗಿದ ಹಣ್ಣು, ಗಿಡ-ಮರಗಳಲ್ಲಿ ಸ್ಥಿರ ಕಾಲ ಇರದೆ ಕೆಳಗೆ ಬೀಳುತ್ತವೆಂಬುದನ್ನು ನಾವು ಮರೆಯುತ್ತೇವೆ. ನಮ್ಮ ಶರೀರವೂ ಒಂದು ದಿನ ಮುದಿಯಾಗಿ ಬಿದ್ದು ಹೋಗುತ್ತದೆಂಬುದನ್ನು ನಾವು ಯೋಚಿಸುವುದಿಲ್ಲ. ಉದಯಿಸುವ ಸೂರ್ಯ ಚಂದ್ರರೂ ಅಸ್ತಮಿಸುತ್ತಾರೆ. ಉದಯವಿದ್ದಲ್ಲಿ ಅಸ್ತವೂ ಇದೆ. ಜನ್ಮವಿದ್ದಲ್ಲಿ ಮರಣವೂ ಇರಲೇ ಬೇಕು. ಎಷ್ಟೇ ಧನಿಕನಿರಲಿ, ಮೃತ್ಯುವಿನ ಬಾಯಿಂದ ಶರೀರವನ್ನು ಬಿಡುಗಡೆ ಹೊಂದಿಸಲು ಕೊಡಬಹುದಾದ ಹಣ(ಲಂಚ) ಪ್ರಪಂಚದಲ್ಲೇ ಇಲ್ಲ.

ಮಾಲೀ ಆವತ್ ದೇಖ್‌ಕರಿ ಕಲಿಯಾ ಕರೀ ಪುಕಾರ್ ।
ಫೂಲೇ ಫೂಲೇ ಚುನ್ ಲಿಯೋ ಕಾಲ್ಹಿ ಹಮಾರೀ ಬಾರ್ ॥ ಕವಿ- ಕಬೀರ್.

ವನಮಾಲಿ(ಹೂವಾಡಿಗ)ಯು ಹೂದೋಟಕ್ಕೆ ಬಂದಾಗ, ಹೂವಿನ ಮೊಗ್ಗುಗಳು. ಚೆನ್ನಾಗಿ ಅರಳಿದವುಗಳನ್ನೇ ಕೊಯ್ದು (ಆಯ್ದು)ಕೊಳ್ಳಪ್ಪ, ನಾಳೆಯೇ ನಮ್ಮ ಸರದಿ (ಇವತ್ತೇ ಮರೆತು ಮುರಿಯದಿರಪ್ಪ) ಎಂಬ ಭಾವ ಎಂತಹ ಸುಂದರ ದೃಷ್ಟಾಂತ, ಹುಟ್ಟಿದವನಿಗೆ ಸಾವು ನಿಶ್ಚಿತ. ಜನ್ಮ-ಮೃತ್ಯುಗಳ ಕಾಲಚಕ್ರದಿಂದ ಜೀವಿಗಳನ್ನು ತಪ್ಪಿಸುವುದು ಅಸಾಧ್ಯ. ದಂಡಧರ ಯಮರಾಯನ ನ್ಯಾಯ ಅಚಲವಾಗಿದೆ. ಆಯುಷ್ಯ ಕರ್ಮವು ತೀರಿದ ಮೇಲೆ ಒಂದು ಕ್ಷಣವೂ ಜೀವಿಸುವುದು ಹೇಗೆ ತಾನೇ ಸಾಧ್ಯ? ಪ್ರಕೃತಿ(ಕರ್ಮ)ದ ಈ ನಿಯಮವು ಧನಿಕ-ಬಡವ, ಶೂರ-ವೀರ, ಸಮ್ರಾಟ್ ಎಲ್ಲರ ಅಹಂಕಾರ ಮುರಿಯಲು ಸಾಕು.

'ಆಸ್ ಪಾಸ್ ಜೋಧಾ ಖಡೇ ಬಹುರಿ ಬಜಾವೇಗಾಲ್ ।
ಮಝ್ ಮಹಲಸೇ, ಲೇ, ಚಲಾ ಐಸಾ ಕಾಲ್ ಕರಾಲ್ ॥

ಸುತ್ತಲೂ ದೊಡ್ಡ ದೊಡ್ಡ ಯುದ್ಧ ವೀರರು ಸುತ್ತಲೂ ಕಾವಲಿದ್ದರು. ಮಹಾರಾಜರ ಮರಣ ಸಮೀಪಿಸಿತ್ತು. ನಮ್ಮಂತಹ ಶೂರರು ಇರುವಾಗ ಪ್ರಭುವಿನ ಮರಣ ಹೇಗೆ ಸಾಧ್ಯ? ಸ್ವಾಮಿಭಕ್ತ ಸೈನಿಕರು ಜಂಭ ಹೊಡೆಯುತ್ತಿದ್ದರು. ಹತ್ತಿರವೇ ಇದ್ದ ಚಿಕಿತ್ಸಕ (ವೈದ್ಯ) ಶಿರೋಮಣಿಗಳು ಜಂಭ ಕೊಚ್ಚುತ್ತಿದ್ದರು. 'ಸ್ವಾಮಿ! ನಮ್ಮಲ್ಲಿ ಸಂಜೀವಿನೀ ಇದೆ'. ಆದರೆ ಕರಾಳ ಕಾಲವು ಮಹಾರಾಜರ ಪ್ರಾಣ ಹರಣ ಮಾಡಿಯೇ ಬಿಟ್ಟಿತ್ತು. ಕಾಲದೊಂದಿಗೆ ಅನಾದಿ ಕಾಲದಿಂದಲೂ ಈ ಜೀವವು ಹೊಡೆದಾಡುತ್ತಲೇ ಬಂದಿದೆ. ಆದರೆ ಅದನ್ನು ಜಯಿಸಲಾಗಲಿಲ್ಲ.

ಭರ್ತೃ ಹರಿಯು ನೀತಿಯನ್ನು ಶ್ರೀರಾಮಚಂದ್ರನ ಪಟ್ಟಾಭಿಷೇಕದೊಂದಿಗೆ ಜೋಡಿಸಿ ಈ ಕೆಳಗಿನ ಮಾತನ್ನು ಹೇಳಿದ್ದಾನೆ.

ಅಂದು ಪ್ರಾತಃಕಾಲ ಶ್ರೀರಾಮನು ತಾನು ಚಕ್ರವರ್ತಿಯಾಗುವೆನೆಂದು ತಿಳಿದಿದ್ದನು. ಆದರೆ ಅಂದೇ ಸಂಜೆ ಜಟಾಧಾರಿಯಾಗಿ ವನವಾಸಕ್ಕೆ ಹೊರಟನು. 'ಕಾಲಾಯ ತಸ್ಮೈ ನಮಃ' ಎಂಬಂತೆ ಕಾಲದ ಕ್ರೂರ ಶಾಸನವನ್ನು ಯಾರೂ ಮೀರಲಾರರು.

'ರಜ್ಜುಚ್ಛೇದೇ ಕೇ ಘಟಂ ಧಾರಯಂತಿ'?

ಹಗ್ಗ ಕಡಿದ ಮೇಲೆ ಬಾವಿಗೆ ಬೀಳುವ ಕೊಡವನ್ನು ಉಳಿಸಬಲ್ಲವರಾರು? ಜೈನ ಶಾಸ್ತ್ರವು ಈ ಪುನರ್ಭವದ ಘಟನಾವಳಿಯಿಂದ ತುಂಬಿ ತುಳುಕುತ್ತಿದೆ. ಆತ್ಮ ದರ್ಶನದಿಂದ ಅಸ್ಥಿರವಾದ ಈ ಸಂಸಾರದ ಅರಿವಾಗುತ್ತದೆ. ಅದು ತ್ಯಾಗದ ಮಾರ್ಗವನ್ನು ಬೋಧಿಸುತ್ತದೆ. ಶಾಶ್ವತ ಸುಖದೆಡೆಗೆ ನಮ್ಮನ್ನು ಕರೆದೊಯ್ಯುತ್ತದೆ.

ಮೃತ್ಯೋಃ ಬಿಭೇಷಿ ಕಿಂ ಮೂಢ! ನಸಭೀತಂ ವಿಮುಂಚತಿ ।
ಅಜಾತಂ ನೈವ ಗೃಹ್ಣಾತಿ ಕುರು! ಯತ್ನ ಮಜನ್ಮನಿ ॥

ಎಲೇ ಮೂಢನೇ! ಮರಣಕ್ಕೇಕೆ ಅಂಜುವೇ? ಅಂಜಿದವನನ್ನು ಮರಣ ಬಿಡದು. ಆದುದರಿಂದ ಮರಣವೇ ಇಲ್ಲದ, ಅಂದರೆ ಜನ್ಮವಿಲ್ಲದ ಅಮರ ಮುಕ್ತಿಗಾಗಿ ಪ್ರಯತ್ನಿಸು.

ಭಗವಾನ್ ಜಿನೇಂದ್ರ ದೇವನ ಮರಣವೇ ಅಂತಿಮ ಮರಣವಾಗಿದೆ. ಅದನ್ನು 'ಮೃತ್ಯು' ಎನ್ನುವ ಬದಲು 'ಮುಕ್ತಿ' ಎನ್ನುವುದೇ ಹೆಚ್ಚು ಸೂಕ್ತವಾಗಿದೆ. ನಾನೆಂಬವನು ಶರೀರವಲ್ಲ. 'ಆತ್ಮ' ಎಂದು ತತ್ತ್ವ ಸಂಧಾನದ ಮೂಲಕ ತಿಳಿದು ಯಾರು ಸಮಾಧಿ-ಮರಣ ಸಲ್ಲೇಖನಾಪೂರ್ವಕ ಮರಣವನ್ನು ಧೈರ್ಯದಿಂದ ಇದಿರಿಸುತ್ತಾರೋ ಅವರು 'ಜನ್ಮ-ಮೃತ್ಯು' ಪಾಶದಿಂದ ಮುಕ್ತರಾಗುತ್ತಾರೆ. ಪೂರ್ವಾಚಾರ್ಯರು ಆಗಮಿಕ ಭಾಷೆಯಲ್ಲಿ ಇಂತಹ ಸಮಾಧಿ-ಮರಣವನ್ನು 'ಸಲ್ಲೇಖನಾ' ಎಂದು ಕರೆದಿದ್ದಾರೆ.

ಆತ್ಮನಿಂದ ಭಿನ್ನವಾದ ಈ ಶರೀರ ರೂಪಿಯಾದ ಪರಪದಾರ್ಥವನ್ನು ತ್ಯಾಗ ಮಾಡುವ ಇಚ್ಛೆಯಿಂದ ಆತ್ಮನಿಷ್ಠನಾಗಿ, ಮಿತ್ರ, ಪುತ್ರ, ಕಳತ್ರ(ಹೆಂಡತಿ) ಇವರ ಸಮ್ಮತಿಯಿಂದ, ಧನ-ವೈಭವಾದಿ ಭೌತಿಕ ಸುಖಗಳಿಂದ ವಿಮುಖನಾಗಿ ಪಂಚ ಪರ

ಪರಮೇಷ್ಠಿಗಳ ಸ್ಮರಣೆಗೈಯುತ್ತ 'ಮರಣ-ವ್ರತ'ವನ್ನು ಗ್ರಹಣ ಮಾಡುವುದಕ್ಕೆ ಮಹಾ ಮುನಿಗಳು 'ಸಲ್ಲೇಖನಾ' ಎಂದಿದ್ದಾರೆ. ಇದನ್ನೇ 'ಸ್ವೇಚ್ಛಾಮೃತ್ಯು' ಎಂದು ಬೇರೊಂದು ಹೆಸರಿಂದ ಕರೆಯಬಹುದು.

ವೀತರಾಗ ಭಾವದ ಚರಮ(ಅಂತಿಮ) ಉದಯವಾದಾಗ, ಪರಪದಾರ್ಥವಾದ ಶರೀರ ಬಂಧನದ ಪೂರ್ಣ ಅರಿವಾದಾಗ, ನಿರ್ಗ್ರಂಥ ಮಹಾ ಮುನಿಗಳು ಮತ್ತು ತ್ಯಾಗೀ ಜನರು ಸಲ್ಲೇಖನದ ಮೂಲಕ ಸಂಸಾರ-ಬಂಧನ-ಸೂತ್ರಗಳನ್ನು ಅಂತಿಮವಾಗಿ ಕಡಿದು ಹಾಕುತ್ತಾರೆ.

ಮರಾಠಿ ಕವಿಯೊಬ್ಬನು ಹೀಗೆ ಹೇಳಿದ್ದಾನೆ–

ಮಾಝೋ ಮರಣ ಪಾಹೀ ಡೋಲಾ
ತೋ ಝಾಲಾ ಸೋಹಲಾ ಅನುಪಮ್ಯ

ಅಂದರೆ 'ನಾನು ನನ್ನ ಕಣ್ಣಿಂದಲೇ ನನ್ನ ಮರಣವನ್ನು ನೋಡಿದೆ. ಆಹಾ! ಇದು ಅನುಪಮ ಮಹೋತ್ಸವ.' ಹೀಗೆ ಇಂತಹ ಮೃತ್ಯು ಭಯದಿಂದ ಮುಕ್ತರಾದ ಮೋಕ್ಷಾರ್ಥಿಗಳು ಮರಣ ಸಂಯಮದಲ್ಲಿ ಬೇಂಡ್-ವಾಲಗ ಓಲೈಸುತ್ತಾರೆ. ತನ್ನ ಮೃತ್ಯುವನ್ನು ಸ್ವಾಗತಿಸಿ, ಅದನ್ನು ಕಣ್ಣಾರೆ ಕಂಡು ಆನಂದಿಸುವ ಭಾಗ್ಯ ಕೆಲವರಿಗೆ ಮಾತ್ರ ದಕ್ಕುತ್ತದೆ, ಅಂಥವರೇ ಮಹಾತ್ಮರು. ಅಂಥವರ ತಪಸ್ಸೇ ಸಫಲ. ಜೀವನವೆಲ್ಲ ತ್ಯಾಗ ಮಾರ್ಗದಲ್ಲಿ ನಡೆದು ಮರಣವನ್ನು ಉತ್ಸಾಹದಿಂದ ಸ್ವಾಗತಿಸಿ, 'ಸಮಾಧಿ ಮರಣ'ವನ್ನು ಸಾಧಿಸುವ ಸಾಧುಗಳೇ ಪರಮ ಧನ್ಯರು.

'ಸಲ್ಲೇಖನವು' ವೀರತ್ವದ ಒರೆಗಲ್ಲು. ಅದು ಮುನಿ ಧರ್ಮದ ಸಿಂಹ ವೃತ್ತಿಯಾಗಿದೆ. ಸಲ್ಲೇಖನಾ ಧಾರಿಗಳಿಗೆ ಮರಣದ ಭಯವಿರುವುದಿಲ್ಲ. ಪಾರಿವಾಳವು ರೆಕ್ಕೆಗಳನ್ನು ಬಡಿದು ಕಣ್ಣುಮುಚ್ಚಿ ಕೂತ ಮಾತ್ರಕ್ಕೆ ಬೆಕ್ಕಿನ ಬಾಯಿಂದ ತಪ್ಪಿಸಿಕೊಳ್ಳಲು ಸಾಧ್ಯವೇ? ಮುನಿ ಮಾರ್ಗದಲ್ಲಿ ದುರ್ಬಲ ಮಾನವರು ನಡೆಯಲಾರರು. ಮದನ [ಕಾಮ]ನ ಮದವನ್ನು ಮರ್ದನಗೊಳಿಸಬಲ್ಲ ಧೀರ ಮಾನವರೇ, ತ್ಯಾಗ ಮಾರ್ಗದಲ್ಲಿ ಮುಂದುವರಿಯುತ್ತಾರೆ. ಭಿಕ್ಷೆಯಿಂದ ಬೊಗಸೆಯಲ್ಲಿ ಆಹಾರ ಸ್ವೀಕರಿಸುವ ಜಿತೇಂದ್ರಿಯರಿಗೆ ತ್ಯಾಗವು ವಿಲಾಸವಾಗಿದೆ. ಅಂಥವರೇ ಅನಾಸಕ್ತಿಯೋಗದ ಮೂಲಕ ಸಮಾಧಿ ಮರಣವನ್ನು ಸ್ವೀಕರಿಸುತ್ತಾರೆ. ಇಂದ್ರಿಯ ಲಂಪಟರು ಮತ್ತು ಧನ ಸಂಪತ್ತಿಯನ್ನು ಪರಲೋಕಕ್ಕೆ ಜೊತೆಗೊಯ್ಯುತ್ತೇವೆಂಬ ಕನಸು ಕಾಣುವವರಿಗೆ ಸಲ್ಲೇಖನವು ಸಲ್ಲದು.

'ಸಲ್ಲೇಖನಾ' ಶಬ್ದದ ಆಧ್ಯಾತ್ಮಿಕ ರೂಪವನ್ನರಿಯದ ಕೆಲವರು ಅದಕ್ಕೆ 'ಆತ್ಮಹತ್ಯೆ' ಎಂಬ ವಿಕೃತ ಅಪಶಬ್ದವನ್ನು ಬಳಸಿ ನಿಂದಿಸುತ್ತಾರೆ. ಆತ್ಮನು ಕ್ರೋಧ, ಅಹಂಕಾರ [ಮಾನ] ಹಠ, ಆಸೆ [ಲೋಭ] ಇತ್ಯಾದಿ ದುರ್ಭಾವನೆಗಳಿಗೆ ಒಳಗಾಗಿ ನೇಣು ವಿಷ ಇತ್ಯಾದಿ ಸಾಧನಗಳಿಂದ ಶರೀರವನ್ನು ಮರಣಕ್ಕೀಡುಮಾಡಿದರೆ ಅದು ಆತ್ಮಹತ್ಯೆಯಾಗುವುದು. ಸಲ್ಲೇಖನಾ ಅಥವಾ ಸಮಾಧಿ ಸ್ಥಿತಿಯಲ್ಲಿ ಯಾವ ದುರ್ಭಾವನೆಯೂ ಇರುವುದಿಲ್ಲ. ಆದುದರಿಂದ ಅದು ಆತ್ಮಹತ್ಯೆಯಲ್ಲ. ಆಚಾರ್ಯ 'ಸಮಂತಭದ್ರರ' ಮಾತಿನಲ್ಲಿ ಹೇಳುವುದಾದರೆ–

ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಷ್ಪ್ರತೀಕಾರೇ ।
ಧರ್ಮಾಯ, ತನುವಿಮೋಚನಮಾಹುಃ 'ಸಲ್ಲೇಖನಾ' ಮಾರ್ಯಃ ॥

–ರತ್ನಕರಂಡಕ ಶ್ರಾವಕಾಚಾರ.

ಪರಿಹಾರವೇ ಇಲ್ಲದ ಘೋರ ಉಪಸರ್ಗದ ಸಂದರ್ಭದಲ್ಲಿ ದುರ್ಭಿಕ್ಷ ಕಾಲ ಅತ್ಯಂತ ವೃದ್ಧಾವಸ್ಥೆ ಇಂತಹ ಸನ್ನಿವೇಶಗಳು ಒದಗಿ ಬಂದಾಗ ಧರ್ಮ ಬುದ್ಧಿಯಿಂದ ಆತ್ಮೋನ್ನತಿಗಾಗಿ ಅವಶ್ಯವಾಗಿ ಬಿದ್ದು ಹೋಗುವ ನಶ್ವರವಾದ ದೇಹದ ತ್ಯಾಗವೇ 'ಸಲ್ಲೇಖನಾ' ಅಥವಾ 'ಸಮಾಧಿಮರಣ' ಎಂದು ಮೇಲಿನ ಶ್ಲೋಕದ ಭಾವವಾಗಿದೆ.

ಭೌತಿಕ ಶರೀರವಾದಿಗಳು ಕೇವಲ ಆಹಾರ–ವಿಹಾರ, ಆಮೋದ–ಪ್ರಮೋದಗಳಾಗಿಯೇ ಜೀವಿಸುತ್ತಾರೆ. ಅಂಥವರು ನಾಶವಾಗುವ ಶರೀರವನ್ನೇ ಆತ್ಮನೆಂದು ಭ್ರಮಿಸಿ ಶರೀರವನ್ನು ಅತಿಯಾಗಿ ಪ್ರೀತಿಸಿ ಅದರ ನಾಶದಲ್ಲಿ ಅಂದರೆ ಮರಣ ಸಮಯದಲ್ಲಿ ಭಯಪಡುತ್ತಾರೆ. ದುಃಖ ಪಡುತ್ತಾರೆ.

ಆದರೆ ಆತ್ಮವಾದಿಗಳು ತಮ್ಮ ಅಮೂಲ್ಯ ಜೀವನದಲ್ಲಿ ಸಂಯಮ–ನಿಯಮ, ಜಪ–ತಪ, ವ್ರತ–ಉಪವಾಸಾದಿಗಳನ್ನು ಆಚರಿಸಿ ಕೊನೆಗೆ ಮರಣ ಸಮಯದಲ್ಲಿ ಸಮಾಧಿಸ್ಥರಾಗಿ ಆತ್ಮೋನ್ನತಿಯನ್ನು ಸಾಧಿಸುತ್ತಾರೆ. ಇತರ ಎಲ್ಲಾ ಧರ್ಮಗಳಲ್ಲೂ ಸಮಾಧಿಮರಣದ ಬಗ್ಗೆ ತುಂಬಾ ಗೌರವ ನೀಡಿದ್ದಾರೆ. ಮಹಾಕವಿ ಕಾಳಿದಾಸನು ರಘುವಂಶವೆಂಬ ತನ್ನ ಮಹಾಕಾವ್ಯದಲ್ಲಿ ರಘುವಂಶಸ್ಥರಾದ ರಾಜರುಗಳ ಪರಂಪರಾಗತ ಆಶ್ರಮ ಧರ್ಮದ ಬಗ್ಗೆ ವರ್ಣಿಸುತ್ತಾ ಹೀಗೆ ಹೇಳಿದ್ದಾನೆ.

ಶೈಶವೇಽಭ್ಯಸ್ತ ವಿದ್ಯಾನಾಂ ಯೌವನೇ ವಿಷಯೈಷಿಣಾಮ್ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಮ್ ।

–ರಘುವಂಶ ಮಹಾಕಾವ್ಯ.

ಬಾಲ್ಯದಲ್ಲಿ ವಿದ್ಯೆಯನ್ನು ಅಭ್ಯಸಿಸುವ, ಯೌವನದಲ್ಲಿ ವಿಷಯ ಸುಖವನ್ನನುಭವಿಸುವ, ವೃದ್ಧಾವಸ್ಥೆಯಲ್ಲಿ ಮುನಿಯ ವೃತ್ತಿಯಲ್ಲಿದ್ದು ಕೊನೆ ಕಾಲದಲ್ಲಿ ಯೋಗ(ಆತ್ಮಧ್ಯಾನ)ದ ಮೂಲಕ ಶರೀರ ತ್ಯಾಗ ಮಾಡುವ ರಘುವಂಶದ ರಾಜರ ಕಥೆ ವರ್ಣಿಸುತ್ತೇನೆಂದು ಭಾವ.

ಮೇಲೆ ಯೋಗವೆನ್ನುವ ಪದ ಮನ-ವಚನ-ಕಾಯಗಳ, ಆತ್ಮ ತಲ್ಲೀನತೆ (ಸಮಾಧಿ ಮರ-ಸಲ್ಲೇಖನಾ]ಯ ಕುರಿತಾಗಿಯೇ ಹೇಳಲಾಗಿದೆ.

ಮಿತ್ರೇ ಕಲತ್ರೇ ವಿಭವೇ ತನೂಜೇ ।
ಸೌಖ್ಯೇ ಗೃಹೇ ಯತ್ರ ವಿಹಾಯ ಮೋಹಮ್ ॥
ಸಂಸ್ಮರ್ಯತೇ ಪಂಚಪದೇ ಸ್ವಚಿತ್ತಮ್ ।
ಸಲ್ಲೇಖನಾ ಸಾಭಿಹಿತಾ ಮುನೀಂದ್ರೈಃ ॥ –ಭಾವಸಂಗ್ರಹ.

ಮಿತ್ರರು, ಸ್ತ್ರೀ-ಪುತ್ರರು, ಐಶ್ವರ್ಯ, ಸೌಖ್ಯ, ಮನೆ[ಪರಿಗ್ರಹ] ಇತ್ಯಾದಿ ವಿಷಯಗಳಲ್ಲಿ ಮೋಹವನ್ನು ತ್ಯಜಿಸಿ [ಮರಣ ಸಮಯದಲ್ಲಿ] ಪಂಚಪರಮೇಷ್ಠಿಗಳ ಚರಣ-ಕಮಲಗಳ ಸ್ಮರಣೆ ಮಾಡಲ್ಪಡುವ ವಿಧಿಯೇ 'ಸಲ್ಲೇಖನಾ' ಎಂದು ಹೇಳಲಾಗಿದೆ.

ಮರಣೇ ಯಾ ಮತಿರ್ಯಸ್ಯ ಸಾಗತಿರ್ಭವತಿ ಧ್ರುವಮ್ ।
ಯಥಾಭೂದ್ಧೇಮಸೇನಾಖ್ಯಃ ಪಕ್ವೇ ವಿರ್ಭಟಕೇ ಫಲೇ ॥ ೧॥
ಮರಣೇ ಯಾ ಮತಿರ್ಯಸ್ಯ ಸಾಗತಿರ್ಭವತಿ ಧ್ರುವಮ್ ।
ಯಥಾಭೂಜ್ಜಿನದತ್ತಾಖ್ಯಃ ಸ್ವಾಂಗನಾರ್ತೇನ ದರ್ದುರಃ ॥ ೨॥

–ಮದನಪರಾಜಯ.

ಭಾವ 1— ಮರಣಕಾಲದಲ್ಲಿ ಯಾವ ಭಾವನೆ ಇರುತ್ತದೆಯೋ ಮುಂದಿನ ಜನ್ಮದಲ್ಲಿ ಅದೇ ಗತಿಯು ಲಭಿಸುತ್ತದೆ. ಹೇಮಸೇನನು ಮರಣ ಸಮಯದಲ್ಲಿ ಹಣ್ಣಾದ ಪೌತೇಕಾಯಿಯ ಹುಳವನ್ನು ಕಂಡು ಬಾಯಾರಿದ ತನಗೆ ಆ ಹುಳುವಿಗಿರುವ ಸುಖವೂ ಇಲ್ಲವಲ್ಲ, ಎಂದು ಮನಸ್ಸಿನಲ್ಲಿ ಚಿಂತಿಸಿದುದರಿಂದಲೇ ಮುಂದಿನ ಜನ್ಮದಲ್ಲಿ ಹುಳುವಾಗಿಯೇ ಜನಿಸಿದನು.

ಭಾವ 2— ಜಿನದತ್ತನೆಂಬವನು ಮರಣ ಕಾಲದಲ್ಲಿ ತನ್ನ ಸ್ತ್ರೀಯ ಚಿಂತೆಯಿಂದ ಸತ್ತು ಕಪ್ಪೆಯಾಗಿ ಹುಟ್ಟಬೇಕಾಯಿತು. ಆದುದರಿಂದಲೇ ಹಿರಿಯರು ಮೃತ್ಯು ಸಮಯದ ಮತಿ(ಮನಸ್ಸು)ಯೇ ಮುಂದಿನ ಗತಿ(ಜನ್ಮ)ಗೆ ಕಾರಣವೆಂದು ಹೇಳಿದ್ದಾರೆ.

ನಾವಶ್ಯಂ ನಾಶಿನೇ ಹಿಂಸ್ಯೋ ಧರ್ಮೋ ದೇಹಾಯ ಕಾಮದಃ ।
ದೇಹೋ ನಷ್ಟಃ ಪುನರ್ಲಭ್ಯೋ ಧರ್ಮಸ್ತ್ವತ್ಯಂತದುರ್ಲಭಃ ॥

[ಶ್ರೀಆಶಾಧರಸೂರೀ । ಸಾಗಾರ ಧರ್ಮಾಮೃತ ॥]

ಅವಶ್ಯ ನಾಶ ಹೊಂದುವ ಈ ಶರೀರಕ್ಕಾಗಿ, ನಮಗೆ ಸಕಲ ಇಚ್ಛಿತ ಫಲಗಳನ್ನು ನೀಡುವ ಧರ್ಮವನ್ನು ನಾಶ ಮಾಡಬಾರದು. ಶರೀರವು ನಷ್ಟವಾದರೂ ಮರಳಿ ದೊರೆಯುವುದು ಆದರೆ ಒಮ್ಮೆ ನಷ್ಟವಾದ ಧರ್ಮವು ಮತ್ತೆ ದೊರೆಯುವುದು ದುರ್ಲಭ. ಆದುದರಿಂದ ಭವ್ಯಾತ್ಮರು ತಮ್ಮ ಜೀವನ ಸಾಫಲ್ಯಕ್ಕಾಗಿ, ಮರಣಕಾಲದ ಪರಿಣಾಮ ಶುದ್ಧಿಗಾಗಿ 'ಸಮಾಧಿ-ಸಪ್ತದಶೀ'ಯನ್ನು ಅವಶ್ಯ ಓದಲೇ ಬೇಕು. ಅದನ್ನೇ ಕೆಳಗೆ ಉಲ್ಲೇಖಿಸುತ್ತೇವೆ.

"ಸಮಾಧಿ–ಸಪ್ತದಶೀ"

ಮೃತ್ಯುಮಾರ್ಗಂ ಪ್ರವೃತ್ತಸ್ಯ ವೀತರಾಗೋ ದದಾತುಮೇ ।
ಸಮಾಧಿ-ಬೋಧಿ-ಪಾಥೇಯಂ ಯಾವನ್ಮುಕ್ತಿಪುರೀ ಪುರಃ ॥ ೧॥

ಸಲ್ಲೇಖನಾ(ಸಮಾಧಿಮರಣ)ಪೂರ್ವಕ ಮೃತ್ಯು ಮಾರ್ಗದಲ್ಲಿ ಮುನ್ನಡೆಯುವ ನನಗೆ ವೀತರಾಗಪ್ರಭುವು 'ಸಮಾಧಿ-ಬೋಧಿ' (ಆತ್ಮಜ್ಞಾನ) ಎಂಬ ದಾರಿಯ ಬುತ್ತಿಯನ್ನು ನೀಡಲಿ, ಅದೋ! ಮುಂದೆ ಸುಂದರವಾದ ಮೋಕ್ಷ ನಗರವು ಕಾಣಿಸುತ್ತಿದೆ.

ಕೃಮಿಜಾಲಶತಾಕೀರ್ಣೇ ಜರ್ಜರೇ ದೇಹ ಪಂಜರೇ ॥
ಭಜ್ಯಮಾನೇ ನ ಭೇತವ್ಯಂ ಯತಸ್ತ್ವಂ ಜ್ಞಾನವಿಗ್ರಹಃ ॥ ೨॥

ಎಲೈ ಆತ್ಮನೇ, ನೂರಾರು ಕ್ರಿಮಿಗಳಿಂದ ತುಂಬಿದ ಮುಪ್ಪಡರಿದ ಈ ಜರ್ಜರ ದೇಹವು ವಿನಾಶದ ಹಾದಿ ಹಿಡಿದಿದೆಯೆಂದು ಭಯಪಡಬೇಡ, ಏಕೆಂದರೆ ನೀನು ಜಡ-ಪುದ್ಗಲ ದೇಹಿಯಲ್ಲ ಜ್ಞಾನ ಶರೀರಿಯಾಗಿದ್ದೀ.

ಜ್ಞಾನಿನ್ ಭವೇದ್ಭಯಂ ಕಸ್ಮಾತ್ ಪ್ರಾಪ್ತೇ ಮೃತ್ಯು ಮಹೋತ್ಸವೇ ।
ಸ್ವರೂಪಸ್ಥಃ ಪುರಂ ಯಾತಿ ದೇಹೀ ದೇಹಾಂತರಸ್ಥಿತಿಃ ॥ ೩ ॥

ಎಲೈ ಜ್ಞಾನಿಯಾದ ಆತ್ಮನೇ, ಮೃತ್ಯು ಮಹೋತ್ಸವವು ಪ್ರಾಪ್ತವಾದಾಗ ನೀನು ಯಾವ ಕಾರಣದಿಂದ ಭಯಪಡುತ್ತಿ? ಈ ಆತ್ಮನು ತನ್ನ ಸ್ವರೂಪದಲ್ಲಿದ್ದು ಈ ಶರೀರದಿಂದ ಬೇರೊಂದು ದೇಹಕ್ಕೆ ಪ್ರವೇಶಿಸುತ್ತಾನೆ.

ಸುದತ್ತ ಪ್ರಾಪ್ಯತೇ ಯಸ್ಮಾತ್ ದೃಶ್ಯತೇ ಪೂರ್ವಸತ್ತಮೈಃ ।
ಭುಜ್ಯತೇ ಸ್ವರ್ಭವಂ ಸೌಖ್ಯಂ ಮೃತ್ಯೋರ್ಭೀತಿಃ ಕುತಃ ಸತಾಮ್ ॥ ೪ ॥

ಎಲೇ ಆತ್ಮನೇ, ನೀನು ನಿರ್ವಹಿಸಿದ ಕರ್ತವ್ಯ, ಆಚಾರ-ವಿಚಾರ, ಜಪ, ತಪಸ್ಸುಗಳ ಫಲವು ಮರಣದ ನಂತರವೇ ದೊರೆಯುವುದು. ಸ್ವರ್ಗಸುಖವೂ ಕೂಡ ಆಮೇಲೆಯೇ ಪ್ರಾಪ್ತವಾಗುವುದು. ಆದುದರಿಂದ ಸತ್ಪುರುಷರಿಗೆ ಮೃತ್ಯುವಿನ ಭಯವೇಕೆ? ಕನ್ನಡ ದಲ್ಲೊಂದು ಗಾದೆಯುಂಟು. 'ತಾನು ಸಾಯಬೇಕು, ಸ್ವರ್ಗ ಪಡೆಯಬೇಕು.'

ಆಗರ್ಭಾತ್ ದುಃಖ ಸಂತಪ್ತಃ ಪ್ರಕ್ಷಿಪ್ತೋ ದೇಹಪಂಜರೇ ।
ನಾತ್ಮಾ ವಿಮುಚ್ಯತೇಽನ್ಯೇನ ಮೃತ್ಯುಭೂಮಿಪತಿಂ ವಿನಾ ॥ ೫ ॥

ಗರ್ಭಕ್ಕೆ ಬಂದಂದಿನಿಂದಲೂ ಹಸಿವು, ಬಾಯಾರಿಕೆ ಮೊದಲಾದ ನಾನಾ ವಿಧ ದುಃಖ ಗಳಲ್ಲಿ ಬೆಂದು ಬೆಂಡಾಗಿ ದೇಹವೆಂಬ ಪಂಜರದಲ್ಲಿ ಸಿಕ್ಕಿಬಿದ್ದಿರುವ ಈ ಆತ್ಮನನ್ನು ಮೃತ್ಯು ಮಹಾರಾಜನ ಹೊರತು ಬೇರಾರಿಂದಲೂ ಬಿಡಿಸಲು ಸಾಧ್ಯವಿಲ್ಲ.

ಸರ್ವದುಃಖಪ್ರದಂ ಪಿಂಡಂ ದೂರೀಕೃತ್ಯಾತ್ಮದರ್ಶಿಭಿಃ ।
ಮೃತ್ಯು ಮಿತ್ರಪ್ರಸಾದೇನ ಪ್ರಾಪ್ಯಂತೇ ಸುಖ ಸಂಪದಃ ॥ ೬ ॥

ಆತ್ಮದರ್ಶಿಗಳು, ಸಂಪೂರ್ಣ ದುಃಖಗಳಿಗೆ ಪಿಂಡದಂತಿರುವ ಈ ದೇಹ ಪಿಂಡದಿಂದ ಮೃತ್ಯುರೂಪೀ ಮಿತ್ರನ ದಯೆಯಿಂದ ಬಿಡುಗಡೆ ಹೊಂದಿ ಸರ್ವ ಸುಖ-ಸಂಪತ್ತು ಗಳನ್ನು ಪಡೆಯುತ್ತಾರೆ.

ಮೃತ್ಯು ಕಲ್ಪದ್ರುಮೇ ಪ್ರಾಪ್ತೇ ಯೇನಾತ್ಮಾರ್ಥೋ ನ ಸಾಧಿತಃ ।
ನಿಮಗ್ನೋ ಜನ್ಮಜಂಬಾಲೇ ಸ ಪಶ್ಚಾತ್ ಕಿಂ ಕರಿಷ್ಯತಿ? ॥ ೭ ॥

ಮರಣವೆಂಬ ಕಲ್ಪವೃಕ್ಷ ದೊರೆತರೂ, ತನ್ನ ಆತ್ಮ ಕಲ್ಯಾಣವನ್ನು ಸಾಧಿಸಲಾರದವನು ಸಂಸಾರರೂಪೀ ಸಮುದ್ರದಲ್ಲೇ ಮುಳುಗಿದ್ದು ಮತ್ತೆ ಮೇಲೆ ಬರುವುದು ಯಾವಾಗ?

ಜೀರ್ಣಂ ದೇಹಾದಿಕಂ ಸರ್ವಂ ನೂತನಂ ಜಾಯತೇ ಯತಃ ।
ಸ ಮೃತ್ಯುಃ ಕಿಂ ನ ಮೋದಾಯ ಸತಾಂ ಸಾತೋತ್ಥಿತಿರ್ಯಥಾ ॥ ೮ ॥

ಜ್ಞಾನಿಗಳು ಮರಣವನ್ನು ಸಾತಾವೇದನೀಯ (ಸುಖ ನೀಡುವ) ಕರ್ಮದ ಉದಯಕ್ಕೆ ಕಾರಣವೆನ್ನುತ್ತಾರೆ. ಸಾತಾವೇದನೀಯ ಕರ್ಮೋದಯದಿಂದ ಜೀರ್ಣ ಶೀರ್ಣವಾದ ಈ ಮುದಿ ಶರೀರದ ನಾಶವಾಗಿ, ನೂತನ ಸುಂದರ ಶರೀರದ ಪ್ರಾಪ್ತಿಯಾಗುವುದು.

ಸುಖಂ ದುಃಖಂ ಸದಾವೇತ್ತಿ ದೇಹಸ್ಥಶ್ಚ ಸ್ವಯಂ ವ್ರಜೇತ್
ಮೃತ್ಯುಭೀತಿಸ್ತದಾ ಕಸ್ಯ? ಜಾಯತೇ ಪರಮಾರ್ಥತಃ ॥ ೯ ॥

ಆತ್ಮನು ಈ ದೇಹದಲ್ಲಿದ್ದುಕೊಂಡು ಸದಾಕಾಲದಿಂದಲೂ ಸುಖ-ದುಃಖಗಳನ್ನು ಅನುಭವಿಸಿ ಬರುತ್ತಿದ್ದಾನೆ. ಮತ್ತೆ ತಾನೇ ಪರಲೋಕಕ್ಕೆ ಗಮನ ಮಾಡುತ್ತಿರುತ್ತಾನೆ. ಹೀಗಿರುವಾಗ ಪರಮಾರ್ಥದ ದೃಷ್ಟಿಯಿಂದ ಮರಣದ ಭಯ ಯಾರಿಗೆ, ಏಕೆ ಇರಬೇಕು?

ಸಂಸಾರಾಸಕ್ತಚಿತ್ತಾನಾಂ ಮೃತ್ಯುರ್ಭೀತ್ಯೈ ಭವೇನ್ನೃಣಾಮ್ ।
ಮೋದಾಯತೇ ಪುನಃ ಸೋಽಪಿ ಜ್ಞಾನವೈರಾಗ್ಯವಾಸಿನಾಮ್ ॥ ೧೦ ॥

ಯಾರು ಸಂಸಾರದಲ್ಲೇ ಆಸಕ್ತರಾಗಿ, ಆತ್ಮ ಸ್ವರೂಪವನ್ನು ಮರೆತಿರುತ್ತಾರೋ ಅಂಥವರಿಗೇ ಮೃತ್ಯು ಭೀತಿ ಇರುತ್ತದೆ. ಆದರೆ ಯಾವ ಮಹಾ ಪುರುಷರು ಆತ್ಮ ಸ್ವರೂಪವನ್ನು ತಿಳಿದು ವೈರಾಗ್ಯ ಧಾರಣೆ ಮಾಡಿರುತ್ತಾರೋ ಅಂಥವರಿಗೆ ಮರಣವೂ ಕೂಡ ಆನಂದದಾಯಕವಾಗಿರುತ್ತದೆ.

ಪುರಾಧೀಶೋ ಯದಾ ಯಾತಿ ಸುಕೃತಸ್ಯ ಬುಭುತ್ಸಯಾ ।
ತದಾಸೌ ವಾರ್ಯತೇ ಕೇನ ಪ್ರಪಂಚೈಃ ಪಂಚಭೌತಿಕೈಃ ॥ ೧೧ ॥

ಈ ಜೀವನ ಆಯುಷ್ಯ ಪೂರ್ಣಗೊಂಡೊಡನೆ, ಪರಗತಿಯ ಆಯುಃಕರ್ಮದ ಉದಯವಾಗುತ್ತದೆ. ಪರಲೋಕ ಗಮನೋದ್ಯುಕ್ತನಾದ ಆತ್ಮನನ್ನು ತಡೆದು ನಿಲ್ಲಿಸುವ ಶಕ್ತಿ ಅದಾರಿಗಿದೆ?

ಮೃತ್ಯುಕಾಲೇ ಸತಾಂ ದುಃಖಂ ಯದ್ಭವೇದ್ವ್ಯಾಧಿ ಸಂಭವಮ್ ।
ದೇಹ ಮೋಹವಿನಾಶಾಯ ಮನ್ಯೇ ಶಿವಸುಖಾಯ ಚ ॥ ೧೨ ॥

ಮರಣ ಕಾಲದಲ್ಲಿ ಪೂರ್ವ ಕರ್ಮೋದಯದಿಂದ ಭಯಂಕರವಾದ ರೋಗಾದಿಗಳು ಸಂಭವಿಸುತ್ತವೆ. ಅಂತಹ ರೋಗ ಜನ್ಯ ದುಃಖಗಳು ಜ್ಞಾನವಂತ ಮಾನವರಿಗೆ ಶರೀರದ ಮೇಲಿನ ಮೋಹವನ್ನು ದೂರ ಮಾಡಲು ನಿಮಿತ್ತ ಕಾರಣಗಳಾಗುತ್ತವೆ. ಮೋಹ ತ್ಯಾಗದಿಂದ ಅದೇ ಕೊನೆಗೆ ಪರಂಪರೆಯಿಂದ (ಪರೋಕ್ಷವಾಗಿ) ಮೋಕ್ಷಕ್ಕೂ ಕಾರಣವಾಗುವುದು.

ಜ್ಞಾನಿನೋಽಮೃತಸಂಗಾಯ ಮೃತ್ಯುಸ್ತಾಪಕರೋಽಪಿ ಸನ್ ।
ಆಮಕುಂಭಸ್ಯ ಲೋಕೇಽಸ್ಮಿನ್ ಭವೇತ್ಪಾಕವಿಧಿರ್ಯಥಾ ॥ ೧೩ ॥

ಮರಣವು ಸಂತಾಪಕಾರಿಯಾದರೂ ಜ್ಞಾನಿಗಳಿಗದು ಅಮೃತತ್ತ್ವ (ಮೋಕ್ಷ)

ಪ್ರಾಪ್ತಿಗೆ ಕಾರಣವಾಗುವುದು. ಹಸಿ ಮಣ್ಣಿನ ಕುಂಭ (ಗಡಿಗೆ)ವು ಅಗ್ನಿ ಸಂಸ್ಕಾರ ಕ್ಕೊಳಗಾಗಿ ಕಾಯಿಸಲ್ಪಟ್ಟಾಗ ಅಮೃತಕ್ಕೂ ಪಾತ್ರತೆಯನ್ನು ಪಡೆಯುತ್ತದೆ.

ಯತ್ ಫಲಂ ಪ್ರಾಪ್ಯತೇ ಸದ್ಭಿಃ ವ್ರತಾಯಾಸ ವಿಡಂಬನಾತ್ ।
ತತ್ ಫಲಂ ಸುಖ ಸಾಧ್ಯಂ ಸ್ಯಾತ್ ಮೃತ್ಯುಕಾಲೇ ಸಮಾಧಿನಾ ॥ ೧೪ ॥

ಕಠಿನ ವ್ರತಾದಿಗಳ ಕಷ್ಟಗಳನ್ನು ಸಹಿಸುವುದರ ಮೂಲಕ ಯಾವ ಸ್ವರ್ಗಾದಿ ಸುಖ ಪರಂಪರೆಗಳನ್ನು ಪಡೆಯಬಹುದೋ ಆ ಸುಖಗಳನ್ನು ಮರಣ ಕಾಲದ ಸಮಾಧಿ (ಆತ್ಮಧ್ಯಾನ)ಯಿಂದಲೂ, ಹೊಂದಬಹುದು.

ಅನಾರ್ತಃ ಶಾಂತಿಮಾನ್ ಮರ್ತ್ಯೋ(ನ ತಿರ್ಯಕ್ ನಾಪಿ ನಾರಕಃ ।
ಧರ್ಮಧ್ಯಾನ-ಪರೋ ಮರ್ತ್ಯೋ(ಽನಶನೀ ತ್ವಮರೇಶ್ವರಃ ।। ೧೫ ॥

ಸತ್ಪುರುಷರು ಮರಣದ ಸ್ಥಿತಿಯಲ್ಲಿ ಆರ್ತ (ದುಃಖ) ರೌದ್ರ (ಕೋಪ)ದಿ ದುರ್ಧ್ಯಾನಗಳಿಂದ ದೂರವಾಗಿ ಶಾಂತರಾಗಿರುತ್ತಾರೆ. ಅವರು ತಿರ್ಯಂಚ (ಮೃಗ) ಅಥವಾ ನಾರಕಿಯರಾಗಿ ಜನಿಸುವುದಿಲ್ಲ. ಧರ್ಮ ಧ್ಯಾನದಲ್ಲಿದ್ದು ನಿರಾಹಾರಿಯಾಗಿ ಅಮರೇಂದ್ರ [ದೇವೇಂದ್ರ] ಪದವಿಯನ್ನೂ ಮಹರ್ದ್ಧಿಕ [ಪ್ರಭಾವಶಾಲಿ] ದೇವ ನಾಗಿಯೂ ಜನಿಸುತ್ತಾರೆ. ಅಂಥವರು ಕೆಟ್ಟ ಗತಿಗಳಲ್ಲಿ ಹುಟ್ಟದೆ ಸದ್ಗತಿಯನ್ನೇ ಪಡೆಯುತ್ತಾರೆಂದು ಭಾವ.

ತಪ್ತಸ್ಯ ತಪಸಶ್ಚಾಪಿ ಪಾಲಿತಸ್ಯ ವ್ರತಸ್ಯ ಚ ।
ಪಠಿತಸ್ಯ ಶ್ರುತಸ್ಯಾಪಿ ಫಲಂ ಮೃತ್ಯುಃ ಸಮಾಧಿನಾ ॥ ೧೬ ॥

ಶಾಸ್ತ್ರವಿಧಿಪೂರ್ವಕ ತಪಸ್ಸು ಮಾಡುವುದರ, ವ್ರತಾದಿಗಳನ್ನು ಪಾಲನೆ ಮಾಡುವು ದರ, ಶಾಸ್ತ್ರ-ಸ್ವಾಧ್ಯಾಯ ಮಾಡುವುದರ ಇವೆಲ್ಲವುಗಳ ಸತ್ಫಲವು ಸಮಾಧಿಮರಣವೇ ಆಗಿದೆ.

ಅತಿಪರಿಚಿತೇಷ್ವವಜ್ಞಾ ನವೇ ಭವೇತ್ ಪ್ರೀತಿರಿತಿ ಹಿ ಜನವಾದಃ ।
ಚಿರತರ ಶರೀರನಾಶೇ ನವತರಲಾಭೇ ಚ ಕಿಂ ಭೀರುಃ ॥ ೧೭ ॥

'ಲೋಕೋಹ್ಯಭಿನವಪ್ರಿಯಃ' ಎಂಬ ಸಂಸ್ಕೃತದಲ್ಲಿರುವ ಲೋಕದ ನೀತಿಯಂತೆ, ಹೆಚ್ಚಾಗಿ ಜನರಿಗೆ ಹಳೆಯ ವಸ್ತುಗಳಲ್ಲಿ ಬೇಸರವೂ, ಹೊಸ ಹೊಸ ವಸ್ತುಗಳನ್ನು ಕಂಡರೆ ಪ್ರೀತಿಯೂ ಉಂಟಾಗುವುದು ಸ್ವಾಭಾವಿಕ. ಆದರೆ ವರ್ಷಗಟ್ಟಲೆ ಹಳೆಯ ದಾದ ಜೀರ್ಣ-ಶೀರ್ಣಗೊಂಡ ಶರೀರದ ನಾಶಕ್ಕೆ ಭಯವೇಕೆ? ಆದುದರಿಂದ ಇವನ್ನ ರಿತು ಮರಣ ಸಮಯದಲ್ಲಿ ದುರ್ಗತಿಯ ಬಂಧಕ್ಕೆ ಕಾರಣವಾದ ಅಶುಭ ಭಾವನೆ ಯನ್ನು ತ್ಯಜಿಸಬೇಕಾದುದು ನಮ್ಮೆಲ್ಲರ ಪರಮ ಕರ್ತವ್ಯವಾಗಿದೆ.

## ಉಪಸಂಹಾರ

ಅಂತಃಕ್ರಿಯಾಧಿಕರಣಂ ತಪಃಫಲಂ ಸಕಲದರ್ಶಿನಸ್ತುವತೇ ।
ತಸ್ಮಾದ್ಯಾವದ್ವಿಭವಂ 'ಸಮಾಧಿ ಮರಣೇ' ಪ್ರಯತಿತವ್ಯಮ್ ॥

–ಆಚಾರ್ಯ ಸಮಂತಭದ್ರ (ರತ್ನಕರಂಡಕಶ್ರಾವಕಾಚಾರ).

ಜೀವನವೆಲ್ಲ ಎಸಗಿದ ತಪಸ್ಸಿನ ಸಫಲತೆಯೇ ಸಮಾಧಿ ಮರಣವೆಂದು ಎಲ್ಲ ದರ್ಶನ (ಧರ್ಮ)ಕಾರರೂ ಪ್ರಶಂಸಿಸುತ್ತಾರೆ. ಆದ ಕಾರಣ ತನ್ನ ಸಕಲ ಶಕ್ತಿಯನ್ನು ಸಂಚಯಿಸಿಕೊಂಡು ಸಮಾಧಿ ಮರಣ(ಸಲ್ಲೇಖನ)ಕ್ಕಾಗಿ ಪ್ರಯತ್ನಿಸಬೇಕು. ಶಾಶ್ವತ ಧರ್ಮದ ರಕ್ಷಣೆಗಾಗಿ ನಶ್ವರ ಶರೀರದ ಮೋಹವನ್ನು ತ್ಯಜಿಸಬೇಕು. ಇವರೇ ಮೋಹ ವಿಜಯಿಗಳೆನಿಸಿ ಪರಗತಿಯಲ್ಲಿ ಸುಖಿಗಳಾಗುವರು. 'ಸಲ್ಲೇಖನಾ' ವ್ರತವನ್ನು ಪಾಲಿಸಿ 'ಲೋಕಪೂಜ್ಯರಾಗುವರು. ಎಲ್ಲ ಮತಾನುಯಾಯಿಗಳಿಂದ ಮಾನ್ಯತೆ ಹೊಂದಿರುವ ಈ 'ಸಮಾಧಿಮರಣ' ಅಥವಾ 'ಸಲ್ಲೇಖನಾ' ವ್ರತವನ್ನು ಸ್ಥಿರತೆಯಿಂದ ಪಾಲಿಸಿ ಇಹ ಪರಗಳಲ್ಲಿ ಕೀರ್ತಿಶಾಲಿಗಳಾಗಿ, ಸುಖಿಗಳಾಗಿ ಕೊನೆಗೆ ಮಾನವ ದೇಹದ ಚರಮ ಧ್ಯೇಯವೆನಿಸಿದ ಮುಕ್ತಿ ಸೌಖ್ಯವನ್ನು ಸರ್ವರೂ ಹೊಂದುವಂತಾಗಲೆಂದು ಹಾರೈಸುತ್ತೇವೆ.

"ಸರ್ವೇ ಜನಾಃ ಸುಖಿನೋ ಭವಂತು"



ವಿದ್ಯಾನಂದ ವಾಣಿ

## ಜೈನ ಸಾಹಿತ್ಯ ವಿಶ್ವವ್ಯಾಪಿ

ಭಾರತ ಕಥಾ ಸಾಹಿತ್ಯವೇ ಏಕೆ? ವಿಶ್ವ ಸಾಹಿತ್ಯದ ಕಥಾ ಕೋಶಕ್ಕೆ ಬುನಾದಿ ರಚಿಸಿದವರು ಜೈನರು; ಪ್ರೇರಣೆ ಕೊಟ್ಟವರು ಜೈನರು. ಬೈಬಲ್ ಬರೆದವರೂ ಒಂದು ಜೈನ ಕಥೆ ತೆಗೆದು ಕೊಂಡಿರುವರೆಂದು ಜರ್ಮನ್ ಲೇಖಕರೊಬ್ಬರು ಸಿದ್ಧಪಡಿಸಿರುವರು. ವಿಶ್ವ ಕಥಾ ಸ್ರೋತದ ಉಗಮವೇ ಜೈನ ಕಥಾಕೋಶ. ಯೂರೋಪ್ ಖಂಡದಲ್ಲಿರುವ ಎಲ್ಲ ಕಥೆಗಳಿಗೂ ಜೈನ ಪುರಾಣದ ಕಥೆಗಳೊಡನೆ ಸಾಮ್ಯವಿದೆ. ಜೈನ ಕಥೆಗಳನ್ನು ಪ್ರಪಂಚದ ಉಳಿದ ಭಾಗದವರು ಕಡ ತೆಗೆದುಕೊಂಡಿರುವರು.



# 9. ಸ್ವಾತಂತ್ರ್ಯ, ಸಮಾಜವಾದ ಮತ್ತು ಅನುಶಾಸನ.

'ಸರ್ವ ಪರವಶಂ ದುಃಖಂ ಸರ್ವಮಾತ್ಮ ವಶಂ ಸುಖಂ ।'

ಜೀವನದಲ್ಲಿ ಎಲ್ಲಾ ಸುಖಗಳ ವ್ಯಾಖ್ಯೆಯು ಸ್ವಾತಂತ್ರ್ಯವೆಂಬ ಶಬ್ದದಲ್ಲಿ ಅಡಗಿಕೊಂಡಿದೆ. ಸ್ವತಂತ್ರವಾಗಿರುವುದೆಂದರೆ ಪುಣ್ಯ ಸಂಚಯನವಾಗಿರುವುದರ ಸೂಚನೆ. ಜನರು ಮುಕ್ತಿಯನ್ನು ಪಡೆಯಲಿಕ್ಕಾಗಿ ಆಧ್ಯಾತ್ಮಿಕ ವ್ರತಗಳನ್ನೂ, ಜನರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬಾರದೆಂದು ಪ್ರಯತ್ನವನ್ನೂ ಮಾಡುತ್ತಾರೆ. ಬಂಧನದ ಜೀವನದಲ್ಲಿ ಸುಖವಿರುವುದಿಲ್ಲ.

ಮಗುವನ್ನು ತಂದೆ ತಾಯಂದಿರು ನೋಡಿಕೊಳ್ಳುತ್ತಾರೆ. ಆದರೆ ಅದು ಬೆಳೆದಂತೆ ಇನ್ನೊಬ್ಬರನ್ನು ಆಶ್ರಯಿಸುವುದನ್ನು ಕಡಿಮೆ ಮಾಡುತ್ತದೆ. ಓದುವಾಗ ಸ್ಲೇಟ್, ಬಳಪ, ಪುಸ್ತಕ ಇತ್ಯಾದಿಗಳ ಸಹಾಯ ತೆಗೆದುಕೊಳ್ಳುತ್ತದೆ. ಬೆಳೆಯುತ್ತಾ ಹೋದಂತೆ ವಿಚಾರಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಬೆಳೆಸಿ ಆ ಮಗುವೇ ಮುಂದೆ ವಿದ್ಯಾವಂತನಾಗುತ್ತಾನೆ. ಇದೇ ತರಹ ಪರರ ಅವಲಂಬನೆಯನ್ನು ಬಿಟ್ಟು ಸ್ವಾವಲಂಬಿಯಾಗುತ್ತಾನೆ. ಸಣ್ಣ ಮಗುವಿದ್ದಾಗ ಇತರರನ್ನು ಆಶ್ರಯಿಸುತ್ತಿದ್ದ ಅವನು ನಿರ್ಭಯನಾಗಿ ಮುಂದೆ ಎಲ್ಲಾ ಕಡೆ ತಿರುಗುತ್ತಾನೆ. ಸ್ವಾವಲಂಬನೆ ಪ್ರವೃತ್ತಿ ಮನುಷ್ಯನಲ್ಲೂ ಪ್ರಾಣಿಗಳಲ್ಲೂ ಕಂಡು ಬರುತ್ತದೆ. ಆದುದರಿಂದಲೇ ಬಾಲಗಂಗಾಧರ ತಿಲಕರು 'ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು' ಎಂದು ಹೇಳಿದ್ದಾರೆ.

ರಾಷ್ಟ್ರವು ಪರಾಧೀನವಾದೊಡನೆ ಅದರಲ್ಲಿರುವ ಎಲ್ಲಾ ಜನರೂ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾರೆ. ಔರಂಗಜೇಬನ ಕಾಲದಲ್ಲಿ ಹಿಂದೂಗಳು ತಲೆಗಂದಾಯವನ್ನು ಕೊಡಬೇಕಾಗಿತ್ತು. ಧರ್ಮ, ರೀತಿ, ನಿಯಮಗಳನ್ನು ಇತರರ ಮೇಲೆ ಬಲವಂತವಾಗಿ ಹೇರಲಾಗುತ್ತಿತ್ತು. ಭಾರತದಲ್ಲಿ ಇತರ ರಾಜರ ಪ್ರಭುತ್ವವೇ ಇಷ್ಟು ಸಂಖ್ಯೆಯಲ್ಲಿ ಮುಸ್ಲಿಂ, ಕ್ರೈಸ್ತ ಇತ್ಯಾದಿ ಜನರು ಇಲ್ಲಿ ಹೊರಗಿಂದ ಬಂದು ನೆಲಸಲು ಕಾರಣವಾಯಿತು. ಪರಾಧೀನವಾಗಿರುವುದರಿಂದ ಜಾತಿಖಂಡನೆ, ಸಂಸ್ಕೃತಿಖಂಡನೆ, ಸಂಪ್ರದಾಯ ಇತ್ಯಾಗಳು ಇರುವುದು ಸರ್ವಸಾಮಾನ್ಯ. ನಾವು ಸ್ವಾತಂತ್ರ್ಯದೊಂದಿಗೆ ಸಭ್ಯತೆ, ಸಂಸ್ಕೃತಿ ಇತ್ಯಾದಿಗಳನ್ನು ಬೆಳೆಸಿಕೊಳ್ಳಬೇಕು.

ಒಂದು ಬಾರಿ ಪಂಚೇಂದ್ರಿಯಗಳಲ್ಲಿ ನಾನು ದೊಡ್ಡವ, ನಾನು ದೊಡ್ಡವನೆಂಬ ಭಿನ್ನಾಭಿಪ್ರಾಯವುಂಟಾಯಿತು. ಆದುದರಿಂದ ಶರೀರದಿಂದ ಎಲ್ಲಾ ಅಂಗಗಳು ಬೇರೆ ಬೇರೆಯಾದವು. ಕಣ್ಣುಗಳು ಬೇರೆಯಾದಾಗ ಕುರುಡನಾದರೂ ನಡೆಯುವ ಸಾಮರ್ಥ್ಯವು ಮನುಷ್ಯನಿಗಿತ್ತು. ಹಾಗೆಯೇ ಉಳಿದ ಅಂಗಗಳು ಶರೀರದಿಂದ ಬೇರೆಯಾದರೂ ಕೆಲಸವು ನಡೆಯುತ್ತಿತ್ತು. ಆಗ ಅವು ವಿಸ್ಮಯಗೊಂಡು ಪ್ರಾಣದೊಂದಿಗೆ ನಮ್ಮಲ್ಲಿ ಯಾರೂ ಶ್ರೇಷ್ಠರೆಂದು ಪುನಃ ಕೇಳಿದಾಗ ಯಾರಿಂದ ವ್ಯಕ್ತಿಯ ಎಲ್ಲಾ ಕ್ರಿಯೆಗಳೂ ನಿಲ್ಲಲ್ಪಡುತ್ತವೋ ಅವನಿಂದಲೇ ಶರೀರಕ್ಕೆ ಉಪಯೋಗ ಎಂದು ಹೇಳಿ ಪ್ರಾಣವು ಶರೀರವನ್ನು ಬಿಟ್ಟಿತು. ಆಗ ಎಲ್ಲಾ ದೈಹಿಕ ಕ್ರಿಯೆಗಳೂ ನಿಂತು ನಿಂತು ಹೋದವು. ಪ್ರಾಣವು ಹೇಗೆ ದೇಹವನ್ನು ರಕ್ಷಿಸುತ್ತದೋ ಅದೇ ತರಹ

ಸ್ವಾತಂತ್ರ್ಯವೂ ದೇಶಕ್ಕೆ ಅಷ್ಟೇ ಪ್ರಯೋಜನಕಾರಿಯಾಗಿದೆ. ನಮ್ಮ ಸ್ವಾತಂತ್ರ್ಯ ವನ್ನು ಯಾರಿಂದಲೂ ಕಸಿದುಕೊಳ್ಳಲಸಾಧ್ಯ ಎಂದು ಮನುಷ್ಯನು ತಿಳಿದುಕೊಳ್ಳ ಬೇಕು. ಸ್ವಾತಂತ್ರ್ಯಕ್ಕಾಗಿ ಪ್ರಾಣ ಕೊಡಲೊಪ್ಪದವನು ಹೇಡಿ, ಅವನು ಜೀವ ಭಯದಿಂದ ಪರಾಧೀನನಾಗಲು ಸಿದ್ಧ. ಸ್ವಾಧೀನತೆಗಾಗಿ ಏನು ಮಾಡಲೂ ಸಿದ್ಧ ಎಂಬ ಭಾವನೆಯನ್ನು ನಾವು ಬೆಳೆಸಿಕೊಳ್ಳಬೇಕು.

ಶಿವಾಜಿಯು ತನ್ನ ಸ್ವಾತಂತ್ರ್ಯಕ್ಕಾಗಿ ಜೀವನವಿಡೀ ಔರಂಗಜೇಬನೊಡನೆ ಯುದ್ಧನಿರತನಾಗಿದ್ದನು. ಪ್ರತಾಪಸಿಂಹನೂ ಕೂಡಾ ಸ್ವಾತಂತ್ರ್ಯಕ್ಕಾಗಿ ಹೋರಾಡಿ ದನು. ಮಹಾವೀರರೂ ಕೂಡಾ ಹಿಂಸೆಯನ್ನು ತಡೆಗಟ್ಟಿ ನೀವು ಜೀವಿಸಿ, ಇತರರನ್ನೂ ಜೀವಿಸಗೊಡಿರಿ ಎಂಬ ಭಾವನೆಯನ್ನು ಬಿತ್ತಿ ಸ್ವಾತಂತ್ರ್ಯದ ಬೆಲೆ ಏನು ಎಂಬುದನ್ನು ತೋರಿಸಿದರು.

ನಾವು ಸ್ವಾತಂತ್ರ್ಯವಿದ್ದರೆ ನಮ್ಮ ಜೀವನವನ್ನು ರೂಪಿಸಿಕೊಳ್ಳಬಲ್ಲೆವು. ಸ್ವಾತಂತ್ರ್ಯಕ್ಕಾಗಿ ಕಷ್ಟಗಳಿಗೆ ಯಾರು ಗುರಿಯಾಗಲಿಚ್ಛಿಸುವುದಿಲ್ಲವೋ ಅವರು ಯಾವತ್ತೂ ಸ್ವತಂತ್ರವಾಗಿರಲಾರರು. ಸ್ವಾತಂತ್ರ್ಯವು ಹಲವರ ಬಲಿದಾನದಿಂದಲೇ ಸಿಗುತ್ತದೆ. ಸ್ವಾತಂತ್ರ್ಯಕ್ಕಾಗಿ ನಾವು ನಮ್ಮಿಂದ ಆಗುವ ಎಲ್ಲಾ ತ್ಯಾಗಗಳನ್ನೂ ಮಾಡಬೇಕು.

ಭಾರತವು ಇಂದು ಬ್ರಿಟಿಷರಿಂದ ಸ್ವತಂತ್ರಗೊಂಡಿದೆ. ಕೆಂಪುಕೋಟೆಯ ಮೇಲೆ ಭಾರತೀಯ ತ್ರಿವರ್ಣ ಧ್ವಜವು ಹಾರುತ್ತಿದೆ. ಸ್ವತಂತ್ರಗೊಂಡು ಹಲವಾರು ವರ್ಷಗಳು ಕಳೆದರೂ ಆಗಸ್ಟ್ 15ರಂದು ಕೆಂಪುಕೋಟೆಯ ಮೇಲೆ ಧ್ವಜ ಹಾರಿಸು ವುದನ್ನು ನೋಡಲು ಲಕ್ಷಾಂತರ ಜನರು ಸೇರುತ್ತಾರೆ. ಮತದಾನ ಬಂದಾಗ ಅಭ್ಯರ್ಥಿ ಗಳು ಮತ ಕೇಳಲು ಬರುತ್ತಾರೆ. ಆಮೇಲೆ ಐದು ವರ್ಷಗಳ ಕಾಲ ಮತದಾರರಿಗೆ ಮುಖವನ್ನೇ ತೋರಿಸುವುದಿಲ್ಲ, ಏನೂ ಸಹಾಯವನ್ನೂ ಮಾಡುವುದಿಲ್ಲ. ಇದನ್ನು ನೋಡುವಾಗ ನಮ್ಮ ದೇಶ ಸ್ವತಂತ್ರಗೊಂಡಿದೆಯೋ ಎಂಬ ಅನುಮಾನವುಂಟಾಗುತ್ತದೆ. ನಮ್ಮ ದೇಶದ ಪ್ರಗತಿ ನೋಡಿದರೆ ನಿಜವಾಗಿಯೂ ದೇಶ ಸ್ವತಂತ್ರವಾಗಿಲ್ಲ ಎಂದು ತೋರುತ್ತದೆ.

'ಮಾತಾಭೂಮಿಃ ಪುತ್ರೋಽಹಂ ಪೃಥಿವ್ಯಾಃ (ಈ ಭೂಮಿ ನನ್ನ ತಾಯಿ, ನಾನು ಮಗ) ಎಂಬ ಭಾವನೆಯನ್ನು ಇಟ್ಟುಕೊಳ್ಳಬೇಕು. ಸಂಸ್ಕೃತಿಯ ಮೂಲಕ ನಾವು ಇನ್ನೊಬ್ಬರೊಡನೆ ಆತ್ಮೀಯ ಸಂಬಂಧವಿರಿಸಬೇಕು. ನಮ್ಮ ದೇಶದ ನದಿ, ವನ, ಬೆಟ್ಟ, ಗುಡ್ಡ, ಮುನಿಗಳು, ಸಂಸ್ಕೃತಿ ಇತ್ಯಾದಿಗಳ ಬಗ್ಗೆ ಒಳ್ಳೆಯ ಭಾವನೆಗಳನ್ನಿಡ ಬೇಕು. ಆದುದರಿಂದಲೇ ಕವಿಯು 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀ ಯಸೀ' ಎಂದು ಹೇಳಿದ್ದಾನೆ.

ಸ್ವಾತಂತ್ರ್ಯವೆಂದರೆ ನಮ್ಮಿಂದಾಗಿ ಇನ್ನೊಬ್ಬರಿಗೆ ತೊಂದರೆಯಾಗಬಾರದು. ಬಸ್ಸಿನಲ್ಲಿ ಕುಳಿತು ಧೂಮಪಾನ ಮಾಡುವುದರಿಂದ ಇತರರಿಗೆ ತೊಂದರೆಯಾಗುವು ದಾದರೆ ಧೂಮಪಾನ ಮಾಡದಿರುವುದೇ ಒಳ್ಳೆಯದು. ಒಂದು ವೇಳೆ ಇತರರು

ಆಕ್ಷೇಪಿಸಿದ ಮೇಲೂ ಧೂಮಪಾನ ಮಾಡಿದರೆ ಅದು ಇತರರ ಸ್ವಾಂತ್ರ್ಯಕ್ಕೆ ಧಕ್ಕೆಯನ್ನುಂಟುಮಾಡುತ್ತದೆ. ಆದುದರಿಂದ ಅದನ್ನು ಮಾಡದಿರುವುದೇ ಉಚಿತ. 'ಸರ್ವೇಷಾ ಮಾವಿರೋಧೇನ ಪೂಜಾ ಕರ್ಮ ಸಮಾಚರೇತ್' (ಪೂಜೆಯನ್ನು ಮಾಡುವ ರೀತಿಯು ಯಾರೂ ವಿರೋಧಿಸುವಂತಿರಬಾರದು) ಪೂಜೆಯೆಂದರೆ ದೇವರನ್ನು ಪ್ರಾರ್ಥಿಸುವುದಾದುದರಿಂದ ಶ್ರೇಷ್ಠವಾಗಿದೆ. ಸ್ವಾತಂತ್ರ್ಯದಿಂದ ಒಬ್ಬರ ಮೇಲೆ ಇನ್ನೊಬ್ಬರು ಅಧಿಕಾರ ನಡೆಸುವ ಅಥವಾ ಲಾಠಿಚಾರ್ಜ್ ಮಾಡುವ ಅಧಿಕಾರವಿರುವುದಿಲ್ಲ. ತನ್ನ ಧರ್ಮದೊಂದಿಗೆ ಇತರರ ಧರ್ಮಗಳನ್ನೂ ಗೌರವಿಸಬೇಕು. ಸ್ವಾತಂತ್ರ್ಯದ ಬೆಲೆ ಅರಿಯದವರಿಗೆ ಅದರಿಂದ ಏನೂ ಪ್ರಯೋಜನವಿಲ್ಲ.

ಅದಕ್ಕಾಗಿ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಸಂವಿಧಾನವು ಸ್ವಾತಂತ್ರ್ಯವನ್ನು ಕಾಪಾಡುತ್ತದೆ. ಅಂದರೆ ನಾವು ಇತರರಿಗೆ ತೊಂದರೆಯನ್ನುಂಟು ಮಾಡಬಾರದು. ಸ್ವಾತಂತ್ರ್ಯದಿಂದ ಸ್ವಚ್ಛಂದತೆಯಿಂದ ತನಗೆ ಏನು ಬೇಕಾದರೂ ಮಾಡಬಹುದು ಎಂದು ಕೆಲವರು ತಿಳಿದುಕೊಂಡಿದ್ದಾರೆ. ಆದರೆ ಅದು ತಪ್ಪು ಕಲ್ಪನೆಯಾಗಿರುತ್ತದೆ. ಆನೆಯ ಮೇಲೆ ಹತೋಟಿ ಇಲ್ಲದಿದ್ದರೆ ಅದು ಸಿಕ್ಕಿದ್ದನ್ನೆಲ್ಲಾ ಹಾಳು ಮಾಡುತ್ತದೆ. ಅದೇ ರೀತಿ ನಮ್ಮ ಮೇಲೂ ಹಲವು ವಿಧಿಗಳನ್ನು ಸಂವಿಧಾನವು ಹೇರಿದೆ. ನಮ್ಮ ದೇಶದಲ್ಲಿ ನಡೆಯುವ ಚಳುವಳಿಗಳು ಸ್ವಾತಂತ್ರ್ಯದ ದುರುಪಯೋಗ ಮಾಡುತ್ತವೆ. ಅದರಿಂದ ಏನೂ ಉಪಯೋಗವಿಲ್ಲ. ದೇಶಕ್ಕೆ ಹಾನಿಯನ್ನುಂಟು ಮಾಡುತ್ತವೆ. ಯಾರು ಇತರರ ಸ್ವಾತಂತ್ರ್ಯಕ್ಕೆ ಧಕ್ಕೆಯನ್ನು ತರುವುದಿಲ್ಲವೋ ಅವನು ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುತ್ತಾನೆ. ಅದರ ಬೆಲೆ ಅಂಥವನಿಗೆ ಮಾತ್ರ ಗೊತ್ತಿರುತ್ತದೆ. ಅವನು ಇತರರ ಮೇಲೆ ಹಕ್ಕು ಚಲಾಯಿಸಲೂ ಇಷ್ಟಪಡುವುದಿಲ್ಲ.

'ಸ್ವಚ್ಛಂದತೆಯೆಂದರೆ ತನ್ನ ಇಷ್ಟದಂತೆ ನಡೆದುಕೊಳ್ಳುವುದು ಎಂದು ಭಾವಿಸಿ ಅದರಿಂದ ಯಾವುದೇ ತರಹದ ತೊಂದರೆಗಳು ಇತರರಿಗಾದರೂ ಅವನು ಲಕ್ಷಿಸುವುದಿಲ್ಲ. ಅಂಥವರು ಧರ್ಮಾಭಿಮಾನಿಗಳಾಗಿರುವುದಿಲ್ಲ. ದುರಭಿಮಾನಿಗಳಾಗಿರುತ್ತಾರೆ. ಸ್ವಚ್ಛಂದತೆಯು ಒಳಗಿನ ಅಸುರ ಪ್ರವೃತ್ತಿಯನ್ನು ಮನುಷ್ಯನಲ್ಲಿ ಎತ್ತಿ ತೋರಿಸುತ್ತದೆಯೇ ಹೊರತು ಅವನಲ್ಲಿರುವ ಒಳ್ಳೆಯ ಗುಣಗಳನ್ನಲ್ಲ. ಸ್ವಾತಂತ್ರ್ಯವನ್ನು ಕಳೆದುಕೊಂಡ ವ್ಯಕ್ತಿಯು ಯಾವಾಗಲೂ ಅದನ್ನು ತಿರುಗಿ ಪಡೆಯಲು ಹವಣಿಸುತ್ತಾ ಇರುತ್ತಾನೆ. ಆದುದರಿಂದ ಸ್ವಾತಂತ್ರ್ಯ ಪಡೆದ ಮೇಲೆ ಅವನು ತನ್ನ ಸಾತಂತ್ರ್ಯ ರಕ್ಷಣೆಗಾಗಿ ಶಸ್ತ್ರಗಳನ್ನು ಇಟ್ಟುಕೊಳ್ಳುತ್ತಾನೆ. 'ಶಸ್ತ್ರೇಣ ರಕ್ಷಿತೇ ರಾಷ್ಟ್ರೇ, ಶಸ್ತ್ರಚಿಂತಾ ಪ್ರವರ್ತತೇ' ರಾಷ್ಟ್ರವನ್ನು ಶತ್ರುಗಳಿಂದ ರಕ್ಷಿಸಲು ಶಸ್ತ್ರಗಳನ್ನು ಇಟ್ಟುಕೊಳ್ಳಲೇಬೇಕು. ಸ್ವಾತಂತ್ರ್ಯವಿದ್ದರೇನೆ ಪ್ರಗತಿ, ವಿಜ್ಞಾನ ಇತ್ಯಾದಿಗಳು ಮುಂದುವರಿಯುತ್ತವೆ.

'ತಂತ್ರ ಚಿಂತೈವ ನನ್ವಸ್ಯ ಸ್ವಾತಂತ್ರ್ಯ ಸ್ಯೇಹ ಭಾರತೇ॥'

–ಆಚಾರ್ಯ ಜಿನಸೇನ.

ಜಗತ್ತನ್ನೆ ಗೆದ್ದ ಭರತ ಚಕ್ರವರ್ತಿಗೆ ಇತರ ರಾಷ್ಟ್ರಗಳ ಚಿಂತೆಯಿರಲಿಲ್ಲ. ಬದಲಾಗಿ ತನ್ನ ದೇಶದ ಬಗ್ಗೆ ಚಿಂತೆ ಇತ್ತು.

**ಸ್ವಾತಂತ್ರ್ಯದ ಮಹತ್ವ:**

'ಸ್ವಾತಂತ್ರ್ಯವೆಂಬುದು ಪುಸ್ತಕದಲ್ಲಿ ಬರೆಯಬೇಕಾದ ಶಬ್ದವಲ್ಲ. 'ಚಂದ್ರಗುಪ್ತ' ನಾಟಕದಲ್ಲಿ ಸೆಲ್ಯೂಕಸನು ಚಂದ್ರಗುಪ್ತನಲ್ಲಿ ಸೋತಾಗ ರಾಜಿ ಮಾಡಿಕೊಳ್ಳಲು ಆಶಿಸುತ್ತಾನೆ. ಸ್ವಾತಂತ್ರ್ಯದ ರಕ್ಷಣೆಯು ಸಂಧಿಯಿಂದಾಗಲೀ ಮೈತ್ರೀಕೂಟದಿಂದಾಗಲೀ ಆಗದೆ ದೇಶದ ಪ್ರಜೆಗಳಿಂದ ಮಾತ್ರ ಸಾಧ್ಯ ಎಂದು ಚಾಣಕ್ಯನು ಹೇಳುತ್ತಾನೆ. ಹೀಗೆಂದು ಪ್ರಸಿದ್ಧ ಹಿಂದೀ ನಾಟಕಕಾರ ಜಯಶಂಕರಪ್ರಸಾದರು ತಮ್ಮ ನಾಟಕದಲ್ಲಿ ಬರೆದಿದ್ದಾರೆ.

ಸ್ವಾತಂತ್ರ್ಯವು ರಾಜನೈತಿಕವಾಗಿರದೆ ಚಿಂತನ ಸ್ವಾತಂತ್ರ್ಯ, ಆರ್ಥಿಕ ಸ್ವಾತಂತ್ರ್ಯ, ಉತ್ಪಾದನಾ ಸ್ವಾತಂತ್ರ್ಯವೆಂದು ಹಲವು ರೀತಿಯಲ್ಲಿ ವಿಂಗಡಿಸಲ್ಪಟ್ಟಿದೆ. ನಮ್ಮ ದೇಶದ ಸ್ವಾತಂತ್ರ್ಯವಾಗಿದ್ದರೂ ಅನೇಕ ವಿಷಯಗಳಲ್ಲಿ ಸ್ವಾತಂತ್ರ್ಯವನ್ನು ಇನ್ನೂ ಪಡೆದುಕೊಂಡಿಲ್ಲ. ಅಂದರೆ ಹಲವಾರು ಸಮಸ್ಯೆಗಳು ನಮ್ಮನ್ನು ಕಾಡುತ್ತಿವೆ. ಆಹಾರ ಸಮಸ್ಯೆ, ಔದ್ಯೋಗಿಕ ಸಮಸ್ಯೆ ಇತ್ಯಾದಿ. ಇಂತಹ ಹಲವಾರು ಸಮಸ್ಯೆಗಳನ್ನು ಹೋಗಲಾಡಿಸಲು ನಾವು ದುಡಿಯಬೇಕು.

ರಾಣಾಪ್ರತಾಪಸಿಂಹನು ಸಂಪೂರ್ಣವಾಗಿ ಮೇವಾಡವನ್ನು ಮುಗಲರಿಂದ ಗೆಲ್ಲುವವರೆಗೆ ಹಾಸಿಗೆಯಲ್ಲಿ ನಿದ್ದೆ ಮಾಡುವುದಿಲ್ಲ, ಒಳ್ಳೆಯ ಊಟ ಮಾಡುವುದಿಲ್ಲ ಎಂಬ ಪ್ರತಿಜ್ಞೆ ಕೈಗೊಂಡಿದ್ದ. ಪ್ರತಿಜ್ಞೆಯನ್ನು ಪಾಲಿಸುತ್ತಾ ಪ್ರಾಣ ನೀಗಿದನು. ಆದರೆ ಭಾರತೀಯರಾದ ನಾವು ಸಿನೆಮಾ, ಕ್ಲಬ್, ವಿಲಾಸಗಳಲ್ಲೇ ಮೈಮರೆತು ದೇಶಹಿತವನ್ನಿಂದು ಮರೆತಿದ್ದೇವೆ. ಹೀಗೆಯೇ ಇದು ಮುಂದುವರಿದರೆ ಮುಂದೇನಾದೀತು? ಎಂಬ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ.

ಭೌತಿಕವಾಗಿ ನಾವು ಸ್ವತಂತ್ರರಾಗಿದ್ದರೂ ಮಾನಸಿಕವಾಗಿ ಹಿಂದಿನ ಪಾರತಂತ್ರದಿಂದ ಮುಕ್ತರಾಗಿಲ್ಲ. ಇಂಗ್ಲೀಷರನ್ನು ಅನುಕರಿಸಿದರೆ ನಮ್ಮ ಗೌರವ ಹೆಚ್ಚುವುದೆಂಬ ಭಾವನೆ ನಮ್ಮಲ್ಲಿದೆ. ಅದನ್ನು ನಾವು ಮೊದಲು ದೂರ ಮಾಡಬೇಕು. ನಮ್ಮ ಸಂಸ್ಕೃತಿಯನ್ನು ತಿಳಿಯಲು ನಾವು ಪ್ರಾಚೀನ ಪ್ರಾಕೃತ, ಸಂಸ್ಕೃತ ಗ್ರಂಥಗಳನ್ನು ಓದಿ ಅದರಲ್ಲಿರುವಂತೆ ನಡೆದುಕೊಳ್ಳಬೇಕು.

ಸ್ವಾತಂತ್ರ್ಯವೆಂದರೆ ಕೆಂಪುಕೋಟೆಯ ಮೇಲೆ ಧ್ವಜ ಹಾರಿಸುವುದು ಮಾತ್ರ ಎಂದು ನಾವು ಕಲ್ಪಿಸಿಕೊಂಡಿದ್ದೇವೆ. ಆದರೆ ಪ್ರತಿಯೊಬ್ಬನ ಮನಸ್ಸಿನಲ್ಲೂ ಸ್ವಾತಂತ್ರ್ಯದ ಬಗ್ಗೆ ತ್ಯಾಗ ಏನು ಮಾಡಬೇಕು? ಎಂಬ ಭಾವನೆ ಮೂಡಿರಬೇಕು. ರಾಷ್ಟ್ರ ನಾಯಕರು ರಾಷ್ಟ್ರ ಹಿತಾಸಕ್ತಿಯನ್ನು ಗಮನದಲ್ಲಿರಿಸಿ ಇದು ನನ್ನ ದೇಶ, ಇದಕ್ಕಾಗಿ ಉತ್ತಮ ಕೆಲಸಗಳನ್ನು ಮಾಡಬೇಕು. ಇಲ್ಲಿನ ಇತಿಹಾಸ, ನೀರು ಎಲ್ಲದರಲ್ಲೂ ನನಗೆ ಸಂಬಂಧವಿದೆ ಎಂಬ ಭಾವನೆ ಮೂಡಬೇಕು.

**ನಾವು ಮಾಡಬೇಕಾದ ಕರ್ತವ್ಯಗಳು:**

1) ನಾವು ವಿಕಾಸದತ್ತ(ಏಳಿಗೆಯತ್ತ) ಸಾಗುತ್ತಿದ್ದೇವೆ ಎಂದು ಎಲ್ಲರೂ ಹೇಳುತ್ತಾರೆ. ಆದರೆ ವಾಸ್ತವಿಕವಾಗಿ ಅಧಃಪತನದ ಕಡೆಗೆ ಸರಿಯುತ್ತಿದ್ದೇವೆಯೇ ಹೊರತು

ವಿಕಾಸದೆಡೆಗಲ್ಲ. ನಮ್ಮ ಹಿಂದಿನ ಸಂಸ್ಕೃತಿ, ನೀತಿ, ವಿಶ್ವಬಂಧುತ್ವ ಇವುಗಳನ್ನೆಲ್ಲಾ ಮರೆತಿದ್ದೇವೆ. ಅದನ್ನು ನಾವು ಪುನಃ ವೈಗೂಡಿಸಿಕೊಳ್ಳಬೇಕು.

2) ನಾವು ಹುಟ್ಟಿದ ನೆಲ(ಭೂಮಿ)ಯ ರಕ್ಷಣೆಗೆ ಯಾವ ತ್ಯಾಗ ಬೇಕಾದರೂ ಮಾಡಬೇಕು. ಬದಲಾಗಿ ಸೇವೆಯ ಅಗತ್ಯ ಬಿದ್ದಾಗ ನಾವು ಅದನ್ನೂ ಮಾಡಬೇಕು.

3) ಆಂತರಿಕ ಮತ್ತು ಬಾಹ್ಯ ಶತ್ರುಗಳೆಂಬ ಎರಡು ವಿಧದ ಶತ್ರುಗಳಿದ್ದಾರೆ. ಶತ್ರುಗಳು ಆಕ್ರಮಣ ಮಾಡುವಾಗ ನಾವು ನಮ್ಮನ್ನು ಬಲಿದಾನ ಕೊಟ್ಟಾದರೂ ದೇಶವನ್ನು ರಕ್ಷಿಸಬೇಕು. ಯಾರಾದರೂ ನಮ್ಮನ್ನು ಹೊಡೆಯಲು ಬರುತ್ತಿದ್ದರೆ ಕೈ ಮುಂದೆ ಚಾಚಿ ನಮ್ಮನ್ನು ರಕ್ಷಿಸಿಕೊಳ್ಳುತ್ತೇವೆ. ಹಾಗೆಯೇ ಅಹಿಂಸೆ, ಸತ್ಯ, ಅಪರಿಗ್ರಹ, ಮುಂತಾದುವುಗಳನ್ನು ಪಾಲಿಸಿಕೊಂಡು ಭ್ರಷ್ಟಾಚಾರವನ್ನು ನೀಗಿಸಲು ಪ್ರಯತ್ನಿಸಬೇಕು. ಇದನ್ನು ಎಲ್ಲರೂ ಆಚರಣೆಗೆ ತಂದಲ್ಲಿ ಭಾರತವು ಕೆಲವೇ ವರ್ಷಗಳಲ್ಲೇ ಪ್ರಗತಿಯನ್ನು ಸಾಧಿಸುವುದೆನ್ನುವುದಕ್ಕೆ ಸಂಶಯವಿಲ್ಲ.

4) ನಾವು ನಮ್ಮ ರಾಜ್ಯವನ್ನೇ ಪ್ರೀತಿಸದೆ ದೇಶ ಪ್ರೇಮ ಹೊಂದಲು ಹೇಗೆ ತಾನೇ ಸಾಧ್ಯ? ದೇಶದ ಎಲ್ಲಾ ಭಾಗಗಳಲ್ಲೂ ಏನು ನಡೆಯುತ್ತದೆ ಎಂಬ ಕಾಳಜಿ ವಹಿಸಬೇಕು. ನಾವು ದೇಶದ ಎಲ್ಲಾ ಭಾಗಗಳನ್ನು ಸಮಾನವಾಗಿ ನೋಡಿಕೊಳ್ಳುತ್ತೇವೆ. ಯಾವುದಾದರೂ ಅಂಗಕ್ಕೆ ಏಟಾದರೆ ಇಡೀ ದೇಹ ನೋವನ್ನು ಅನುಭವಿಸುತ್ತದೆ. ಹಾಗೆಯೇ ಒಂದು ಕಡೆ ಗಲಭೆ, ಗೊಂದಲವುಂಟಾದರೆ ಅದಕ್ಕೆ ಎಲ್ಲಾ ರಾಜ್ಯದ ಜನರೂ ಸಹಾನುಭೂತಿ ವ್ಯಕ್ತಪಡಿಸಿ ತಮ್ಮ ಕೈಲಾದ ಸೇವೆ ಮಾಡಬೇಕು.

5) ನಾವು ದೇಶವನ್ನು ಪ್ರಗತಿಶೀಲವಾಗುವಂತೆ ಮಾಡಲು ಪ್ರಯತ್ನಿಸಬೇಕು. ನಮ್ಮ ಕೆಲಸಗಳನ್ನು ಕಪಟವಿಲ್ಲದೆ ಮಾಡಬೇಕು. ಅಂದರೆ ಕಾರ್ಖಾನೆಗಳಲ್ಲಿ, ಗಡಿಯಲ್ಲಿ ಅಥವಾ ಎಲ್ಲೇ ಇರಲಿ ನಾವು ಉಳಿದವರಿಗೆ ಮಾರ್ಗದರ್ಶಕರಾಗಬೇಕು.

6) ನಾವು ನಮ್ಮ ದೇಶಕ್ಕೆ ಪ್ರಾಮಾಣಿಕರಾಗಿ ಸೇವೆ ಸಲ್ಲಿಸಬೇಕು. ನಮ್ಮ ರಾಷ್ಟ್ರವು ಏಳಿಗೆಯಾದರೆ ಅದು ನಮ್ಮೆಲ್ಲರ ಏಳಿಗೆಯೆಂದು ತಿಳಿಯಬೇಕು.

7) ನಾವು ಇತರರಿಂದ ಹೇಳಿಸದೆ ನಮ್ಮ ಕೆಲಸಗಳನ್ನು ನಾವೇ ಮಾಡಬೇಕು. ಎಲ್ಲರೂ ಸಮಾನರು ಎಂಬ ಭಾವನೆ ನಮ್ಮಲ್ಲಿರಬೇಕು.

8) ನಾವು ಕಾರ್ಯನಿರತರಾಗಬೇಕು, ದೇವಸ್ಥಾನಗಳಿಗೆ ಹೋಗಬೇಕು. ನಮ್ಮ ಸಂಸ್ಕೃತಿಯನ್ನು ನಾವು ಪಾಲಿಸಬೇಕು, ಅದರ ಬದಲು ವೈಗಳ್ಳರಾಗಬಾರದು. ಸುಮ್ಮನೆ ಕಾಲಹರಣವನ್ನು ಮಾಡಬಾರದು.

**ಅನುಶಾಸನದ ಮಹತ್ವ:**

1) ಅನುಶಾಸನವೆಂದರೆ ಹತೋಟಿಯಲ್ಲಿ ಇಟ್ಟುಕೊಳ್ಳುವುದು ಎಂದರ್ಥ. ಮನುಷ್ಯ(ವ್ಯಕ್ತಿ)ಯ ಮೇಲೆ ಸಂವಿಧಾನ, ಸರಕಾರದ ಹತೋಟಿ ಇರುವಂತೆ ಋತುಗಳ ಮೇಲೆ ಸಮಯದ ನಿಯಂತ್ರಣವಿದೆ. ಇದರಿಂದಾಗಿಯೇ ನಾವು ಕೆಟ್ಟ ಸ್ವಭಾವಗಳನ್ನು ತ್ಯಜಿಸಿ ಗೌರವವನ್ನು ಪಡೆಯುತ್ತೇವೆ. ಅಂಕುಶದಿಂದ ಆನೆಯು ನಡಿಗೆಯ

ಮೇಲೆ ಹತೋಟಿ ತಂದಂತೆ ಮನುಷ್ಯನ ಮನಸ್ಸಿನ ಮೇಲೂ ಹತೋಟಿಯನ್ನು ತರಬೇಕು.

2) ಅಹಿಂಸೆಯನ್ನು ಪಾಲಿಸುವುದರಿಂದ ಸುಖ, ಶಾಂತಿ, ಸಂತೋಷ, ಜ್ಞಾನ ಉಂಟಾಗುತ್ತದೆ. ಆತ್ಮಾನುಶಾಸನದಿಂದ ಸಮೃದ್ಧಿಯು ಮನಸ್ಸಿಗೆ ದೊರೆಯುತ್ತದೆ.

3) ಇಂದಿನ ವಿಜ್ಞಾನ ಯುಗದಲ್ಲಿ ಮಹಾ ನದಿಗಳ ಪ್ರಪಾತಗಳಿಗೆ ತಡೆ ಯೊಡ್ಡಿ ಅದರಿಂದ ಲಾಭ ಪಡೆಯುತ್ತಾನೆ. ಅದೇ ರೀತಿ ಮನಸ್ಸಿಗೆ ಕಡಿವಾಣ ಹಾಕಿ ಆತ್ಮೋನ್ನತಿಯನ್ನು ಮಾಡಿಕೊಳ್ಳಬೇಕು.

4) ಕಾಲದ ಅನುಶಾಸನವು ಹಗಲು-ರಾತ್ರಿಗಳಾದರೆ ಮನುಷ್ಯನಿಗೆ ಶ್ವಾಸೋ ಚ್ಛ್ವಾಸದ ಅನುಶಾಸನವು ನಿಯಮ, ಗತಿ, ಉದ್ದೇಶವನ್ನು ನೀಡುತ್ತದೆ.

5) ಸಾಧುಗಳಿಗೆ ಶಾಸ್ತ್ರಗಳೇ ಅನುಶಾಸನವನ್ನು ಕಲ್ಪಿಸಿಕೊಡುತ್ತವೆ. ಅವರು ಮುಂದೆ ಆಗುವುದನ್ನು ಜ್ಞಾನ ಚಕ್ಷುಗಳಿಂದ ನೋಡುತ್ತಾರೆ.

6) ನದಿಗೆ ದಡಗಳು ಅನುಶಾಸನದಂತಿವೆ. ಒಂದು ವೇಳೆ ನದಿಯು ಬಯಲಿ ನಲ್ಲಿ ಹರಿದರೆ ಅದು ಒಣಗಿಹೋಗುತ್ತದೆ. ಅನುಶಾಸನದಿಂದಲೇ ಮನುಷ್ಯನ ಪ್ರಗತಿಯು ಸಾಧ್ಯ.

7) ನಾಲ್ಕು ರಸ್ತೆಗಳು ಕೂಡುವಲ್ಲಿ[ಸೇರುವಲ್ಲ] ಕೆಂಪು ದೀಪಗಳು ಪ್ರಯಾಣಿಕ ರಿಗೆ ಅನುಶಾಸನವನ್ನು ಬೋಧಿಸುತ್ತದೆ.

**ಅನುಶಾಸನ ಮತ್ತು ಶಿಷ್ಟಾಚಾರ:**

1. ಅನುಶಾಸನವೆಂದರೆ ನಮ್ಮ ರಾಷ್ಟ್ರ ಶಾಸನವನ್ನು ನಾವು ಅನುಸರಿಸುವು ದೆಂದರ್ಥ. ಅಥವಾ ನಾವೇ ನಮ್ಮ ಮೇಲಿನ ಹತೋಟಿಯನ್ನು ಇರಿಸುವುದೆನ್ನಬಹುದು. ದೇಶದಲ್ಲಿ ಕಾಲ, ಪರಿಸ್ಥಿತಿಗಳಿಗನುಸಾರವಾಗಿ ನಿಯಮಗಳನ್ನು ಮಾಡುತ್ತಾರೆ. ಇದ ರಿಂದ ಎಲ್ಲರೂ ಸುಖ ಶಾಂತಿಯಿಂದ ಇರಲು ಸಾಧ್ಯವಾಗುತ್ತದೆ. ಶಾಲೆಗಳಲ್ಲಿ ಬೇರೆ ಬೇರೆ ತರಗತಿಗಳಿರುತ್ತವೆ. ಪಿರಿಯಡ್‌ಗಳಿಗನುಸಾರವಾಗಿ ಉಪಾಧ್ಯಾಯರುಗಳು ತರ- ಗತಿಗಳನ್ನು ವ್ಯವಸ್ಥಿತವಾಗಿ ನಡೆಸುತ್ತಾರೆ. ಗಡಿಯಾರವು ಕಾಲವನ್ನು ಸರಿಯಾಗಿ ತೋರಿಸಿದರೆ ಮಾತ್ರ ಜನರು ಅದರ ಮೇಲೆ ವಿಶ್ವಾಸ ಇಡುತ್ತಾರೆ. ರೈಲು ಕಂಬಿ ಗಳ ಮೇಲೆ ಓಡುತ್ತದೆ. ಒಂದು ವೇಳೆ ಅದು ಒಂದು ಕಂಬಿಯನ್ನು ಬಿಟ್ಟು ಇನ್ನೊಂದು ಕಂಬಿಯ ಮೇಲೆ ಚಲಿಸಿದರೆ ಅಪಘಾತ ಉಂಟಾಗುತ್ತದೆ. ಅನುಶಾಸನದಿಂದ ಕ್ರಮ ಬದ್ಧತೆ ಉಂಟಾಗುತ್ತದೆ. ಉದ್ಯಾನವು ಇತರರ ಕಣ್ಣಿಗೆ ತಂಪು ನೀಡುತ್ತದೆ. ಅದನ್ನು ಕ್ರಮಬದ್ಧವಾಗಿ ಬೆಳೆಸುತ್ತಾರೆ. ಕಾಡಿನಲ್ಲಿ ಗಿಡಗಳು ಕ್ರಮಬದ್ಧವಾಗಿರುವುದಿಲ್ಲ. ಅವು ಜನರ ಪ್ರಯಾಣಕ್ಕೆ ತಡೆಯನ್ನುಂಟುಮಾಡುತ್ತವೆ.

2. ಮಕ್ಕಳು ತಂದೆ ತಾಯಿಯರ ಸಲಹೆಯನ್ನು ಪಾಲಿಸಿಕೊಂಡು ಉನ್ನತಿ ಹೊಂದಬೇಕು. ವಿವೇಕದಿಂದಲೇ ಜ್ಞಾನವು ಹೆಚ್ಚುತ್ತದೆ. ಇದು ಕೇವಲ ಅನುಶಾಸನ ವನ್ನು ಪಾಲಿಸುವುದರಿಂದ ಮಾತ್ರ ಸಾಧ್ಯ.

3. ರೈಲುಗಾಡಿಗಳಲ್ಲಿ ಏರುವಾಗ, ರಸ್ತೆಗಳಲ್ಲಿ, ದೇವಸ್ಥಾನಗಳಲ್ಲಿ ಅನುಶಾಸನವನ್ನು ಆಚರಿಸುವುದರಿಂದ ಶಿಷ್ಟಾಚಾರವನ್ನು ಪಾಲಿಸಿದಂತಾಗುವುದಲ್ಲದೆ, ದುರ್ಘಟನೆ (ಅಪಘಾತ)ಗಳು ಉಂಟಾಗುವುದಿಲ್ಲ.

4. ಶಿಷ್ಟಾಚಾರವೆಂದರೆ ಶ್ರೇಷ್ಠ ವ್ಯಕ್ತಿಗಳ ಆಚರಣೆ. ಹಿರಿಯರು ಮಕ್ಕಳಿಗೆ ಸತ್ಯ ಹೇಳುವುದು, ಕದಿಯದಿರುವುದು ಇತ್ಯಾದಿ ನೀತಿಯನ್ನು ತಿಳಿಸಬೇಕು. ಅವರು ತಪ್ಪು ಮಾರ್ಗದಲ್ಲಿ ನಡೆಯದಂತೆ ನೋಡಿಕೊಳ್ಳುವುದು ಹಿರಿಯರ ಕರ್ತವ್ಯ. ಒಳ್ಳೆಯ ವ್ಯಕ್ತಿಗಳನ್ನು ಸಮಾಜವು ಗೌರವಿಸುತ್ತದೆ. ಈ ಗೌರವವನ್ನು ಹೊಂದುವಂತೆ ಮಾಡುವುದು ಹಿರಿಯರ ಮೇಲಿರುವ ಭಾರ [ಕರ್ತವ್ಯ]. ಭಾರತೀಯ ಸಂಸ್ಕೃತಿಯನ್ನು ಹೊರಗಿನಿಂದ ನೋಡುವುದಲ್ಲದೆ ಆಚರಣೆಗೂ ತರಬೇಕು.

ಶಿಷ್ಟ ಸಂಪ್ರದಾಯವನ್ನು ತಿಳಿಸುವ ಸೂಕ್ತಿಯೊಂದು ಹೀಗಿದೆ.
ಮನಸಿ ವಚಸಿ ಕಾಯೇ ಪುಣ್ಯ ಪೀಯೂಷ ಪೂರ್ಣಾಃ।
ಸ್ತ್ರಿಭುವನಮುಪಕಾರ ಶ್ರೇಣಿಭಿಃ ಪ್ರೀಣಯಂತಃ॥
ಪರಗುಣ ಪರಮಾಣೂನ್ ಪರ್ವತೀಕೃತ್ಯ ನಿತ್ಯಂ।
ನಿಜ ಹೃದಿ ವಿಕಸಂತಃ ಸಂತಿ ಸಂತಃ ಕಿಯಂತಃ॥ —ಭರ್ತೃಹರಿ.

ಯಾರು ತಮ್ಮ ಮನ, ವಚನ, ಕಾಯಗಳಲ್ಲಿ ಪುಣ್ಯಾಮೃತ ತುಂಬಿದ್ದು ಲೋಕವನ್ನೇ ತಮ್ಮ ಉಪಕಾರ ಪರಂಪರೆಗಳಿಂದ ಸಂತೋಷ ಪಡಿಸುತ್ತಾರೋ, ಪರರಲ್ಲಿರುವ ಪರಮಾಣುವಿನಷ್ಟು ಗುಣವನ್ನೇ ಪರ್ವತಾಕಾರ ಮಾಡಿ ಹೊಗಳುತ್ತಾರೋ ಹೀಗೆ ನಿತ್ಯವೂ ತಮ್ಮ ಮನಸ್ಸಿನಲ್ಲಿ ಆನಂದಪಡುವ ಮಹಾ ಪುರುಷರು ಎಷ್ಟು ಮಂದಿ ಸಿಗಬಹುದು ?

ಅಹಿಂಸಾ ಧರ್ಮಕ್ಕೆ ಜೈ! ವಿಶ್ವ ಧರ್ಮಕ್ಕೆ ಜೈ !

## ರಾಷ್ಟ್ರ ಭಾಷೆ ಮತ್ತು ನಮ್ಮ ಕರ್ತವ್ಯ:

ರಾಷ್ಟ್ರ ಭಾಷೆಯೆಂದರೆ ಇಡೀ ದೇಶದ ಸಂಪರ್ಕಗಳಿಗಾಗಿ ಇರುವ ಒಂದು ಭಾಷೆ. ಭಾರತದ ರಾಷ್ಟ್ರ ಭಾಷೆ ಹಿಂದಿ. ಭಾರತೀಯರು ಹೆಚ್ಚಾಗಿ ಹಿಂದಿ ಹಾಗೂ ಇಂಗ್ಲೀಷ್ ಭಾಷೆಗಳಲ್ಲೇ ವ್ಯವಹರಿಸುತ್ತಾರೆ. ಜಗತ್ತಿನ ಹೆಚ್ಚು ಜನ ಮಾತನಾಡುವ ಭಾಷೆಗಳಲ್ಲಿ ಹಿಂದಿಗೆ ನಾಲ್ಕನೆಯ ಸ್ಥಾನ ಇದೆ.

ಇಂಗ್ಲೀಷ್ ಭಾಷೆ ರಾಷ್ಟ್ರಭಾಷೆಯಾಗಲಾರದು ಏಕೆಂದರೆ ಎಲ್ಲಾ ಜನರು ಇಂಗ್ಲೀಷಿನಲ್ಲಿ ಮಾತನಾಡುವುದಿಲ್ಲ. [ಸಂಪರ್ಕ ಭಾಷೆಯನ್ನಾಗಿ ಅದನ್ನು ಇಟ್ಟುಕೊಳ್ಳಲಿಲ್ಲ]. ಏಕೆಂದರೆ ಇದು ಕೇವಲ ಒಂದೆರಡು ಶತಮಾನಗಳಿಂದ ಈಚೆಗೆ ಭಾರತದಲ್ಲಿ ಬೆಳೆದುಬಂದಿದೆ. ಆದರೆ ಇಂದು ಇಂಗ್ಲೀಷಿಗೆ ಶಾಲಾಕಾಲೇಜುಗಳಲ್ಲಿ ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಹಿಂದಿಗೆ ಪ್ರಾಶಸ್ತ್ಯ ಕೊಟ್ಟರೆ ಇದು ಕೇವಲ ಐದು ವರ್ಷಗಳಲ್ಲಿ ಇಂಗ್ಲೀಷ್ ಭಾಷೆ 150 ವರ್ಷಗಳಲ್ಲಿ ಹೊಂದಿದ ಪ್ರಗತಿಯನ್ನು ಹೊಂದಬಲ್ಲದು. ಯಾಕೆಂದರೆ ಇಂಗ್ಲೀಷಿನಲ್ಲಿ ಸ್ಪೆಲ್ಲಿಂಗ್ ಕಲಿಯಲು ತುಂಬಾ ಸಮಯ ತೆಗೆದು

ಕೊಳ್ಳುತ್ತದೆ. ಆದರೆ ಹಿಂದಿಯಲ್ಲಿ ಅದಿಲ್ಲ. ಭಾರತೀಯ ಸಂಸ್ಕೃತಿಯನ್ನು ನಾಶ ಮಾಡಲು ವಿದೇಶೀಯರು ಅದೆಷ್ಟೋ ಪ್ರಯತ್ನಿಸಿದರೂ ಜಯಶೀಲರಾಗಲಿಲ್ಲ.

ವಕೀಲರು ಇಂಗ್ಲೀಷಿನಲ್ಲಿ ವಕಾಲತನ್ನು ನಡೆಸುತ್ತಾರೆ. ಏಕೆಂದರೆ ಅವರ ಮನಸ್ಸಿನಲ್ಲಿ ರಾಷ್ಟ್ರೀಯತೆಯ ಬಗ್ಗೆ ಯಾವುದೇ ಪ್ರೀತಿಯ ಭಾವನೆಗಳಿಲ್ಲ. ಭಗತ್ ಸಿಂಗರು ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಿದರು. ಅಂಥ ದೇಶದಲ್ಲಿರುವ ನಾವು ರಾಷ್ಟ್ರಭಾಷೆಯನ್ನು ಎಲ್ಲಾ ಕಡೆಗಳಲ್ಲೂ ಆಚರಣೆಗೆ ತರುವುದು ಕಷ್ಟದ ವಿಷಯವಲ್ಲ.

ಹಿಂದಿಯು ಪ್ರಾಕೃತ, ಸಂಸ್ಕೃತಗಳ ಅಪಭ್ರಂಶರೂಪವಾಗಿದೆ. ಇವರಲ್ಲಿ ಭಾರತೀಯ ಸಂಸ್ಕೃತಿ, ಇತಿಹಾಸಗಳು ಅಡಕವಾಗಿವೆ. ಅಂಥ ಭಾಷೆಯನ್ನು ನಾವು ಗೌರವಿಸಬೇಕು. ಭಾಷೆಯಿಂದ ಆಚಾರ-ವಿಚಾರಗಳು ನಮ್ಮ ಅರಿವಿಗೆ ಬರುತ್ತವೆ. ಭಾರತೀಯರಾಗಿದ್ದು ಭಾರತದ ಭಾಷೆಯನ್ನು ಗೌರವಿಸುವುದು ನಮ್ಮೆಲ್ಲರ ಕರ್ತವ್ಯ.

ವಿದೇಶಿಯೇನು ಭಾರತದ ಸಂದರ್ಶನಕ್ಕೆ ಬಂದರೆ ನಾವು ಅವನ ಭಾಷೆಯನ್ನು ಚೆನ್ನಾಗಿ ಅರಿತಿರುವುದಿಲ್ಲ. ಭಾರತದಲ್ಲಿ ಹಲವು ಭಾಷೆಗಳಿವೆ, ಆದರೆ ಇವರೆಲ್ಲರ ಭಾಷೆ ಒಂದೇ ಆಗಿಲ್ಲ ಎಂದು ಪರದೇಶೀಯರು ತಿಳಿದುಕೊಳ್ಳುತ್ತಾರೆ. ನಮ್ಮ ಭಾಷೆಯು ಸುಂದರ ಹಾಗೂ ಒಳ್ಳೆಯ ಪರಂಪರೆಯಿಂದ ಕೂಡಿದೆ. ಅಂತಹ ಭಾಷೆಯನ್ನು ಯಾವಾಗ ಎಲ್ಲರೂ ಮಾತನಾಡಲು ಪ್ರಯತ್ನಿಸಿ ಸಂತೋಷಪಡುತ್ತಾರೋ ಆಗಲೇ ಭಾರತದ ರಾಷ್ಟ್ರ ಭಾಷೆಯ ಉನ್ನತಿ ಸಾಧ್ಯ.

## ಸಮಾಜ ವಾದ

ಸಮಾಜವಾದವು ಇತ್ತೀಚೆಗೆ ಬೆಳೆದು ಬಂದ ಒಂದು ರೀತಿಯ ಆರ್ಥಿಕ ವ್ಯವಸ್ಥೆ. ಈ ವ್ಯವಸ್ಥೆಯ ಆಧಾರದಲ್ಲಿ ಕೆಲವು ದೇಶಗಳ ಆಡಳಿತವು ನಡೆಯುತ್ತದೆ. ಇದರಿಂದ ಒಳ್ಳೆಯ ರೀತಿಯ ಸಮಾಜದ ವ್ಯವಸ್ಥೆಯು ಸಾಧ್ಯ. ಆದರೆ ಈವರೆಗೆ ವ್ಯವಸ್ಥೆಯು ಪ್ರಯೋಗಾತ್ಮಕವಾಗಿಯೇ ಮುಂದುವರಿದಿದೆ. ಆದುದರಿಂದ ಹಲವು ರೀತಿಯ ಬದಲಾವಣೆಗಳನ್ನು ಇವರಲ್ಲಿ ತರಬೇಕು.

ಆದರೆ ಭಾರತೀಯರಿಗೆ ಸಮಾಜವಾದವೆಂಬುದು ಹೊಸ ಶಬ್ದವೇನಲ್ಲ. 'ಸಾಮ್ಯಂ ಮೇ ಸರ್ವಭೂತೇಷು' ಎಂಬಂತೆ ಜೈನ ಸಂಸ್ಕೃತಿಯಲ್ಲಿ ಇದು ಅತಿ ಹಳೆಯ ವಿಚಾರವಾಗಿದೆ. ವೃಷಭ ಪ್ರಥಮ ತೀರ್ಥಂಕರ ದೇವರ ಹಿಂದಿನಿಂದಲೇ ಈ ಸಮಾಜವಾದವು ಭಾರತದಲ್ಲಿ ಬೆಳೆದು ಬಂದಿದೆ. 'ಸಮಾಜ' ಶಬ್ದವು ಭಾರತೀಯವಾಗಿದೆ. ಎಲ್ಲಾ ಆಚಾರ-ವಿಚಾರಗಳನ್ನೊಳಗೊಂಡ ಜನರ ಗುಂಪನ್ನು ಸಮಾಜವೆಂದು ಕರೆದಿದ್ದಾರೆ. ಖಡ್ಗ ಸಮಾಜವನ್ನು [ದೇಶವನ್ನು] ರಕ್ಷಿಸುವಲ್ಲಿ ನೆರವಾಗುತ್ತದೆ. ಎಲ್ಲರೂ ಒಂದಲ್ಲ ಒಂದು ರೀತಿಯಿಂದ ಸಮಾಜವನ್ನು ಕಟ್ಟಲು ನೆರವಾಗುತ್ತಾರೆ.

ದ್ವಾವಿಮ್ ಪುರುಷ್ ಲೋಕೇ ಸೂರ್ಯಮಂಡಲ ಮೇದಿನೀ ।
ಪರಿವ್ರಾಟ್ ಯೋಗಯುಕ್ತಶ್ಚ ರಣೇಚಾಭಿ ಮುಖೋಹತಃ ॥

ಒಳ್ಳೆಯ ವಿಚಾರಗಳನ್ನು ಪ್ರಚಾರ ಮಾಡುವ ಸಾಧುಗಳೂ, ಯುದ್ಧಭೂಮಿಯಲ್ಲಿ ಹೋರಾಡುವವರೂ ಸ್ವರ್ಗವನ್ನು ಹೊಂದುತ್ತಾರೆ.

ಸಮಾಜವು ಒಳ್ಳೆಯ ವ್ಯಕ್ತಿಗಳನ್ನು ನಿರ್ಮಿಸುತ್ತದೆ, ಆದರೆ ಇಂದು ಜನರಲ್ಲಿ ಸ್ವಾರ್ಥವು ಹೆಚ್ಚಾಗುತ್ತಿದೆ. ಆದರಿಂದಾಗಿ ಸಮಾಜಕ್ಕೆ, ರಾಷ್ಟ್ರಕ್ಕೆ ಅವರಿಂದ ಸಿಗ ಬೇಕಾದ ಸೇವೆಯು ಸಿಗುವುದಿಲ್ಲ. ಸಮಾಜಕ್ಕೆ, ರಾಷ್ಟ್ರಕ್ಕೆ ನಮ್ಮಿಂದಾಗುವ ಸೇವೆ ಯನ್ನು ಮಾಡಬೇಕು. ಒಬ್ಬರಿಗೊಬ್ಬರು ಸಹಾಯ ಮಾಡಬೇಕೇ ಹೊರತು ಒಬ್ಬ ರನ್ನೊಬ್ಬರು ದ್ವೇಷಿಸಬಾರದು. ವೃಷಭ ತೀರ್ಥಂಕರರ ಕಾಲದಲ್ಲಿ ಜನರೆಲ್ಲರೂ ಸುಖಿ ಗಳಾಗಿದ್ದರು. ಒಬ್ಬರನ್ನೊಬ್ಬರು ಯಾವುದೇ ವಿಷಯಕ್ಕೂ ಯಾಚಿಸುತ್ತಿರಲಿಲ್ಲ.

ಸಮಾಜವಾದವನ್ನು ಉಳಿಸಿಕೊಳ್ಳಲು ಉಮಾಚಾರ್ಯರು ಉಪದೇಶ ನೀಡಿ ದ್ದಾರೆ. ಅದು ಹೀಗಿದೆ–

'ಪರಸ್ಪರೋಪಗ್ರಹೋ ಜೀವಾನಾಂ' 5/21

'ಅಲ್ಪಾರಂಭ ಪರಿಗ್ರಹತ್ವಂ ಮಾನುಷಸ್ಯ' 5/17

ಒಬ್ಬರಿಗೊಬ್ಬರು ಸಹಾಯ ಮಾಡಬೇಕು. ಪರಿಗ್ರಹವನ್ನು ಇಟ್ಟುಕೊಳ್ಳು ವುದರಿಂದ ಪಾಪ ಮಾಡಿದಂತಾಗುತ್ತದೆ. ಆದುದರಿಂದ ಅಪರಿಗ್ರಹವನ್ನು ಆಚರಿಸ ಬೇಕು. ತಮ್ಮಲ್ಲಿರುವ ವಸ್ತುಗಳನ್ನು ಹಂಚಿಕೊಂಡು ತಮಗೆ ಬೇಕಾದಷ್ಟು ವಸ್ತು ಗಳನ್ನು ಮಾತ್ರ ಇಟ್ಟುಕೊಳ್ಳಬೇಕು. ಪ್ರತಿಯೊಬ್ಬನಿಗೂ ಎಲ್ಲಾ ವಸ್ತುಗಳು ಸಿಕ್ಕಿ ದರೇನೇ ಅದು ಸಮಾಜ ವಾದವೆನಿಸುತ್ತದೆ.

**ಸಾತ್ವಿಕ ಜೀವನ:**

1. 'ಮಹಾವೀರ' ಹಾಗೂ 'ಋಷಭದೇವ' ತೀರ್ಥಂಕರರು ಸರಳ ಜೀವನ ನಡೆಸುತ್ತಿದ್ದರು. ಹಾಗೆಯೇ ನಾವು ಸಹ ಜೀವನದಲ್ಲಿ ಒಳ್ಳೆಯ ವಿಚಾರಗಳನ್ನಳ ವಡಿಸಿಕೊಂಡು ಸರಳ ಜೀವನವನ್ನು ನಡೆಸಬೇಕು.

2. ಮಹಾಪುರುಷರ ಸಾತ್ವಿಕ ಜೀವನದ ಧ್ಯೇಯಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು.

3. ಸಾತ್ವಿಕತೆಯೆಂದರೆ ಅಹಿಂಸೆಯ ಪಾಲನೆ. ಇದರ ಹೊರತು ಚಾರಿತ್ರ್ಯ ವುಂಟಾಗುವುದಿಲ್ಲ.

4. ಸಾತ್ವಿಕತೆಯು ಜನರಿಗೆ ಉತ್ತಮ ಸಂಸ್ಕಾರವನ್ನೊದಗಿಸುತ್ತದೆ.

5. ನಾವು ನಮ್ಮ ನಡೆನುಡಿ, ಆಹಾರ ವಿಹಾರ ಹಾಗೂ ಚಾರಿತ್ರ್ಯ (ನಡತೆ) ದಲ್ಲಿ ಸಾತ್ವಿಕ ಪ್ರವೃತ್ತಿಯನ್ನು ತೋರಿಸಬೇಕು.

6. ದೀರ್ಘಕಾಲ ಯೋಚನೆಯನ್ನು ಮಾಡಬೇಕು. ಮಾಡಿ ತೋರಿಸುವ ಸಂಕಲ್ಪವನ್ನಿಡಬೇಕು.

7. ಜೀವನದಲ್ಲಿ ಸಾತ್ವಿಕತೆಯನ್ನೇ ಅವಲಂಬಿಸಿರಬೇಕು.

8. ಯಾರಿಗೂ ತೊಂದರೆ ಕೊಡಬಾರದು. ನಮ್ಮಷ್ಟಕ್ಕೆ ನಾವು ಇದ್ದು ಸಾಧ್ಯವಾದರೆ ಉಳಿದವರಿಗೆ ಸಹಾಯ ಮಾಡಬೇಕು.

ನಾವು ಸಾತ್ವಿಕ ಜೀವನ ನಡೆಸಲು ಈ ನಿಯಮಗಳನ್ನು ಪಾಲಿಸಬೇಕು.

**ಸುಖವೆಲ್ಲಿದೆ?**

1. ಜೀವನದಲ್ಲಿ ದುಃಖವೇ ಹೆಚ್ಚಾಗಿದ್ದು ಸುಖ ಕಡಿಮೆಯಾಗಿದೆ. ಇವೆರಡನ್ನೂ ಒಂದೇ ರೀತಿ ಕಾಣುವವನೇ ಸುಖಿಯೆನಿಸುತ್ತಾನೆ.

2. ಮನಸ್ಸು ಮಾತುಗಳನ್ನು ಒಳ್ಳೆಯ ವಿಷಯಗಳಲ್ಲಿ ತೊಡಗಿಸಬೇಕು ಇದಕ್ಕಾಗಿ ಧ್ಯಾನಾಸಕ್ತನಾಗಿರಬೇಕು. ಇದರಿಂದ ಸುಖ ಸಿಗುತ್ತದೆ.

3. ಉತ್ತಮ ವಿಷಯಗಳಲ್ಲಿ ಗಮನ ಹರಿಸಬೇಕು. ನಮಗೆ ಒಳಿತಾಗುವ ಕೆಲಸದಲ್ಲಿ ಮಗ್ನರಾಗಬೇಕೇ ಹೊರತು ಕೆಟ್ಟ ಕೆಲಸಗಳಲ್ಲಿ ಅಲ್ಲ.

4. ನಾವು ಧ್ಯಾನಾಸಕ್ತರಾಗಿ ಉತ್ತಮ ವಿಚಾರದ ಬಗ್ಗೆ ಯೋಚಿಸಿದರೆ ಸುಖ ಸಿಗುತ್ತದೆ.

5. ಜೀವನದಲ್ಲಿ ತೃಪ್ತಿ ಹೊಂದಿದರೇನೆ ಸುಖ ಸಿಗುತ್ತದೆ. ಇಲ್ಲವಾದರೆ ಸಿಗುವುದಿಲ್ಲ.

6. ಸುಖವು ಯೋಗದಲ್ಲಿಯೇ ಹೊರತು ಭೋಗದಲಿಲ್ಲ.

7. ಸುಖವು ಆತ್ಮದಲ್ಲಿಯೇ ಹೊರತು ಕರ್ಮದಲಿಲ್ಲ. ಇದನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು.

8. ಸ್ವತಂತ್ರತೆಯೇ ಸುಖ, ಪರಾಧೀನತೆಯೇ ದುಃಖ. ಸ್ವತಂತ್ರತೆಯೆಂದರೆ ಆತ್ಮಾಧೀನನಾಗಿ ಪರಾವಲಂಬನೆ ತ್ಯಜಿಸುವುದು ಎಂದರ್ಥ.

9. ಸುಖ ಹೊಂದಲು ಇತರರಿಗೆ ಸಹಾಯ ಮಾಡಬೇಕು. ಇದರಿಂದಾಗಿ ಸುಖದ ಅನುಭವ ಉಂಟಾಗುತ್ತದೆ.

**ಮಾನವನ ಪತನಕ್ಕೆ ಕಾರಣ ಮದ್ಯಪಾನ**

1. ಉನ್ನತಿಯಾಗುವುದಕ್ಕೆ ಪ್ರಯತ್ನಿಸುವುದು ಮಾನವನ ಲಕ್ಷಣ. ಆದರೆ ಕೆಲವರು ಅವನತಿಯತ್ತ ಸಾಗುತ್ತಾರೆ, ಅದಕ್ಕೆ ಕಾರಣವೇ ಮದ್ಯಪಾನ. ಆದುದರಿಂದ ಅದನ್ನು ಬಿಡಬೇಕು.

2. ವಸ್ತುಗಳನ್ನು ಕೊಳೆಯಿಸಿ ಮದ್ಯ ತಯಾರಿಸುತ್ತಾರೆ. ಆದುದರಿಂದ ಅದು ಮಾಂಸಾಹಾರದಂತೆ ಆಗುತ್ತದೆ. ಇದರಿಂದ ಉನ್ಮಾದತೆಯುಂಟಾಗುತ್ತದೆ. ಸ್ನಾಯುಗಳ ಮೇಲೆ ದುಷ್ಪರಿಣಾಮವುಂಟಾಗುತ್ತದೆ.

3. ಮದ್ಯವ್ಯಸನಿಗಳು ಅದನ್ನು ಬಿಡಲೊಪ್ಪುವುದಿಲ್ಲ. ಅದು ಅವನನ್ನು ಅಧಃಪತನಕ್ಕೆ ತಳ್ಳುತ್ತದೆ.

4. ಇಂಗ್ಲೀಷರು ಸಂಸ್ಕೃತಿಯನ್ನು ಒಳ್ಳೆಯದೆನ್ನುತ್ತಾರೆ. ಆದರೆ ಮದ್ಯ ಪಾನದ ಬಗ್ಗೆ ಹೆಮ್ಮೆ ಪಡುತ್ತಾರೆ. ಆದರೆ ಈ ಅಭ್ಯಾಸವನ್ನು ನಾವು ಬಿಡಬೇಕು.

5. ಮದ್ಯವು ಸಪ್ತ ವ್ಯಸನಗಳಲ್ಲಿ ಮೊದಲ ಸ್ಥಾನವನ್ನು ಪಡೆದಿದೆ. ಆದು ದರಿಂದ ಅದನ್ನು ದೂರೀಕರಿಸಬೇಕು.

6. ಶರಾಬಿನಲ್ಲಿ ಬೆರೆಸಿರುವ ಸ್ಪಿರಿಟ್, ವಾರ್ನಿಷ್ ಇತ್ಯಾದಿಗಳು ಮಾನವ ನನ್ನು ಬಲಿತೆಗೆದುಕೊಳ್ಳುತ್ತವೆ.

7. ಇದು ನಮ್ಮನ್ನು ಬಲಹೀನರನ್ನಾಗಿಸುತ್ತದೆ. ಎಲ್ಲೆಡೆ ಸಂಸ್ಕಾರವನ್ನೂ ನಾಶ ಮಾಡುತ್ತದೆ.

8. ಶರಾಬಿನಿಂದ ಮನುಷ್ಯನ ಜೀವನ ನಾಶ ಹೊಂದುತ್ತದೆ. ಆದುದರಿಂದ ಅದನ್ನು ತ್ಯಜಿಸಬೇಕು.



6243

**ವಿದ್ಯಾನಂದ ವಾಣಿ**

## ಏಕಾಗ್ರತೆ ಪಡೆಯುವ ವಿಧಾನ

**ಕಪಿಯ ಮನಸ್ಸು ಏಕಾಗ್ರತೆ ಆಗುವಂತಿಲ್ಲ. ಆದರೆ ಹಣ್ಣಿರುವ ಮರದ ಮೇಲೆ ಅದರ ಮನಸ್ಸು ಏಕಾಗ್ರತೆ ಪಡೆಯು ವುದು. ಅದೇ ರೀತಿ 'ಶ್ರುತ' ಅಂದರೆ ಶಾಸ್ತ್ರವನ್ನು ಕೇಳುತ್ತಿರು ವಾಗ ಮನುಷ್ಯ ಏಕಾಗ್ರತೆ ಪಡೆಯುವ ಸಂಭವವಿದೆ. ಪ್ರತಿ ನಿತ್ಯ ಮನುಷ್ಯ ಶಾಸ್ತ್ರವನ್ನು ಓದಬೇಕು ಅಥವಾ ಕೇಳಬೇಕು.**



## ವಿದ್ಯಾನಂದ ಮಂಥನ

# 10. ಭೇದ ವಿಜ್ಞಾನ: ಆತ್ಮಪ್ರತೀತಿಯ ಸಾಧ್ಯವು, ಸ್ವಾನುಭೂತಿಯ ವಿಜ್ಞಾನ.

(ಪ್ರಸ್ತುತ ಸಂದರ್ಶನವನ್ನು ಹಿಂದಿ ಭಾಷೆಯಲ್ಲಿ ಸರ್ವಾಧಿಕ ಪ್ರಸಾರವುಳ್ಳ 'ತೀರ್ಥಂಕರ' ಮಾಸಿಕದ ಸಂಪಾದಕರಾದ ಡಾ. ನೇಮಿಚಂದ್ರ ಜೈನ, ಎಂ.ಎ.,ಪಿ.ಎಚ್.ಡಿ.ಯವರು ಮಾಡಿರುತ್ತಾರೆ. ಈ ರೀತಿಯ ಅನೇಕ ಸಂದರ್ಶನಗಳು ಹಿಂದಿ ಭಾಷೆಯಲ್ಲಿ ಹೊರಟಿವೆ. ಪ. ಪೂ. ಮುನಿಶ್ರೀಗಳೊಂದಿಗೆ ನಡೆದ ಅಂತಹ ಒಂದು ಸಂದರ್ಶನವನ್ನು ಇಲ್ಲಿ ಕೊಡಲಾಗಿದೆ) —ಸಂ.

ಡಾ. ನೇಮಿಚಂದ್ರ ಜೈನ್— ಈ ದಿನ ನಾನು ಒಂದು ಮಹತ್ತ್ವಪೂರ್ಣ ವಿಷಯದ ಬಗ್ಗೆ ನಿಮ್ಮಲ್ಲಿ ಚರ್ಚಿಸುತ್ತೇನೆ. ಜೈನ ಧರ್ಮದ ಒಂದು ಒಳ್ಳೆಯ ಆಚರಣೆ ಅಥವಾ ಅದರ ವಿಶಿಷ್ಟ ದೃಷ್ಟಿಯು ಭೇದ ವಿಜ್ಞಾನವಾಗಿದೆ. ಯಾವುದೇ ಜಪ ಅಥವಾ ವ್ರತವು ಭೇದ ವಿಜ್ಞಾನವನ್ನು ಒಳಗೊಂಡಿಲ್ಲವಾದರೆ ಅದು ಮಹತ್ತ್ವಹೀನ. ಆದುದರಿಂದ ತಾವು ದಯವಿಟ್ಟು ಭೇದ ವಿಜ್ಞಾನದ ಬಗ್ಗೆ ಸರಳ ಶಬ್ದಗಳಲ್ಲಿ ವಿವರಿಸುವಿರಾ?

ಏಲಾಚಾರ್ಯ ಮುನಿ ವಿದ್ಯಾನಂದ— ಜಗತ್ತಿನಲ್ಲಿ ಎಷ್ಟೇ ಪ್ರಾಣಿಗಳಿರಲಿ, ಉದಾಹರಣೆಗೆ ಮನುಷ್ಯ ಅಥವಾ ಪ್ರಾಣಿ. ಭೇದ ವಿಜ್ಞಾನವು ಎಲ್ಲದರ ಸ್ವಭಾವವಾಗಿದೆ. ನೀವು ಅದು ಹೇಗೆ? ಪ್ರಮಾಣವಿದೆಯೆ? ಎಂದು ಕೇಳಬಹುದು. ಉಪ್ಪಿನ ರಾಶಿಯ ಜೊತೆಗೆ ಸಕ್ಕರೆಯನ್ನು ಮಿಶ್ರ ಮಾಡಿದಾಗ ಅದನ್ನು ತಿನ್ನಲು ಇರುವೆ ಬಂದರೆ ಅದು ಸಕ್ಕರೆಯನ್ನು ತಿಂದು ಉಪ್ಪನ್ನು ಅಲ್ಲೇ ಬಿಡುತ್ತದೆ. ಇದೇ ಭೇದ ವಿಜ್ಞಾನಕ್ಕೊಂದು ಉದಾಹರಣೆ. ಇರುವೆಗೆ ಯಾವುದನ್ನು ತಿನ್ನಬೇಕು, ಯಾವುದನ್ನು ತಿನ್ನಬಾರದೆಂಬ ಬುದ್ಧಿ ಇದೆ. ಹಾಗೆಯೇ ಮನುಷ್ಯ, ಪಶು-ಪಕ್ಷಿಗಳಲ್ಲೂ ಆ ಜ್ಞಾನ್ಮೆಯನ್ನು ಕಾಣಬಹುದು.

ನೇ— ಭೇದದ ಅರ್ಥವೇನು?

ವಿ— ಭೇದವು ಬೇರೆ ಬೇರೆ ವಸ್ತುಗಳಲ್ಲಿದೆ. ಉದಾಹರಣೆಗೆ ಉಪ್ಪು ಮತ್ತು ಸಕ್ಕರೆ ಎರಡೂ ಬಿಳಿಯಾಗಿದ್ದರೂ ಅವೆರಡರಲ್ಲಿ ವ್ಯತ್ಯಾಸವಿದೆ.

ನೇ— ವಸ್ತುಗಳ ಸ್ವರೂಪಗಳನ್ನು ಬೇರೆ ಬೇರೆಯಾಗಿ ತಿಳಿಸುವ ವಿಜ್ಞಾನಕ್ಕೆ ಪಾರ್ಥಕ್ಯ ವಿಜ್ಞಾನವೆನ್ನುತ್ತಾರೆಯೇ?

ವಿ— ಆಚಾರ್ಯರು ದ್ರವ್ಯದ ಆರು ಪ್ರಭೇದಗಳನ್ನು ಹೇಳಿರುತ್ತಾರೆ. ಅವು ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ. ಇವೆಲ್ಲವು ಬೇರೆ ಬೇರೆ ದ್ರವ್ಯ(ವಸ್ತು)ಗಳಾಗಿವೆ ಮತ್ತು ಒಂದನ್ನೊಂದು ಅವಲಂಬಿಸಿಲ್ಲ. ಹೀಗೆ ಪುದ್ಗಲ ದ್ರವ್ಯದ ಪರ್ಯಾಯ ರೂಪದಲ್ಲಿ ಅನೇಕ ಭೇದಗಳಿವೆ. ರೂಪ, ರಸ, ಗಂಧ (ಸುವಾಸನೆ) ಮತ್ತು ಬಣ್ಣ ಒಂದೇ ತರಹವಿದ್ದರೂ ಅವುಗಳು ವಸ್ತುಗಳಾಗಿವೆ.

ಆಚಾರ್ಯರು, ವಿಜ್ಞಾನಿಗಳು, ಅವುಗಳನ್ನೆಲ್ಲಾ ಬೇರೆ ಬೇರೆಯಾಗಿ ವಿಂಗಡಿಸಿದ್ದಾರೆ. ಜನರಿಗೆ ಗಂಧದ ಕೊರಡು ಕಟ್ಟಿಗೆಯಾಗಿದ್ದರೂ ಅದರ ಬೆಲೆ ಇತರ ಕಟ್ಟಿಗೆಗಿಂತಲೂ ಹೆಚ್ಚಾಗಿದೆ.

ನೇ– ಜನರಿಂದ ಅಸಲಿ ಮತ್ತು ನಕಲಿಗಳ ವ್ಯತ್ಯಾಸ ಗೊತ್ತಾಗದಿದ್ದರೆ ವ್ಯವಹಾರವಿದ್ದರೂ ಅವ್ಯವಸ್ಥೆ ಉಂಟಾಗುತ್ತದಲ್ಲವೆ?

ವಿ– ವ್ಯತ್ಯಾಸ ಕಂಡುಹಿಡಿಯಲಾಗದಿದ್ದರೆ ವ್ಯವಹಾರಗಳನ್ನು ಮಾಡಲು ಸಾಧ್ಯವಿಲ್ಲ.

ನೇ– ಆತ್ಮ ಮತ್ತು ಶರೀರದಲ್ಲಿರುವ ವ್ಯತ್ಯಾಸಗಳೇನು?

ವಿ– ಈಗ ನಾವು ಭೇದ ವಿಜ್ಞಾನದಿಂದ ಆಧ್ಯಾತ್ಮದತ್ತ ಬರುತ್ತಿದ್ದೇವೆ. ವಿಶ್ವದ ಎಲ್ಲಾ ವಸ್ತುಗಳಿಂದಲೂ ನನ್ನ ಆತ್ಮವು ಬೇರೆ ಮತ್ತು ಸ್ವತಂತ್ರವಾಗಿದೆ ಎಂದು ಅಮೃತ-ಚಂದ್ರಾಚಾರ್ಯರು ಸ್ಪಷ್ಟ ಮಾತುಗಳಿಂದ ಹೇಳಿರುತ್ತಾರೆ. ಎಲ್ಲಿಯ ವರೆಗೆ ಆತ್ಮವು ಎಲ್ಲಾ ವಸ್ತುಗಳನ್ನೂ (ಪದಾರ್ಥಗಳನ್ನೂ) ಬೇರೆ ಬೇರೆಯಾಗಿ ವಿಂಗಡಿಸಿ ಅವುಗಳ ಸ್ವರೂಪದ ಪರಿಚಯವನ್ನು ಪಡೆಯುವುದಿಲ್ಲವೋ ಅಲ್ಲಿಯ ವರೆಗೆ ಸಂಸಾರದಿಂದ ಜೀವನಿಗೆ [ಆತ್ಮ] ಮುಕ್ತಿ ಹೊಂದಲು ಸಾಧ್ಯವಿಲ್ಲ. ಆದುದರಿಂದ ಭೇದ ವಿಜ್ಞಾನವಿದ್ದರೂ ಕೂಡಾ ನನ್ನ ಆತ್ಮಕ್ಕೆ ಬೇರೆ ಆತ್ಮದೊಂದಿಗೆ ಯಾವುದೇ ಸಂಬಂಧವಿಲ್ಲ. ನನ್ನ ಕರ್ಮವನ್ನು ಅನುಭವಿಸುವವನು ನಾನು ಇತರರ ಕರ್ಮಗಳನ್ನಲ್ಲ ಎಂದು ತಿಳಿಯಬೇಕು. ಹೀಗೆ ಭೇದ ವಿಜ್ಞಾನವನ್ನು ಹಲವು ಕಡೆ ನಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಬೇಕು. ಯಾರು ತನ್ಮ ಆತ್ಮವನ್ನು ಸ್ವತಂತ್ರ ಎಂದು ಭಾವಿಸುತ್ತಾರೋ ಅವರು ಆತ್ಮ ಚಿಂತನೆಯಲ್ಲಿ [ಧ್ಯಾನದಲ್ಲಿ] ತೊಡಗುತ್ತಾರೆ.

ನೇ– ಆತ್ಮ ಮತ್ತು ಶರೀರ ಇವುಗಳು ಸ್ವತಂತ್ರ ಎಂದು ತಿಳಿದುಕೊಳ್ಳುವುದು ಅಗತ್ಯವಲ್ಲವೆ?

ವಿ– ಹೌದು. ಪಂಡಿತ ಟೋಡರ್ ಮಲ್‌ಜೀಯವರು 'ಮೋಕ್ಷ ಮಾರ್ಗ ಪ್ರಕಾಶಕ'ದಲ್ಲಿ ಭೇದ ವಿಜ್ಞಾನದ ಬಗ್ಗೆ ಸರಳ ಮಾತಿನಿಂದ ಹೇಳಿರುತ್ತಾರೆ. ಪ್ರಪಂಚದ ಶಿವಭೂತಿ ಎಂಬವನು ಜೀವಾದಿ ದ್ರವ್ಯಗಳ ಹೆಸರು ಸಹ ತಿಳಿದಿರಲಿಲ್ಲ ಆದರೆ 'ತುಷ ಮಾಷ' ಎಂದು ಜಪಿಸುತ್ತ ಭೇದ ವಿಜ್ಞಾನದಿಂದ ಆತ 'ಕೇವಲಜ್ಞಾನಿ'ಯಾದನು.

ನೇ– ಭೇದ ವಿಜ್ಞಾನವೆಂದರೆ ಸ್ವತಂದ್ದು ಮತ್ತು ಬೇರೆಯವರದ್ದು ಅಥವಾ ಇಹ ಪರಗಳ ವ್ಯತ್ಯಾಸಗಳೆಂದಾಯ್ತು.

ವಿ– ಹೌದು. ಆತ್ಮ ಮತ್ತು ಶರೀರ ಇವುಗಳಲ್ಲಿ ವ್ಯತ್ಯಾಸವಿದೆ. ಇದರಿಂದಾಗಿಯೇ, ಶಿವಭೂತಿಗೆ ನಿನಕ್ಷರನಾಗಿದ್ದರೂ ಕೇವಲಜ್ಞಾನವುಂಟಾಯಿತು.

ಭಿನಾಪಥೇ ಪರತೀತಿ ಗಾಹಿ ರಾಖ್ಯೋಗಾಢ್ ಅಪಾರ್ ।
ಯಾದ್ ತರತ್ ತುಷ್‌ಮಾಷ್ ಕೋ ಉತರ್‌ಗಯೋ ಭವ್‌ಪಾರ್ ॥

ನೇ– ಭೇದ ಶಬ್ದದೊಂದಿಗೆ ವಿಜ್ಞಾನವನ್ನು ಏಕೆ ಜೋಡಿಸಲಾಯ್ತು ಅಥವಾ ಉಪಯೋಗಿಸಲಾಯಿತು?

ವಿ– ವಿಜ್ಞಾನದ ಮೂಲಾರ್ಥವೆಂದರೆ ಪ್ರತ್ಯಕ್ಷ ಜ್ಞಾನ ಅಂದರೆ 'ವಿಶೇಷಜ್ಞಾನ' ಈ ಅರ್ಥದಲ್ಲಿ ಜೋಡಿಸಲಾಯಿತು.

ನೇ– ವಿಜ್ಞಾನವೆಂದರೇನು?

ವಿ– ವಿ=ವಿಶೇಷೇಣ, ಜ್ಞಾನಂ=ಜ್ಞಾನ='ವಿಜ್ಞಾನ'. 'ಮೂಲಾಚಾರ'ದಲ್ಲಿ ವಿಜ್ಞಾನವನ್ನು ಆಚರಣೆಯೆಂಬ ಅರ್ಥದಲ್ಲೂ ಉಪಯೋಗಿಸಲಾಗಿದೆ.

ನೇ– ಸ್ವರೂಪದ ಆಂಚರಣೆಯಿಂದಾಗಿ ಹೀಗೆ ಹೇಳಲಾಯಿತೇ? ಅದರಲ್ಲೂ ಆಚರಣೆ ಎಂಬ ಶಬ್ದವಿದೆ.

ವಿ– ಆಚರಣೆಯೆಂಬ ಶಬ್ದ ಅದರಲ್ಲೂ ಇದೆ. ಆದರೆ ಇದರ ಪರ್ಯಾಯ ಶಬ್ದವೆಂದರೆ ಉಪಯೋಗ. (ಜ್ಞಾನ ದರ್ಶನ) ಸಾಮಾನ್ಯ ಅರ್ಥದಲ್ಲಿ ಪ್ರತ್ಯಕ್ಷವಾಗಿ ಆಚರಿಸಿ ತಿಳಿಯುವುದು (ಜ್ಞಾನ) ಈ ಅರ್ಥದಲ್ಲಿ ಉಪಯೋಗಿಸಲಾಗಿದೆ.

ನೇ– ಹಾಗಾದರೆ ವಿಶೇಷವಾದ ಜ್ಞಾನವನ್ನು ವಿಜ್ಞಾನವೆನ್ನಬಹುದೆ?

ವಿ– ಹೇಳಬಹುದು, ಆದರೆ ಪ್ರತ್ಯಕ್ಷವಾಗಿ ಅನುಭವದೊಂದಿಗೆ ತಿಳಿಯುವುದನ್ನು ವಿಜ್ಞಾನವೆನ್ನಬಹುದು.

ನೇ– ಅಂದರೆ ಸ್ವಾನುಭವದಿಂದ ಪಡೆದುಕೊಂಡ ಜ್ಞಾನವೆ?

ವಿ– ಹೌದು, ಪ್ರತ್ಯಕ್ಷವಾಗಿ ನೋಡದಿದ್ದರೆ ಅದನ್ನು ವಿಜ್ಞಾನವೆನ್ನಲಾಗುವುದಿಲ್ಲ.

ನೇ– ಭೇದ ವಿಜ್ಞಾನವನ್ನು ತಾವು ಅನುಭವದೊಡನೆ ಜೋಡಿಸಿದಿರಿ. ಅದನ್ನು ಸರಳ ವಾಕ್ಯದಲ್ಲಿ ಹೇಳುವುದಾದರೆ ಹೇಗೆ ವ್ಯಾಖ್ಯಾನಿಸದಹುದು? ಆತ್ಮವನ್ನು ಶರೀರಕ್ಕಿಂತ ಬೇರೆ ಎಂದು ತಿಳಿದುಕೊಳ್ಳುವುದು ಅನುಭವವೇ ಅಥವಾ ಭೇದ ವಿಜ್ಞಾನವೆ?

ವಿ– ಅನುಭವದೊಂದಿಗೆ ಅರಿಯುವುದು ಭೇದ ವಿಜ್ಞಾನ. ಸ್ವಂತ ಅನುಭವಕ್ಕೆ ಬರದೆ, ಕೇವಲ ಶಾಸ್ತ್ರಗಳಲ್ಲಿ ಹೇಳಿದ್ದನ್ನು ತಿಳಿದುಕೊಳ್ಳುವುದು ಕೇವಲ ಶಬ್ದ ಜ್ಞಾನವೆನಿಸುತ್ತದೆ. ಶಬ್ದಕ್ಕೆ ಏನೂ ಮಹತ್ತ್ವ ಇಲ್ಲ. ಎಷ್ಟು ಪುಸ್ತಕಗಳನ್ನು ಓದಿದ? ಎಷ್ಟು ಶಬ್ದಗಳನ್ನು ಉರುಹೊಡೆದ? ಎನ್ನುವುದಕ್ಕೇನೂ ಅಷ್ಟು ಮಹತ್ತ್ವವಿಲ್ಲ. ತನ್ನ ಆತ್ಮದ ಬಗ್ಗೆ ಎಷ್ಟು ತಿಳಿಬುಕೊಳ್ಳುತ್ತಾನೆ, ಎನ್ನುವುದರ ಬಗ್ಗೆ ಮಹತ್ತ್ವವಿದೆ. ಉದಾಹರಣೆಗೆ ಡಾಕ್ಟರರು ಏನು ತಿಂದ ಎಂಬುದರ ಬಗ್ಗೆ ಮಹತ್ತ್ವ ನೀಡದೆ ಎಷ್ಟು ಜೀರ್ಣಿಸಿಕೊಂಡ ಎಂಬುದಕ್ಕೆ ಹೆಚ್ಚು ಮಹತ್ತ್ವ ನೀಡುತ್ತಾರೆ. ಹಾಗೆಯೇ ಓದಿದ್ದನ್ನು ಅಥವಾ ತಿಳಿದುಕೊಂಡದ್ದನ್ನು ಎಷ್ಟು ಅನುಷ್ಠಾನಕ್ಕೆ ತಂದಿರುತ್ತಾನೆ ಎಂಬುದರ ಬಗ್ಗೆ ಮಹತ್ತ್ವ ಹೆಚ್ಚು!

ನೇ– ಶಾಸ್ತ್ರ ಮತ್ತು ವಿಜ್ಞಾನ ಇವೆರಡರ ವ್ಯತ್ಯಾಸಗಳೇನೆಂದು ತಿಳಿಸುವಿರಾ?

ವಿ– ಶಾಸ್ತ್ರವು ಒಂದು ದಾರಿ ತೋರುವ ಸಿದ್ಧಾಂತವಾಗಿದೆ. ಇದರಂತೆ ನಾವು ನಡೆಯಬೇಕು. ಯಾವ ವಿಷಯದ ಬಗ್ಗೆ ನಾವು ಅರಿಯಬೇಕೋ ಅದನ್ನು ಅದರ ಮೂಲ(ಆರಂಭ)ದಿಂದಲೇ ಅರಿತುಕೊಳ್ಳಬೇಕು. ಉದಾಹರಣೆಗೆ ನಾವು ಹೇಗೆ

ಮಾತನಾಡಬೇಕು, ಹೇಗೆ ವರ್ತಿಸಬೇಕು ಎಂಬುದನ್ನು ಆರಂಭದಿಂದಲೇ ಕಲಿಸು ಬೇಕು. ಅರ್ಥಾತ್ ಶಾಸ್ತ್ರವು ಅತ್ಯಂತ ಗಹನ(ಗೂಢ)ವಾಗಿದೆ.

ನೇ– ಅಂದರೆ ಪರಂಪರೆಯಾಗಿದೆ ಎಂದೇ?

ವಿ– ಹೌದು, 'ಏವಂ ಪರಂಪರಾ ಪ್ರಾಪ್ತಮಿದಂ, ಎಂದು ಗೀತೆಯಲ್ಲಿ ಶ್ರೀ ಕೃಷ್ಣನು ಹೇಳುತ್ತಾನೆ. ನನಗೇನು ಪರಂಪರೆ(ಹಿಂದಿನಿಂದ) ಬಂದಿರುತ್ತದೋ ಅದನ್ನೇ ನಾನು ಹೇಳುತ್ತೇನೆ. ಅದನ್ನು ವ್ಯಾಖ್ಯಾನಿಸುತ್ತಾ ಆದಿಶಂಕರಾಚಾರ್ಯರು 'ಏವಂ ಕ್ಷತ್ರಿಯ ಪರಂಪರಾ ಪ್ರಾಪ್ತಮಿದಂ' ಅಂದರೆ ಕ್ಷತ್ರಿಯ ವಿದ್ಯೆಯ ಪರಂಪರೆಯಿಂದ ನಾನು ಆಧ್ಯಾತ್ಮವನ್ನು ಹೇಳುತ್ತಿದ್ದೇನೆ. ಶ್ರೀಕೃಷ್ಣ ಗೀತೆಯಲ್ಲಿ 'ಏವಂ ಪರಂಪರಾ ಪ್ರಾಪ್ತಮಿದಂ' ಎಂದು ಹೇಳಿರುವಂತೆ ಪರಂಪರೆಯಿಂದ ನನಗೇನು ಸಿಕ್ಕಿದೆಯೋ ಅದನ್ನು ನಿಮಗೆ ಹೇಳುತ್ತಿದ್ದೇನೆ.

ನೇ– ಆದರೆ ಆಚಾರ್ಯ ಕುಂದಕುಂದರು 'ಶಾಸ್ತ್ರ'ವನ್ನು ಜ್ಞಾನ ಎಂದು ಒಪ್ಪಿಕೊಳ್ಳುವುದಿಲ್ಲವಲ್ಲ.

ವಿ– ಶಾಸ್ತ್ರವು ಜ್ಞಾನವಲ್ಲ, ಇದಕ್ಕೇನು ಸಂಶಯ ಬೇಡ. ಜ್ಞಾನವು ಎಚ್ಚ ತ್ತಿರುವ ಆತ್ಮದಲ್ಲಿದೆ. ಉದಾಹರಣೆಗೆ ದೀಪವು ನಮಗೆ ಎಲ್ಲಿ ಹೊಂಡ(ಹಳ್ಳ) ಇದೆ ಅಥವಾ ಕಲ್ಲು, ಮುಳ್ಳು ಇದೆ ಎಂದು ತೋರಿಸುತ್ತದೆ. ಹಾಗೆಯೇ ಶಾಸ್ತ್ರವು ನಿರ್ವಂದ್ವ ವಿಚಾರಕ್ಕಾಗಿ ಸಹಾಯ ಮಾಡುತ್ತದೆ. ಹೀಗೆ ಶಬ್ದದ ಹಿಂದೆ ಅಥವಾ ಶಬ್ದಾರ್ಥವನ್ನು ತಿಳಿದುಕೊಂಡು ಅದರ ಅನುಭವವನ್ನು ಮಾಡಬೇಕು. ಅಂದರೆ ಅದರಲ್ಲಿ ಅಡಕವಾಗಿರುವ ರಹಸ್ಯವನ್ನು ಅನುಭವಿಸಬೇಕು(ತಿಳಿದುಕೊಳ್ಳಬೇಕು).

ನೇ– ಭೇದವೆಂಬುದು ರಹಸ್ಯ ಎಂದೂ ಅರ್ಥ ನೀಡುತ್ತದಲ್ಲವೇ?

ವಿ– ಹೌದು.

ನೇ– ಅಂದರೆ ಇಹ-ಪರದ ರಹಸ್ಯವನ್ನು ತಿಳಿದುಕೊಳ್ಳುವುದು ಭೇದ ವಿಜ್ಞಾನ ವೆಂದಾಯ್ತು.

ವಿ– ಹೌದು, ಉದಾಹರಣೆಗೆ ಕಮಲ ಎಂದು ಎಲ್ಲರೂ ಉರುಹೊಡೆಯು ತ್ತಾರೆ. ಆದರೆ ಅದರ ಅರ್ಥ ಗೊತ್ತಿರುವುದಿಲ್ಲ. 'ಕ' ಅಂದರೆ ನೀರು(ಜಲ), ಮಲ ಅಂದರೆ ಕೆಸರು. ಕೆಸರಲ್ಲಿ ಹುಟ್ಟಿದುದರಿಂದ ಕಮಲ ಎಂದಾಯಿತು.

ನೇ– ಒಂದು ಹೂವಿನ ಹೆಸರಾಯ್ತು.

ಇದನ್ನು ಬೇರೆಯಾಗಿಯೂ ಹೇಳಲಾಗಿದೆ. ಉದಾಹರಣೆಗೆ 'ಕಂ ಅಲತಿ'ಯು ನೀರನ್ನು ಶೋಭಾಯಮಾನವಾಗಿರುವುದಿಲ್ಲವೇ.

ವಿ– ಹೀಗೂ ಹೇಳಬಹುದು. ಇದು ಭೇದ ವಿಜ್ಞಾನವಾಯಿತು. ಇದರಲ್ಲಿ ನೀರು, ಕೆಸರು, ಕಮಲ ಮೂರು ಬೇರೆ ಬೇರೆಯಾಗಿ ಉಪಯೋಗಿಸಲ್ಪಟ್ಟಿತು. 'ಕ' ಅಂದರೆ ನೀರು. 'ಮಲ್' ಅಂದರೆ ಕೆಸರು ಇದಕ್ಕಿಂತ ಕಮಲವು ಬೇರೆ. ನೀರಿನ ಹೊರತಾಗಿರುವ ಕಮಲವು ನಮ್ಮ ಬಳಿಯೂ ಇದೆ. ಅಂದರೆ ಆತ್ಮ ಮತ್ತು ಶರೀರ ಒಂದೇ ಆಗಿದ್ದರೂ ಅವು ಬೇರೆ ಬೇರೆಯಾಗಿವೆ.

ನೇ– ಆದರೆ ಕೆಲವರು ಅವೆರಡೂ ಒಂದೇ ಅಂತ ತಿಳಿದುಕೊಳ್ಳುತ್ತಾರಲ್ಲ.

ವಿ– ಇದು ಹಿಂದಿನಿಂದಲೇ ನಾವು ತಿಳಿದುಕೊಂಡಿರುವಂಥ ವಿಷಯ.

ನೇ– ಭೇದ ವಿಜ್ಞಾನವು ಅದನ್ನು ಪ್ರಷ್ಟೀಕರಿಸುತ್ತದೆ. (ಸಂಗ್ರಹಿಸುತ್ತದೆ) ಅಥವಾ ಹೇಳುತ್ತದೆ. ಅಲ್ಲವೆ?

ವಿ– ಹೌದು. ಹಿಂದಿನಿಂದಲೂ ಶರೀರ ಮತ್ತು ಆತ್ಮಗಳೆರಡೂ ಒಂದೇ ಎಂದು ತಪ್ಪಾಗಿ ತಿಳಿದುಕೊಂಡು ಬಂದಿದ್ದಾರೆ. ಆಚಾರ್ಯರು ಜಗತ್ತಿನಲ್ಲಿ ಎಲ್ಲಾ ಪದಾರ್ಥ (ವಸ್ತು)ಗಳಿಂದಲೂ ತನ್ನ ಆತ್ಮ ಬೇರೆ ಎಂದು ತಿಳಿದುಕೊಳ್ಳುವುದೇ ಭೇದ ವಿಜ್ಞಾನದ ಆರಂಭವಾಗಿದೆ.

ನೇ– ತಪಸ್ಸಿನೊಂದಿಗೆ ಇದಕ್ಕೇನೂ ಸಂಬಂಧವಿಲ್ಲವೆ? ಭೇದ ವಿಜ್ಞಾನಿಗಳೇ ಇರದೆ ತಪಸ್ವಿಗಳೇ ಆಗಿ ಇದ್ದರೇನಾಗುತ್ತದೆ?

ವಿ– ಸ್ತ್ರೀಯರು ರೊಟ್ಟಿಯನ್ನು ಮಾಡುವಾಗ ಅದನ್ನು ಬಾಣಲಿ ಅಥವಾ ಕಾವಲಿಯ ಮೇಲೆ ಹಾಕಿ ಎರಡೂ ಬದಿಗಳನ್ನು ಬೇಯಿಸುತ್ತಾರೆ. ಒಂದು ವೇಳೆ ಇನ್ನೊಂದು ಬದಿಯನ್ನೂ ಬೇಯಿಸದಿದ್ದರೆ ಅದು ಹಸಿಯಾಗಿಯೇ ಉಳಿಯುತ್ತದೆ. ಹೀಗೆಯೇ ಅಂತರಂಗ ಬಹಿರಂಗಗಳೆರಡೂ ಶುದ್ಧಿಗೊಂಡ ನಂತರವೇ ರೊಟ್ಟಿಯು ಚೆನ್ನಾಗಿ ಕಾಯಿಸಿಕೊಂಡು ಉಬ್ಬುವಂತೆ ಆತ್ಮ ಮತ್ತು ಶರೀರದ ವ್ಯತ್ಯಾಸ ಆಗ ಗೊತ್ತಾಗುತ್ತದೆ. ಇಲ್ಲದಿದ್ದರೆ ತಿಳಿಯುವುದಿಲ್ಲ.

ನೇ– ಭೇದ ವಿಜ್ಞಾನವು ತಪಸ್ಸಿನ ಫಲವೆ?

ವಿ– ಹೌದು, ತೆಂಗಿನಕಾಯಿಯು ಹಸಿಯಾಗಿರುವಾಗ ಅದರಲ್ಲಿ ನೀರಿರುತ್ತದೆ. ಸಂಪೂರ್ಣವಾಗಿ ಒಣಗಿದ ಮೇಲೆ ನೀರಿರುವುದಿಲ್ಲ. ಆಗ ಚಿಪ್ಪಿನಿಂದ ಕಾಯಿಯು ಬೇರ್ಪಟ್ಟು ಶಬ್ದವನ್ನು ಹೊರಡಿಸುತ್ತದೆ. ಹಾಗೆಯೇ ಆತ್ಮವೂ ಕೂಡ ಎಲ್ಲಿ ತನಕ ತಪಸ್ಸು ಮಾಡುವುದಿಲ್ಲವೋ ಅಲ್ಲಿಯ ತನಕ ಇದು ನನ್ನ ಶರೀರ ಎಂದುಕೊಳ್ಳುತ್ತೇವೆ. ಜ್ಞಾನ ಸಂಪಾದಿಸಿದ ಮೇಲೆ ಆತ್ಮ ಬೇರೆ, ದೇಹ ಬೇರೆ ಎಂದು ತಿಳಿಯುತ್ತದೆ.

ನೇ– ಭೇದ ವಿಜ್ಞಾನವನ್ನು ತಪಸ್ಸಿನಿಂದ ಹೊರಗೆ ಉಳಿಸಿದರೆ ಏನು ಉಳಿಯುತ್ತದೆ?

ವಿ– ಆಗ ತಪಸ್ಸೆಂಬುದೇ ಉಳಿಯುವುದಿಲ್ಲ. ತಪಸ್ಸಿನ ಆರಂಭವೇ ಭೇದ ವಿಜ್ಞಾನವಾಗಿದೆ. ಚಿನ್ನ ಮತ್ತು ಹಿತ್ತಾಳೆ ಇವೆರಡೂ ಬೇರೆ ಬೇರೆಯಾಗಿವೆ. ಆದರೆ ಇವು ಜಗತ್ತಿಗೆ ಸಂಬಂಧಪಟ್ಟ ವಸ್ತುಗಳು. ಹಾಗೆಯೇ ಕುಂದಕುಂದರು ಮತ್ತು ಅಮೃತಚಂದ್ರಾಚಾರ್ಯರು ಇವನ್ನು ಆತ್ಮ ಮತ್ತು ಅನಾತ್ಮ (ಶರೀರ)ಗಳಿಗೆ ಹೋಲಿಸಿದ್ದಾರೆ.

ನೇ– ಭೇದ ವಿಜ್ಞಾನವನ್ನು?

ವಿ– ಅದನ್ನು ಶಾಶ್ವತ ಸುಖ, ಎಲ್ಲಾ ಸಂಕಷ್ಟಗಳಿಂದಲೂ ಮುಕ್ತವಾಗಿರುವುದಕ್ಕೆ ಹೋಲಿಸಿದ್ದಾರೆ.

ನೇ- ಭೇದ ವಿಜ್ಞಾನದ ಒಂದು ಪ್ರಯೋಜನವೆಂದರೆ ಸಹಿಷ್ಣುತೆ. ಇದರಿಂದ ವ್ಯಕ್ತಿಯು ಸಹಿಷ್ಣುವಾಗುತ್ತಾನಲ್ಲವೆ?

ವಿ- ಭೇದ ವಿಜ್ಞಾನದ ಮೂಲಕ ಆತ್ಮ ಮತ್ತು ಶರೀರ ಇವೆರಡೂ ಬೇರೆ ಬೇರೆ ಅಂತ ತಿಳಿಸಿಕೊಟ್ಟರೆ ಅವನು ಸಹಿಷ್ಣುವಾಗುತ್ತಾನೆ. ಜೈನ ಧರ್ಮದ ಗ್ರಂಥಗಳನ್ನು ಅಭ್ಯಾಸ ಮಾಡಿದ ಒಬ್ಬನಿಗೆ ಜಗತ್ತಿನ ಯಾವುದೇ ವಸ್ತುವಿನೊಂದಿಗೂ ಅವನಿಗೇನೂ ಸಂಬಂಧ ಎಲ್ಲ ಎಂದು ಅರಿವಾಯಿತು. ನಾನಂತೂ ಜಗತ್ತನ್ನು ಬಿಟ್ಟು ಹೋಗುವವನು(ಮರಣ ಹೊಂದುವವನು) ಎಂದು ಯೋಚಿಸುತ್ತಿದ್ದ. ಆಗ ಅವನ ತೋಟಕ್ಕೆ ಕೆಲವು ಮಕ್ಕಳು ಬಂದು ಹಣ್ಣುಗಳನ್ನು ಕದ್ದರು. ಆಗ ಅವನ ಹೆಂಡತಿಯು ಮಕ್ಕಳು ಹಣ್ಣುಗಳನ್ನು ಕದ್ದುಕೊಂಡು ಹೋಗುತ್ತಿದ್ದಾರಲ್ಲ, ನೀವು ಸುಮ್ಮಗೆ ಇದ್ದೀರಿ ಎಂದು ಹೇಳಿದಳು. ಅವನು ನೀನು ಸಿಟ್ಟುಗೊಳ್ಳಬೇಡ, ನಾನೇ ಮಕ್ಕಳಿಗೆ ಅಗತ್ಯವಿದ್ದರೆ ಹಣ್ಣುಗಳನ್ನು ತೆಗೆದುಕೊಂಡು ಹೋಗುವಂತೆ ತಿಳಿಸಿದ್ದೆ. ನೀನು ಶಾಂತವಾಗಿರು(ಬೇಸರಗೊಳ್ಳಬೇಡ) ಎಂದು ಹೇಳಿದನು. ಹೀಗೆ ಅವನು ಅವಳ ಕೋಪ (ಸಿಟ್ಟನ್ನು)ವನ್ನು ನಿವಾರಿಸಿದನು. ಒಂದು ವೇಳೆ ಅವನು ಹಾಗೆ ಹೇಳದಿರುತ್ತಿದ್ದರೆ ಹೆಂಡತಿಯು ಆ ಮಕ್ಕಳನ್ನು ಶಿಕ್ಷಿಸುತ್ತಿದ್ದಳು. ಮಕ್ಕಳು ಕದ್ದರೇನಾಯ್ತು? ಆ ಮೇಲೆ ಅವರಿಗೆ ಹಾಗೆ ಮಾಡಬಾರದೆಂದು ತಿಳಿಸುತ್ತೇನೆ. ಹೀಗೆ ಅವನು ಯೋಚಿಸಿ ಸಾವಧಾನದಿಂದ ಕೆಲಸವನ್ನು ಕೈಗೊಂಡ. ಹೀಗೆಯೇ ಮತ್ತೊಮ್ಮೆ ಬಟ್ಟೆಗಳನ್ನು ಕಳ್ಳ ಕದ್ದುಕೊಂಡು ಹೋದಾಗ, ಆಗಲೂ ಅವನು, ನಿನಗೆ ಬಟ್ಟೆಯ ಅವಶ್ಯಕತೆ ಬಿದ್ದಾಗ ತೆಗೆದುಕೊಂಡು ಹೋಗು ಎಂದ. ಆಗ ಅವನು ತೆಗೆದುಕೊಂಡು ಹೋದ. ಹೀಗೆ ಅವನು ಯೋಚಿಸಿ ತನ್ನ ಸಹಿಷ್ಣುತೆಯ ಪರಿಚಯವನ್ನು ಮಾಡಿಕೊಡುತ್ತಿದ್ದ. ಕುಂದ ಕುಂದಾಚಾರ್ಯರೂ ಕೂಡಾ ಆಧ್ಯಾತ್ಮಿಕವಾದಿಯಾಗಿದ್ದರು. ಸಹಿಷ್ಣುತೆಯನ್ನು ಯಾವತ್ತೂ ಬಿಡಬಾರದು ಎಂದು ಹೇಳಿದ್ದಾರೆ. ಆದರೆ ವ್ಯವಹಾರದಲ್ಲಿ ಕೆಲವೊಮ್ಮೆ ಸಹಿಷ್ಣುತೆಯನ್ನು ಕೈಬಿಡಬೇಕಾಗುತ್ತದೆ. ಆದರೆ ಹೀಗೆ ಯಾವಾಗಲೂ ಅದನ್ನು ಕೈಬಿಡಬೇಕೆಂದಲ್ಲ. ಸಾಧ್ಯವಾದಷ್ಟು ಪಾಲಿಸಿಕೊಂಡು ಬರಬೇಕು. ಒಂದು ವೇಳೆ ಯಾರಾದರೂ ಸಹಿಷ್ಣುತೆಯನ್ನು ಕೈ ಬಿಟ್ಟರೆ ಆತನಿಗೆ ಆತ್ಮ ಮತ್ತು ಶರೀರಗಳೆರಡರ ಮೇಲೆ ವ್ಯಾಮೋಹವಿನ್ನೂ ಕಡಿಮೆಯಾಗಿಲ್ಲ ಎಂದು ತಿಳಿದುಕೊಳ್ಳಬೇಕಾಗುತ್ತದೆ. ಅದಕ್ಕೆ ಆಚಾರ್ಯರು ಮುನಿಗಳು ಧ್ಯಾನ ಮಾಡಬೇಕೆಂದು ಹೇಳುತ್ತಾರೆ. ಧ್ಯಾನ ಮಾಡುವಾಗ ಏಕಾಗ್ರಚಿತ್ತತೆಯಿಂದ ಧ್ಯಾನ ಮಾಡಬೇಕು. ಮನಸ್ಸು ಚಂಚಲವಾಗಿರಬಾರದು. ಚಂಚಲವಾಗಿದ್ದರೆ ಹಿಂಸೆಯತ್ತ ಮನ ವಾಲಬಹುದು ಅಥವಾ ಬೇರೆಯವರಿಗೆ ಕೆಡುಕನ್ನುಂಟುಮಾಡಲು ಮನಸ್ಸು ಯೋಚಿಸಬಹುದು. ಉದಾಹರಣೆಗೆ ನಾವು ಒಂದು ಗಿಡವನ್ನು ಇಲ್ಲಿ ಅಥವಾ ಅಲ್ಲಿ ಬೆಳೆಸಬೇಕೆಂದು ಯೋಚಿಸುತ್ತಿರುವಾಗ ಯಾರಾದರೂ ಅಲ್ಲಿ ನೀವು ಗಿಡ ಬೆಳೆಸಿದರೆ ನಾಶ ಮಾಡುತ್ತೇನೆ ಎಂದಾಗ ಮನದಲ್ಲಿ ಕ್ರೋಧ ಉಂಟಾಗಬಹುದು. ಆದರೆ ಹಾಗಾಗಬಾರದು, ಹೀಗೇ ಆಧ್ಯಾತ್ಮದಲ್ಲಿ ಸಹಿಷ್ಣುತೆಯ ಬಗ್ಗೆ ತುಂಬಾ ಮಹತ್ತ್ವವಿದೆ.

ನೇ- ಜೈನ ಮುನಿಗಳೂ ತಪಸ್ಸು ಮಾಡುತ್ತಾರೆ. ಇತರರೂ ಮಾಡುತ್ತಾರೆ.

ಆದರೆ ಮುನಿಗಳು ಭೇದ ವಿಜ್ಞಾನದ ಸಹಾಯದಿಂದ ತಪಸ್ಸು ಮಾಡುತ್ತಾರೆ. ಆದರೆ ಇತರರಲ್ಲಿ ಆ ದೃಷ್ಟಿ ಇರುವುದಿಲ್ಲ. ಆದುದರಿಂದ ಭೇದ ವಿಜ್ಞಾನವು ಒಂದು ಮಹತ್ತ್ವದ ವಿಷಯವಾಗಿದೆಯೆ ?

ವಿ– ಯಾವುದೇ ತತ್ವವನ್ನಾದರೂ ಅದನ್ನು ಸರಿಯಾಗಿ ತಿಳಿದುಕೊಳ್ಳುವುದು ಬಹು ಅಗತ್ಯ. ಕೃಷ್ಣನು ಗೀತೆಯಲ್ಲಿ 'ಸ್ವಧರ್ಮೇ ನಿಧನಂ ಶ್ರೇಯಃ ಪರ ಧರ್ಮೋ ಭಯಾವಹಃ।' ಸ್ವಧರ್ಮದಲ್ಲಿ ಮರಣ ಹೊಂದುವುದು ಉತ್ತಮ. ಆದರೆ ಪರ ಧರ್ಮದ ಬಗ್ಗೆ ಭಯ ಪಡಬೇಕು. ಜನರು ಇದನ್ನು ತಪ್ಪಾಗಿ ತಿಳಿದುಕೊಂಡಿದ್ದಾರೆ. ಇಲ್ಲಿ ಪರ ಧರ್ಮವೆಂದರೆ ಬೇರೆ ಸಂಪ್ರದಾಯ ಅಥವಾ ಜಾತಿ ಎಂದಲ್ಲ. ಶ್ರೀಕೃಷ್ಣನಲ್ಲಿ ಭೀತಿ ಹುಟ್ಟಿಸಲು ಯಾವುದೇ ಸಂಪ್ರದಾಯಗಳಿರಲಿಲ್ಲ. ಆತನ ಅಭಿಪ್ರಾಯದಲ್ಲಿ ಕ್ರೋಧ, ಮಾನ, ಮಾಯಾ, ಲೋಭ, ರಾಗದ್ವೇಷಗಳೇ ಪರ ಧರ್ಮಗಳು. ಅವುಗಳಿಂದ ಭಯ ಪಡಬೇಕು. ಕ್ಷಮೆ, ವಿನಯ ಶುಚಿತ್ವ ಸತ್ಯ, ಅಹಿಂಸೆ ಇತ್ಯಾದಿಗಳೇ ಸ್ವಧರ್ಮ. ಈ ಆತ್ಮದಲ್ಲೇ ಇದ್ದು ಸಮಾಧಿಮರಣ ಹೊಂದಬೇಕು ಎಂದು ಶ್ರೀಕೃಷ್ಣನು ಹೇಳಿದ್ದನು.

ನೇ– ಇದು ಭೇದ ವಿಜ್ಞಾನದ ಒಂದು ಒಳ್ಳೆಯ ನಿರೂಪಣೆ.

ವಿ– ಜನರು ಪರಧರ್ಮದ ಬಗ್ಗೆ ತಪ್ಪು 'ಕಲ್ಪನೆ ಹೊಂದಿದ್ದರೇ ಹೊರತು ನಿಜವಾದ ಅರ್ಥ ಅವರಿಗೆ ಹೊಳೆದಿರಲಿಲ್ಲ.

ನೇ– ವಸ್ತುವಿನ ನಿಜವಾದ ಸ್ವರೂಪ ತಿಳಿಯುವುದೇ ಭೇದ ವಿಜ್ಞಾನವಾಗಬಲ್ಲುದೆ?

ವಿ– ಸರಿ. ಜೀವನದಲ್ಲಿ ಬರುವ ಸೂಕ್ಷ್ಮವಾದ ವಿಷಯಗಳು ನಿಜವಾಗಿರುತ್ತವೆ. ಅಂದರೆ ಅದು ಭೇದ ವಿಜ್ಞಾನವಾಗಿರುತ್ತದೆ. ತತ್ತ್ವಜ್ಞಾನಿಗಳು ವಸ್ತುಗಳ (ಪದಾರ್ಥಗಳ) ಮೂರು ಗುಣಗಳನ್ನು ಕಂಡುಕೊಂಡಿದ್ದಾರೆ. ಉತ್ಪಾದ, ವ್ಯಯ ಧ್ರೌವ್ಯ. ಕಚ್ಚಾ ವಸ್ತು ಬೇರೆ ವಸ್ತುಗಳನ್ನು ಉತ್ಪಾದನೆ ಮಾಡಿದಾಗ ಅದರಲ್ಲಿನ ಕಶ್ಮಲ (ಬೇಡದ ವಸ್ತು) ನಷ್ಟ ಹೊಂದುತ್ತದೆ. ಅಸಲಿ ವಸ್ತುವು ಉಳಿಯುತ್ತದೆ. ಇದೇ ರೀತಿ ಎಲ್ಲಾ ವಸ್ತುಗಳೂ ಮಾಡಲ್ಪಟ್ಟಿವೆ.

ಶ್ರೀಕೃಷ್ಣನು ಗೀತೆಯಲ್ಲಿ 'ನಾಸತೋ ವಿದ್ಯತೇ ಭಾವೋ ನ ಭಾವೋ ವಿದ್ಯತೇ ಸತಃ। ಉಭಯೋರಪಿ ದೃಷ್ಟೋಂತು ಸ್ತ್ವನಯೋಃ' –(ಗೀತೆ ಅಧ್ಯಾಯ 2 ಶ್ಲೋಕ 16)

ಅಸತ್ಯಕ್ಕೆ ಚಿರವಾದ [ಶಾಶ್ವತವಾದ] ಅಸ್ತಿತ್ವವಿಲ್ಲ. ಹಾಗೆಯೇ ಸತ್ಯಕ್ಕೆ ಎಂದೂ ಅಳಿವಿಲ್ಲ. ಇದೇ ರೀತಿ ಜ್ಞಾನಿಗಳು ಇವೆರಡರ ತತ್ವವನ್ನು ನಿರ್ಣಯಿಸಿದ್ದಾರೆ.

ಆದುದರಿಂದ ಒಳ್ಳೆಯ ಆಚಾರ ವಿಚಾರಗಳು ನಮಗೆ ಭೇದ ವಿಜ್ಞಾನವಿಲ್ಲದಿದ್ದರೆ ತಿಳಿಯಲಾರವು.

ನೇ– ತಾವು ಮೂರು ಹೊತ್ತು ತಪಸ್ಸಿನಲ್ಲಿ ತೊಡಗಿರುತ್ತೀರಿ. ಆದುದರಿಂದ ಭೇದ ವಿಜ್ಞಾನದ ಸ್ಪಷ್ಟ ಪರಿಚಯ ತಮಗಿದೆಯಲ್ಲವೆ?

ವಿ– ಅದರ ಬಗ್ಗೆ ಯೋಚಿಸುತ್ತಾ ಇದ್ದರೆ ಅದರ ಸ್ಪಷ್ಟ ಪರಿಚಯವು ಸಾಧ್ಯವಾಗುತ್ತದೆ.

ನೇ– ಆ ಅನುಭವವನ್ನು ವಿವರಿಸುವುದು ಪ್ರಾಯಶಃ ಕಷ್ಟವಲ್ಲವೆ?

ವಿ– ವಿವರಣೆಯ ಅಗತ್ಯವೇ ಇರುವುದಿಲ್ಲ. ನಾವು ಸುಮ್ಮನೆ ಕುಳಿತರೂ, ಮೌನವಾಗಿದ್ದರೂ ಅದರ ಅನುಭವವನ್ನು ಮೊದಲೇ ಪಡೆದಿರುತ್ತೇವೆ.

ನೇ– ಈಗ ಆ ಅನುಭವಗಳನ್ನು ನೆನಪಿಸಿಕೊಂಡು ಮೆಲುಕು ಹಾಕುವ ಕೆಲಸವಷ್ಟೇ ಉಳಿದಿರುತ್ತದೆ. ಆ ತತ್ತ್ವಗಳನ್ನು ನೆನಪಿಸಿಕೊಂಡು ಗ್ರಹಣ ಮಾಡಿಕೊಳ್ಳಬೇಕು. ಅಲ್ಲವೆ?

ವಿ– ಹೌದು, ಧ್ಯಾನ(ಚಿಂತನೆ)ದಲ್ಲಿ ಮೂರು ವಿಧಗಳಿವೆ. ಒಂದು ಹಿಂದಿನ ಪಾಪಗಳಿಂದ ಮುಕ್ತನಾಗುವುದು. ಎರಡನೆಯದಾಗಿ ಹೊಸ ತಪ್ಪುಗಳನ್ನು ಮಾಡದಂತೆ ಆತ್ಮ(ಮನಸ್ಸಿಗೆ)ಕ್ಕೆ ಬೋಧಿಸಿ ಪಾಪಗಳನ್ನು ಆದಷ್ಟು ಕಡಿಮೆ ಮಾಡಬೇಕು. ಆತ್ಮ ಮತ್ತು ಶರೀರವು ಬೇರೆ ಬೇರೆ ಎಂದು ತಿಳಿಯಲು ಧ್ಯಾನವೇ ಒಳ್ಳೆಯ ಮಾರ್ಗ (ದಾರಿ). 'ಪ್ರಥಮಾನುಯೋಗ' ಅಥವಾ 'ಕಾರಣಾನುಯೋಗ' ಅಥವಾ ಎಲ್ಲಾ ಗ್ರಂಥಗಳೂ ಕೂಡಾ ಭೇದ ವಿಜ್ಞಾನವನ್ನೊಳಗೊಂಡಿವೆ. ಆಚಾರ್ಯ ಪೂಜ್ಯಪಾದರು ರಚಿಸಿರುವ ಅನೇಕ ಗ್ರಂಥಗಳ ಪೈಕಿ ಆಯುರ್ವೇದ ಗ್ರಂಥವು ದೇಹವನ್ನು ಆರೋಗ್ಯವನ್ನಾಗಿಟ್ಟುಕೊಳ್ಳಲು ತಿಳಿಸುತ್ತದೆ. ಮಾತನ್ನು ಶುದ್ಧಿಯಾಗಿಟ್ಟುಕೊಳ್ಳಬೇಕೆಂದು ಎರಡನೆಯ ಗ್ರಂಥವಾದ ವ್ಯಾಕರಣ(ಜೈನೇಂದ್ರ ವ್ಯಾಕರಣ) ಗ್ರಂಥ ತಿಳಿಸುತ್ತದೆ. ಆತ್ಮನನ್ನು ಶುದ್ಧವಾಗಿಟ್ಟುಕೊಳ್ಳಲು ಆಧ್ಯಾತ್ಮಿಕ ಗ್ರಂಥ (ಸಮಾಧಿ ತಂತ್ರ) ತಿಳಿಸುತ್ತದೆ.

ನೇ– ಜನರ ಮಾತು, ಕೃತಿ ಮತ್ತು ಮನಸ್ಸನ್ನು ಶುದ್ಧವಾಗಿಟ್ಟುಕೊಳ್ಳಲು ಈ ಮೂರು ಗ್ರಂಥಗಳನ್ನು ರಚಿಸಿದ್ದಾರಲ್ಲವೆ?

ವಿ– ಹೌದು, ದೇಹವನ್ನು ಆರೋಗ್ಯವಾಗಿಟ್ಟುಕೊಳ್ಳುವುದರಿಂದ ಧ್ಯಾನದಲ್ಲಿ ಏಕಾಗ್ರತೆಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಇದರಿಂದಾಗಿ ಒಳ್ಳೆಯ ಪ್ರಯೋಜನವುಂಟಾಗುತ್ತದೆ.

ನೇ– ಮನಸ್ಸನ್ನು ಶುದ್ಧಿಯಾಗಿಟ್ಟುಕೊಳ್ಳಬೇಕಾದರೆ ಮನಸ್ಸನ್ನೂ, ದೇಹವನ್ನೂ ಬೇರೆ ಬೇರೆಯೆಂದು ತಿಳಿದುಕೊಳ್ಳುವುದು ಅವಶ್ಯವಲ್ಲವೆ?

ವಿ– ಹೌದು, ಅವೆರಡೂ (ಮನಸ್ಸು ಮತ್ತು ಆತ್ಮ) ಬೇರೆ ಬೇರೆಯಾಗಿವೆ.

ನೇ– ಮನಸ್ಸೆಂಬುದು ದಲಾಲಿಯಲ್ಲವೆ (ಮುಖ್ಯವಲ್ಲವೆ?)

ವಿ– ಇದಕ್ಕಾಗಿಯೇ ಎರಡು ಮನಸ್ಸುಗಳೆಂದು ವಿಂಗಡಿಸಿದ್ದಾರೆ. ಒಂದು ಚೇತನ (ಒಳ ಮನಸ್ಸು) ಇನ್ನೊಂದು ಅಚೇತನ ಮನ ಹೊರ ಮನಸ್ಸು. ಒಳ ಮನಸ್ಸು ಎಂಬುದು ಆಸ್ತಿ (ದ್ರವ್ಯ) ಇದ್ದಂತೆ. ಇನ್ನೊಂದು ಭಾವ ಮನ. ಭಾವ ಮನಸ್ಸೆಂಬುದು ಆತ್ಮಕ್ಕೆ ಚೈತನ್ಯವನ್ನು ನೀಡುತ್ತದೆ. ದ್ರವ್ಯ ಮನಸ್ಸು ಭಾವನೆಗಳಿಂದ ಕೂಡಿದೆ. ಜೊತೆಗೆ ಚಂಚಲತೆಯು ಅದರೊಂದಿಗೆ ಸೇರಿಕೊಂಡಿದೆ. ಉದಾಹರಣೆಗೆ

ಸಮುದ್ರದಲ್ಲಿ ಗಾಳಿ ಬೀಸಿದಾಗ ಅಲೆಗಳು ಏಳುತ್ತವೆ. ಗಾಳಿ ನಿಂತಾಗ ಅಲೆಗಳೂ ನಿಲ್ಲುತ್ತವೆ. ಹಾಗೆಯೇ ಮನಸ್ಸಿನಲ್ಲೂ ಭಾವನೆಗಳು ಉಂಟಾಗುತ್ತವೆ. ದ್ರವ್ಯ ಮನಸ್ಸು ಮತ್ತು ಭಾವ ಮನಗಳೊಳಗೆ ಪರಸ್ಪರ ಸಂಬಂಧಗಳಿವೆ. ಇದನ್ನು ತಿಳಿದು ಕೊಳ್ಳಬೇಕು. ಚಾಂಚಲ್ಯವನ್ನು ಹೋಗಲಾಡಿಸಲು ಮತ್ತು ಏಕಾಗ್ರತೆಯನ್ನು ಸಾಧಿಸಲು ವಿಜ್ಞಾನದ ಅಗತ್ಯವಿದೆ.

ನೇ-- ಭೇದ ವಿಜ್ಞಾನವನ್ನು ಉಪಯೋಗಿಸಿ ಮನಸ್ಸಿನ ಮೇಲೆ ಹತೋಟಿ ಯನ್ನು ಸಾಧಿಸಬಹುದೆ?

ವಿ-- ಸಾಧಿಸಬಹುದು, ಸಂಸಾರದ ಮೇಲಿರುವ ಆಸೆಯನ್ನು ಕಡಿಮೆಗೊಳಿಸ ಬಹುದು. ಅಥವಾ ಸಂಸಾರದ ಮೇಲಿರುವ ಮೋಹವನ್ನೇ ತ್ಯಜಿಸಬಹುದು. ರಾಗ ದ್ವೇಷಗಳನ್ನು ಕಡಿಮೆ ಮಾಡಬಹುದು. ಇವೆಲ್ಲಾ ಭೇದ ವಿಜ್ಞಾನದಿಂದಲೇ ಸಾಧ್ಯವೇ ಹೊರತು ಬೇರೆ ಯಾವುದರಿಂದಲೂ ಅಲ್ಲ.

ನೇ-- ಭೇದ ವಿಜ್ಞಾನವನ್ನು ವೈರಾಗ್ಯದ ಮೊದಲ ಹಂತವೆನ್ನಬಹುದೆ?

ವಿ-- ಜಗತ್ತಿನಲ್ಲಿ ಭೇದ ವಿಜ್ಞಾನವಿಲ್ಲದಿದ್ದರೆ ಎಲ್ಲವೂ ಅಸ್ತವ್ಯಸ್ತಗೊಳ್ಳುತ್ತವೆ. ಮನುಷ್ಯರು ಪಶುಗಳಂತಾಗುತ್ತಾರೆ. ಪ್ರಾಣಿಗಳಲ್ಲೂ ಅಕ್ಕ, ತಂಗಿ, ಅಣ್ಣ, ತಮ್ಮ ಎಂಬ ಭಾವನೆಗಳಿವೆ. ಇವು ಭೇದ ವಿಜ್ಞಾನದಿಂದಲೇ ಸಾಧ್ಯ. ಇದರಂತೆ ತಿನ್ನು ವುದರಲ್ಲೂ ಇದೆ. ಅಂದರೆ ಇದನ್ನು ತಿನ್ನಬಹುದು, ಇದನ್ನು ತಿನ್ನಬಾರದು, ಎಂಬ ಭಾವನೆಯಲ್ಲೂ ಭೇದ ವಿಜ್ಞಾನವನ್ನು ಕಾಣಬಹುದು. ಅಶೋಕನ ಹೆಂಡತಿಯಾದ ತಿಶ್ಯರಕ್ಷಿತೆಯು ಈರುಳ್ಳಿಯನ್ನು ಅಡಿಗೆಗೆ ಉಪಯೋಗಿಸ ತೊಡಗಿದಳು. ಆಗ ಅಶೋಕನು-- 'ನಾನು ಕ್ಷತ್ರಿಯ, ನಾನು ಈರುಳ್ಳಿಯನ್ನು ತಿನ್ನಬಾರದು. ಒಂದು ವೇಳೆ ಈರುಳ್ಳಿಯನ್ನು ತಿಂದು ಮಂದಭಾವವುಂಟಾದರೆ ನ್ಯಾಯಪಾಲನೆಯಲ್ಲಿ ಲೋಪ ಉಂಟಾಗಬಹುದು. ಆದುದರಿಂದ ನಾನು ಸಾತ್ವಿಕ ಆಹಾರವನ್ನು ಮಾತ್ರ ತಿನ್ನು ತ್ತೇನೆ. ಯಾವುದೇ ತರಹದ ಅಮಲು[ಮದ] ಉಂಟಾಗುವ ವಸ್ತುಗಳನ್ನು ತಿನ್ನುವು ದಿಲ್ಲ. ನೀನೇಕೆ ಈ ಮದ ಉಂಟಾಗುವಂಥ ಅಡಿಗೆಯನ್ನು ಮಾಡಲಾರಂಭಿಸಿದೆ? ಎಂದು ಕೇಳಿದನು.' ಇದು 'ಅಶೋಕ ಅವದಾನ' ಗ್ರಂಥದಲ್ಲಿ ಹೇಳಲ್ಪಟ್ಟಿದೆ.

ನೇ-- ಭೇದ ವಿಜ್ಞಾನವನ್ನು ನಾವು ವಿವೇಕ[ಬುದ್ಧಿ] ಎನ್ನಬಹುದೆ?

ವಿ-- ಪಾರಮಾರ್ಥಿಕವನ್ನು ನಾವು ವಿವೇಕವೆನ್ನಬಹುದು.

ನೇ-- ಇದು ಆತ್ಮಾನುಶಾಸನವಾಗಬಲ್ಲದೆ?

ವಿ-- ನಿಜ, ಮನಸ್ಸಿನ ಮೇಲೆ ಆತ್ಮಾನುಶಾಸನವನ್ನು ಅನುಷ್ಠಾನಕ್ಕೆ ತರಲು ಭೇದ ವಿಜ್ಞಾನದ ಅಗತ್ಯವಿದೆ. ಅಥವಾ ಮನಸ್ಸಿನ ಮೇಲೆ ನಿಯಂತ್ರಣ ಹೊಂದಲು ಭೇದ ವಿಜ್ಞಾನದ ಅಗತ್ಯವಿದೆ. ಅಂತರ್ಮುಖಿಯಾಗಿರುವುದೇ ಅಥವಾ ಆತ್ಮನ ಬಗ್ಗೆ ಧ್ಯಾನಿಸುತ್ತಿರುವುದೇ ಅನುಶಾಸನವೆನಿಸುತ್ತದೆ. ಅನುಶಾಸನವೆಂದರೆ ಲೌಕಿಕ ದೃಷ್ಟಿ ಯಲ್ಲಿ ಆಜ್ಞೆ ಅಥವಾ ಬಲಾತ್ಕಾರ ಎಂದಾಗುತ್ತದೆ. ಆದರೆ ಆತ್ಮನ ಮೇಲೆ ನಿಯಂತ್ರಣ ಇಡುವುದು ಒಳ್ಳೆಯದು.

ನೇ– ಅಂದರೆ ತನ್ನಲ್ಲಿ ತಾನೇ ವ್ಯೆಮರೆಯುವುದೆಂದಲ್ಲವೆ? [ಆತ್ಮದ ಬಗ್ಗೆ ಧ್ಯಾನಿಸುವುದಲ್ಲವೆ?]

ವಿ– ಹೌದು, ಆತ್ಮದ ಬಗ್ಗೆ ಚಿಂತಿಸುವುದು ಇತರ ವಸ್ತುಗಳ ಮೇಲಿರುವ ಮಮಕಾರ[ಮೋಹ]ದಿಂದ ನಮ್ಮನ್ನು ಬೇರ್ಪಡಿಸುತ್ತದೆ.

ನೇ– ಹಾಗಾದರೆ ಇದು ಭೇದ ವಿಜ್ಞಾನವೆ?

ವಿ– ಹೌದು, ಕುಂದಕುಂದಾಚಾರ್ಯರ ಪ್ರಕಾರ ಶುದ್ಧ ಆತ್ಮನನ್ನು ಹೊರ ತಾಗಿ ಉಳಿದೆಲ್ಲವೂ ಒಂದಕ್ಕೊಂದು ಕೂಡಿರುವ, [ಸೇರಿರುವ] ಎಷ್ಟು ಒಂದುಗೂಡು ತ್ತವೋ ಅಷ್ಟೇ ಬಾರಿ ಅವುಗಳು ಅಗಲುತ್ತವೆ. ಇವನ್ನು ಅರ್ಥ ಮಾಡಿಕೊಂಡು ದುಃಖವು ಸಂಭವಿಸುವ ಮೊದಲೇ ನಾವು ಆತ್ಮನ ಕುರಿತಾಗಿ ಧ್ಯಾನದಲ್ಲಿ ತೊಡಗ ಬೇಕು.

ನೇ– ಒಂದನ್ನೊಂದು ಸೇರುವುದೂ, ಪರಸ್ಪರ ಅಗಲುವುದೂ, ಇದೂ ಕೂಡ ಭೇದ ವಿಜ್ಞಾನವಲ್ಲವೆ? ಶರೀರವನ್ನು ಆತ್ಮ ಎಂದಾದರೂ ಬಿಡಲೇಬೇಕಲ್ಲವೆ?

ವಿ– ಹೌದು, ಇದು ರಾಗ ದ್ವೇಷಗಳ ಸಮಾಪ್ತಿ. [ಶರೀರದ ಮೇಲಿರುವ ಮೋಹದ ಕೊನೆ] ಭೇದ ವಿಜ್ಞಾನದ ಭೇದದ ಅರ್ಥ ಗೊತ್ತಿರದೆ ಜನರು ರಾಗ ದ್ವೇಷ[ಮೋಹ]ಕ್ಕೆ ಒಳಗಾಗುತ್ತಾರೆ. ರಾಗದಲ್ಲೇ ದ್ವೇಷವಿದೆ. ಹುಡುಗನ ಮೇಲೆ ತಾಯಿಯು ವಾತ್ಸಲ್ಯದ ಹೊಳೆಯನ್ನು ಹರಿಸುತ್ತಾಳೆ [ಪ್ರೀತಿಸುತ್ತಾಳೆ]. ಒಂದು ವೇಳೆ ಅವನು ತಾಯಿಯ ಮಾತನ್ನು ಕೇಳದಿದ್ದರೆ ಗದರಿಸುತ್ತಾಳೆ [ಕೋಪಗೊಳ್ಳು ತ್ತಾಳೆ]. ಹೀಗೆ ಪ್ರೇಮ, ಪ್ರೀತಿಯೇ ದ್ವೇಷಕ್ಕೆ ಕಾರಣ.

ನೇ– ಇವೆರಡು ಯಾವುದರ ಎರಡು ಮುಖಗಳು?

ವಿ– ಎಲ್ಲಿ ಪ್ರೇಮವಿರುತ್ತದೆ, ಅಲ್ಲಿ ದ್ವೇಷವೂ ಇರುತ್ತದೆ.

ನೇ– ಆದರೆ ಇವೆರಡು ಒಂದೇ ನಾಣ್ಯದ ಎರಡು ಮುಖಗಳಾಗಲಾರವು. [ಯಾಕೆಂದರೆ ಒಂದು ಪ್ರೀತಿ, ಪ್ರೇಮ: ಇನ್ನೊಂದು ದ್ವೇಷ].

ವಿ– ರಾಗ ದ್ವೇಷಗಳಿಂದ ಮುಕ್ತಿ ಹೊಂದಲಿಕ್ಕಾಗಿರುವ ಉಪಾಯವೆಂದರೆ ಭೇದ ವಿಜ್ಞಾನ.

ನೇ– ತಾವು ಸಮಾಜದಲ್ಲಿ ತಿರುಗಾಡುತ್ತೀರಿ. ಒಬ್ಬಂಟಿಗರಾಗಿಯೂ ಇರು ತ್ತೀರಿ. ಆದರೆ ಭೇದ ವಿಜ್ಞಾನದ ಅನುಭವವು ಯಾವಾಗ ಹೇಗೆ ಆಗುತ್ತದೆ?

ವಿ– ಇದು ಅವರವರ ಅಭ್ಯಾಸದ ಮೇಲೆ ಹೋಗುತ್ತದೆ[ಇರುತ್ತವೆ] ಕಲ್ಕತ್ತೆ ಯ ನ್ಯಾಶನಲ್ ಲೈಬ್ರೆರಿಯಲ್ಲಿ ಸಾವಿರಾರು ಶೋಧಕರು ಟಿಪ್ಪಣಿಗಳನ್ನು ತೆಗೆದು ಕೊಳ್ಳುತ್ತಿದ್ದರೂ, ಅಲ್ಲಿ ಯಾವುದೇ ತರಹದ ಶಬ್ದವುಂಟಾಗುತ್ತಿರಲಿಲ್ಲ. [ಮೌನವಾಗಿ ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಿದ್ದರು].

ನೇ– ಯಾವುದೇ ರೀತಿಯ ಶಬ್ದವುಂಟಾಗುತ್ತಿರಲಿಲ್ಲವೆ?

ವಿ– ಇಲ್ಲ, ನಾನು ಶೋಧಕರ ಹಿಂದೆ ಹೋಗುತ್ತಿದ್ದಾಗ ಯಾರೂ ತಿರುಗಿ ಕೂಡಾ ನೋಡಲಿಲ್ಲ. ಎಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ಮಗ್ನರಾಗಿರುತ್ತಿದ್ದರು. ತಮ್ಮ ಕೆಲಸದಲ್ಲಿ ಮಗ್ನರಾಗಿರುವುದರಿಂದ ಅವರಿಗೆ ತಮ್ಮ ಹಿಂದೆ ಏನೇನು ಆಗು ತ್ತದೆ ಎಂಬುದೂ ತಿಳಿಯುತ್ತಿರಲಿಲ್ಲ. ಹೀಗೆಯೇ ಯಾರು ಆತ್ಮದ ಬಗ್ಗೆ ಚಿಂತಿಸು ತ್ತಾರೋ ಅವರು ಸಮಾಜದಿಂದ[ಗುಂಪಿನಿಂದ] ಮುಕ್ತರಾಗಬಹುದು.

ನೇ– ಜನರ ಮಧ್ಯೆ ಇದ್ದೂ ಆತ್ಮದ ಬಗ್ಗೆ ಚಿಂತಿಸಲು ಆಗುತ್ತದೆಯೆ? ಸಂಸಾರದಲ್ಲಿ ನಾವೂ ಸೇರಿರುವಾಗ ಆತ್ಮನ ಬಗ್ಗೆ ಯೋಚನೆ ಮಾಡಲು ಸಮಯ ಸಿಗುತ್ತದೆಯೆ?

ವಿ– ಸಿಗುತ್ತದೆ. ಆದರೆ ಅಭ್ಯಾಸದ ಮೇಲೆ ಹೋಗುತ್ತದೆ.

ನೇ– ಅಂಥವರು ಗುಂಪಿನಲ್ಲಿದ್ದರೂ ಆತ್ಮನ ಬಗ್ಗೆ ಚಿಂತಿಸುತ್ತಾರಲ್ಲವೆ? [ಧ್ಯಾನಿಸುತ್ತಾರಲ್ಲವೆ?]

ವಿ– ಗುಂಪಿನಲ್ಲಿದ್ದರೂ ತಾವು ಅದರೊಳಗೆ ಸೇರಿಕೊಂಡಿಲ್ಲ ಎಂಬುದು ತಿಳಿದು ಕೊಳ್ಳಬೇಕು. ಆದರೆ ಇದು ಅಭ್ಯಾಸದಿಂದ ಸಾಧ್ಯ.

ನೇ– ಅಭ್ಯಾಸವನ್ನು ಹೇಗೆ ಮಾಡಬಹುದು?

ವಿ– ಯಾವಾಗ ಆತ್ಮನ ಮುಕ್ತಿ ಬಗ್ಗೆ ಚಿಂತೆ ಹೆಚ್ಚಾಗುತ್ತದೋ ಆಗ ತನ್ನಿಂದ ತಾನೇ ಧ್ಯಾನದ ಅಭ್ಯಾಸವು ಉಂಟಾಗುತ್ತದೆ.

ನೇ– ಜನರ ಮನಸ್ಸಿನಲ್ಲಿ ಮುಕ್ತಿಯ ಬಗ್ಗೆ ಪ್ರಶ್ನೆಯಾವಾಗ ಉಂಟಾಗುತ್ತದೆ?

ವಿ– ಆತ್ಮವು ಅತ್ಯಂತ ಚೈತನ್ಯಶಾಲಿಯೆಂದು ತಿಳಿದುಕೊಳ್ಳಬೇಕು. ನೀವು ಪ್ರತಿಯೊಂದು ವಸ್ತುವು ಕೂಡಾ ಬೆಲೆ ಬಾಳುವಂಥದ್ದು ಎಂದು ಹೇಳುತ್ತೀರಿ. ಆದರೆ ತಮ್ಮ ಆತ್ಮವು ಅದಕ್ಕಿಂತ ಹೆಚ್ಚು ಬೆಲೆ ಬಾಳುವುದೆಂದು ನೀವೇಕೆ ತಿಳಿದುಕೊಳ್ಳುವು ದಿಲ್ಲ? ಎಲ್ಲಾ ಭಾವನೆಗಳೂ ಆತ್ಮನಲ್ಲಿ ಅಡಕವಾಗಿದ್ದರೂ ಕೂಡಾ ನಾವು ಬಹಿರ್ಮುಖ ರಾಗಿ ಇಂದ್ರಿಯಗಳ ಜೊತೆಗೆ ಏಕೆ ತಿರುಗಾಡಬೇಕು? ಇದನ್ನು ನಮ್ಮಷ್ಟಕ್ಕೆ ನಾವೇ ತಿಳಿದುಕೊಳ್ಳಬೇಕು.

ನೇ– ಈ ವಿಷಯವೂ ಕೂಡಾ ಭೇದ ವಿಜ್ಞಾನದೊಂದಿಗೆ ಸಂಬಂಧವನ್ನು ಹೊಂದಿದೆಯೆ?

ವಿ– ಹೌದು. ಎಲ್ಲಾ ವಸ್ತುಗಳೂ ಭೇದ ವಿಜ್ಞಾನದಿಂದಲೇ ಪ್ರಕಟಗೊಳ್ಳು ತ್ತವೆ [ಅರಿವಾಗುತ್ತದೆ]. ಇದರ ಹೊರತು ಯಾವುದೇ ವಸ್ತುವಿನ ಗುಣಗಳನ್ನೂ ಅರಿಯಲಾಗುವುದಿಲ್ಲ.

ನೇ– ಭೇದ ವಿಜ್ಞಾನವನ್ನು ತಿಳಿಯದಿದ್ದರೆ ಆತನನ್ನು ದೌರ್ಭಾಗ್ಯವಂತ ಎನ್ನ ಬಹುದು. ಇದನ್ನು ತಿಳಿದುಕೊಂಡವನನ್ನು ಕುಬೇರನೆನ್ನಬಹುದಲ್ಲವೆ?

ವಿ– ಭೇದ ವಿಜ್ಞಾನವನ್ನು ಅರಿತುಕೊಂಡು ಮನುಷ್ಯ ಮಿಥ್ಯೆಯನ್ನು ಬಿಟ್ಟು ಸತ್ಯವನ್ನು ಕಂಡುಕೊಳ್ಳಬಹುದು.

ನೇ– ಭೇದ ವಿಜ್ಞಾನದಿಂದ ಭ್ರಮೆ ನಿರಸನವುಂಟಾಗುತ್ತದೆ. ಏಕೆಂದರೆ ಸತ್ಯದ ಅರಿವಾಗುತ್ತದೆ. ಇದೇ ಮುಕ್ತಿಗೆ ಹಾದಿಯಲ್ಲವೆ?

ವಿ– ಹೌದು. ಶರೀರದಲ್ಲಿ ಆತ್ಮ ಬುದ್ಧಿ ಇರುವುದು ಭ್ರಮೆಯಿಂದಲೇ ಆಗಿದೆ. ಭೇದ ವಿಜ್ಞಾನದಿಂದಲೇ ಇದನ್ನು ತಿಳಿಯಬೇಕು ಮತ್ತು ಆತ್ಮಾನುಭೂತಿಯುಂಟಾಗಬೇಕು.

ನೇ– ತಾವು ಭೇದ ವಿಜ್ಞಾನವನ್ನು ಅತ್ಯಂತ ಸುಲಭವಾಗಿ ನನಗೆ ವರ್ಣಿಸಿದಿರಿ. ವಂದನೆಗಳು.

— ಸಮಾಪ್ತಂ —



ವಿದ್ಯಾನಂದ ವಾಣಿ

## ಪೂಜೆಯ ಫಲ

ರೈತ ಬೀಜ ಬಿತ್ತುವನು. ಹುಲ್ಲಿಗಾಗಿ ಬಿತ್ತುವುದಿಲ್ಲ, ಫಲಕ್ಕಾಗಿ ಬಿತ್ತುವನು. ಫಲದ ಜೊತೆಯಲ್ಲಿ ಹುಲ್ಲೂ ಬರುತ್ತದೆ, ಹೊಟ್ಟೂ ಬರುತ್ತದೆ, ಬರುವ ಹಾಗಿಲ್ಲ ಅಂತ ಇಲ್ಲ. ಅದೇ ರೀತಿಯಿಂದ ನಾವು ಮೋಕ್ಷ ಫಲದ ದೆಸೆಯಿಂದ ಪೂಜೆ ಮಾಡಿದರೆ ಸಂಸಾರ ಸುಖಗಳೂ ತಮ್ಮಷ್ಟಕ್ಕೆ ಸಿಗುತ್ತವೆ.

ವಿದ್ಯಾನಂದ ವಾಣಿ

## ರಕ್ಷಾ – ಬಂಧನ

ಆತ್ಮರಕ್ಷಣೆಗಾಗಿ ಬಂಧನವಿರಬೇಕು. ಇದೇ ರಕ್ಷಾ-ಬಂಧನ. ಬಂಧನ ಅಂದರೆ ವ್ರತ. ಎಲ್ಲಾದರೂ ಗದ್ದೆಗೆ ದನಗಳು ನುಗ್ಗಬಹುದೆಂದು ಬೆಳೆ ರಕ್ಷಣೆಗೋಸ್ಕರ ಬೇಲಿಯ ಬಂಧನ ಮಾಡುವರು. ನಮ್ಮ ಜೀವನದಲ್ಲಿ ಕೂಡಾ ಆತ್ಮ ರಕ್ಷಣೆಗಾಗಿ ನಾವು ಏನಾದರೂ ಬಂಧನ ತೆಗೆದುಕೊಳ್ಳಬೇಕು. ಆತ್ಮ ರಕ್ಷಣೆ, ಸಂಸ್ಕೃತಿ ರಕ್ಷಣೆ, ಪರಿವಾರ ರಕ್ಷಣೆ, ರಾಷ್ಟ್ರ ರಕ್ಷಣೆ, ಧರ್ಮ ರಕ್ಷಣೆ, ಆರೋಗ್ಯ ರಕ್ಷಣೆ, ಮುನಿಗಳ ರಕ್ಷಣೆ. ಇಷ್ಟು ವಿಶಾಲವಾಗಿ ರಕ್ಷಣೆಯು ವ್ಯಾಪ್ತಿಯಿದೆ.

## ಸಲಿಲಂ ಶಾಂತಿಕಂ ಚೈವ

ನೀರನ್ನು ದೇವರಿಗೆ ಸ್ಥಾಪನೆ ಮಾಡಿ 'ಸಲಿಲಂ ಶಾಂತಿಕಂ ಚೈವ' ಎಂದು ಹೇಳುವರು. ನೀರನ್ನೇ ಏಕೆ ದೇವರಿಗೆ ಹಾಕಬೇಕು? ನೀರು ಶೀತಲವಾಗಿದೆ. ಸರಸ್ವತಿಯ ಕೈಯಲ್ಲಿ ಕಮಂಡಲವಿದೆ, ಏಕೆ? ಅನ್ನ ಇಲ್ಲದಿದ್ದರೂ ಕೂಡಾ ಶ್ವಾಸೋಚ್ಛ್ವಾಸಕ್ಕೆ ನೀರು ಬೇಕು, ಜಗತ್ತಿನ ಎಲ್ಲಾ ಪ್ರಾಣಿಗಳಿಗೂ ನೀರು ಬೇಕು, ನೀರು ತಂಪಾಗಿರುವುದು. ನಮ್ಮ ಆತ್ಮದಲ್ಲೂ ಶೀತಲ ಗುಣವಿದೆ. ಅದನ್ನು ನಾವು ಅನುಭವಿಸಬೇಕು.

## ಪಾಪ – ಪುಣ್ಯ ಎರಡೂ ಒಂದೆ

ಔದೇಯಿಕ ಭಾವದಿಂದ ಉಂಟಾಗುವ ಪುಣ್ಯ ಪಾಪಗಳು ಆತ್ಮನಿಗೆ ಅಂಟಿಕೊಳ್ಳುವುವು. ಇವೆರಡೂ ಬಂಧನಕಾರಿಗಳೇ. ನೋಡಿ, ಪುಣ್ಯವೂ ಬಂಧನಕಾರಕ, ಪಾಪವೂ ಬಂಧನಕಾರಕ. ಬೇಡಿ ಕಬ್ಬಿಣದ್ದು ಹಾಕಲಿ ಕೈಕಾಲಿಗೆ, ಅನಂತರ ಹೋಗಲಿಕ್ಕಾಗದು. ಪುಣ್ಯದಿಂದ ನಮಗೆ ಮುಕ್ತಿ ಸಿಗುವ ಹಾಗಿಲ್ಲ. ಪಾಪ ಪುಣ್ಯ ಎರಡೂ ಒಂದೇ.

# ತೃತೀಯ ಖಂಡ

## ವಿಜ್ಞಾಪನಾ ಖಂಡ

[ವಿಜ್ಞಾಪನಾ ಮೂಲಕ ಸಂಘ, ಸಂಸ್ಥೆ, ಉದ್ಯೋಗ, ವ್ಯಾಪಾರಸ್ಥರ ಪರಮ ಪೂಜ್ಯ ಏಲಾಚಾರ್ಯ ವಿದ್ಯಾನಂದ ಮುನಿಶ್ರೀಗಳವರ 'ಷಷ್ಠಿ ಪೂರ್ತಿ ಸುಸಂದರ್ಭ'ದಲ್ಲಿ ವಿನಯಾಂಜಲಿ ಸಮರ್ಪಣೆ]

ತಪವು ಮನುಷ್ಯನಿಗೆ ಎಲ್ಲಾ ಕ್ಷೇತ್ರಗಳಲ್ಲಿ ಸಮುನ್ನತಿಯನ್ನೀಯುತ್ತದೆ ಮತ್ತು ಅವನನ್ನು ಮನುಜನನ್ನಾಗಿ ಮಾಡುತ್ತದೆ; ಆದರೆ ತಪೋರಹಿತನಿಗೆ ಪತನದ ಮಾರ್ಗವನ್ನೇ ನೋಡಬೇಕಾಗುತ್ತದೆ. 'ತಪ'ದ ವಿಲೋಮ ಸ್ಥಿತಿಯು 'ಪತ'ವಾಗಿದೆ, ಆದರ ಅರ್ಥವು ಪತನವೆಂದಾಗುತ್ತದೆ. ತನ್ನ ಪರಿಶ್ರಮದ ಪರಿಣಾಮವು ಮಾಲೆ ಮತ್ತು ಮಣಿ- ಎರಡರಲ್ಲೂ ಸಿಗುತ್ತದೆಂದಾದರೆ ಯಾವ ಬುದ್ಧಿವಂತನು ಮಣಿಯನ್ನು ಬಿಟ್ಟು ಮಾಲೆಯನ್ನು ಗ್ರಹಣೆ ಮಾಡುತ್ತಾನೆ?

—ಏಲಾಚಾರ್ಯ ವಿದ್ಯಾನಂದ ಮುನಿ.



ಪ್ರವೃತ್ತಿ ಮತ್ತು ನಿವೃತ್ತಿಯೆಂಬುದಾಗಿ ಎರಡು ಮಾರ್ಗಗಳಿವೆ. ಪ್ರವೃತ್ತಿ ಮಾರ್ಗವು ಸರಳವಾಗಿದೆ ಮತ್ತು ನಿವೃತ್ತಿ ಪಥವು ಕಠಿಣವಾಗಿದೆ. ಸರಳವಾಗಿದ್ದೂ ಪ್ರವೃತ್ತಿ ಮಾರ್ಗವು ಜನ್ಮ. ಜರಾ. ವ್ಯಾಧಿ. ಆಧಿ ಮೊದಲಾದ ದುಶ್ಚಿಂತೆಗಳ ನಿಕೇತನವಾಗಿದೆ ಮತ್ತು ನಿವೃತ್ತಿಪಥವು ಜನ್ಮ ಸಂಕಟಗಳ ನಿವಾರಕವಾಗಿದೆ. ಕರ್ಮಕ್ಷಯ ಮತ್ತು ಬೋಧಿಲಾಭ ಮಾಡುತ್ತಾ ಅನಂತ ಭವಚಕ್ರದಿಂದ ಮುಕ್ತನಾಗುವುದು ಪುರುಷಾರ್ಥದ ಚರಮ ಮತ್ತು ಪರಮ ಪ್ರಾಪ್ತಿಯಾಗಿದೆ. ಆದುದರಿಂದ ಪ್ರವೃತ್ತಿಯಿಂದ ದೂರವಾಗಿ ನಿವೃತ್ತಿಯತ್ತ ಮುಂದಾಗುವುದು ಆವಶ್ಯಕವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಜ್ಞಾನವಂತನು ಸರ್ವಜ್ಞನಾಗುತ್ತಾನೆ. ಯಾವ ವಿಷಯವನ್ನು ಸ್ಪರ್ಶಿಸುತ್ತಾನೋ, ಅದನ್ನವನಿಗೆ ಸ್ವಯಂ ಹಾಡಿ ಹೇಳುತ್ತದೆ. ದರ್ಪಣದಲ್ಲಿ ಬಿಂಬವು ಕಾಣುವಂತೆ ಆತ್ಮನಲ್ಲಿ ಎಲ್ಲವೂ ಕಾಣುತ್ತದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



## ಅಭೀಕ್ಷ್ಣ ಜ್ಞಾನೋಪಯೋಗ

ಸ್ವಾಧ್ಯಾಯವು ಜ್ಞಾನೋಪಯೋಗದ ವ್ಯವಹಾರ - ಮಾರ್ಗವಾಗಿದೆ ಮತ್ತು ನಾನು ಶುದ್ಧ, ಮುಕ್ತ ಪರಮಾತ್ಮನಾಗಿರುತ್ತೇನೆ. ಆತ್ಮಸ್ವರೂಪನಾಗಿದ್ದೇನೆ, ಇದು ಜ್ಞಾನೋಪಯೋಗದ ನಿಶ್ಚಯ ಪರಿಣಾಮವಾಗಿದೆ. ಹೇಗೆ ನಾವು ಗ್ರಂಥದ ಅಕ್ಷರಗಳನ್ನು ಅರ್ಥರೂಪದಲ್ಲಿ ಪರಿಣಮಿಸಿ ಉಪಯೋಗಿಯಾಗಿ ಮಾಡುತ್ತೇವೆಯೋ, ಅದೇ ರೀತಿ ಜ್ಞಾನದಿಂದ ವಿಶ್ವದ ಸಮಸ್ತ ಪದಾರ್ಥಗಳು ತನ್ನ ವಾಸ್ತವಿಕ ಸ್ವಭಾವದಲ್ಲಿ ಪ್ರತೀತಿಯಾಗುತ್ತವೆ. ಅಭೀಕ್ಷ್ಣ ಜ್ಞಾನೋಪಯೋಗವು ಅಜ್ಞಾನದ ಅಂಧಕಾರದಲ್ಲಿ ಮುಳುಗುವುದಿಲ್ಲ, ಏಕೆಂದರೆ ಅದು ಜ್ಞಾನೋಪಯೋಗ ರೂಪ ಸೂರ್ಯನನ್ನು ಜಾಗೃತಗೊಳಿಸುತ್ತದೆ.

—ಏಲಾಚಾರ್ಯ ವಿದ್ಯಾನಂದ ಮುನಿ



ಅಹಿಂಸೆಯು ಮಾತೆಯ ತೊಡೆಯಂತೆ ಸಮಸ್ತ ಪ್ರಾಣಿಗಳಿಗೆ ಅಭಯವನ್ನೀಯುತ್ತದೆ.

—ಏಲಾಚಾರ್ಯ ವಿದ್ಯಾನಂದ ಮುನಿ



Maitripramodakarunyamadhyasthani cha
Sattvagunadhikaklisvamanavineyesu

**( : TATVARTHASUTRAM :**

*BY*

**SRI UMASWAMI ACHARYA)**

"Benevolence towards all living beings, devotion to the virtuous, compassion towards the tormented and unconcern towards the indecorous and insolent persons".

He who conducts himself in this manner
is able to practise nonviolence and
other vows to perfection.

ಈ ಸಂಸಾರದಲ್ಲಿ ಧರ್ಮವೆಂಬ ವಸ್ತುವು ಒಂದೇ ಆಗಿದೆ, ಅನೇಕವಾಗಿಲ್ಲ. ಅದಕ್ಕೆ ಅನಂತಾನಂತ ಗುಣಗಳಿರಬಹುದು ಆದರೆ ಧರ್ಮವು ಯಾವ ಅವಸ್ಥೆಯಲ್ಲೂ ಎರಡಾಗುವುದು ಸಾಧ್ಯವಿಲ್ಲ. ಸರ್ಪ-ಸರ್ಪಿಣಿಗೂ ಣಮೋಂಕಾರ ಮಂತ್ರವನ್ನು ಎಲ್ಲಿ ಹೇಳುತ್ತಾರೋ ಹಾಗೂ ನಾಯಿಗೂ ಣಮೋಂಕಾರ ಮಂತ್ರ ಹೇಳಿ ಅದರ ಉದ್ಧಾರವನ್ನೂ ಮಾಡುತ್ತಾರೋ, ಆ ಜೀವಂಧರನ ಧರ್ಮವೇ ನಮ್ಮ 'ವಿಶ್ವಧರ್ಮ'ವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಪಂಚಪದಂ ಭವಭವದೊಳು ।
ಸಂಚಿತ ಪಾಪಮನೆ ಕೆಡಿಸಲಾರ್ಕಮವೋಘಂ ॥
ಪಂಚಮಗತಿಗಿರದೊಯಿಗುಂ ।
ಪಂಚಪದಾಕ್ಷರದ ಮಹಿಮೆ ಸಾಧಾರಣಮೆ! ॥

ಪಂಚನಮಸ್ಕಾರ ಮಂತ್ರವನ್ನು, ಪಂಚಮ ರಾಗದಲ್ಲಿ ಹಾಡಿ,

ಪಂಚಮಗತಿಗೆ (ಮೋಕ್ಷ) ದಾರಿದೋರುತ್ತಿರುವ

**ಪರಮಪೂಜ್ಯ ಏಲಾಚಾರ್ಯ ಮುನಿಶ್ರೀ**

# ವಿದ್ಯಾನಂದ ಮುನಿಮಹಾರಾಜರ

**ಷಷ್ಟ್ಯಬ್ದಪೂರ್ತಿ ಸಮಾರಂಭದ ಮಂಗಲ ಮುಹೂರ್ತದಲ್ಲಿ**

## ಅನಂತ ನಮೋಸ್ತುಗಳು.

卐

ಪ್ರಾಂಶುಪಾಲರು, ಅಧ್ಯಾಪಕರು, ವಿದ್ಯಾರ್ಥಿಗಳು,
ಶ್ರೀ ಜೈನ ಜ್ಯೂನಿಯರ್ ಕಾಲೇಜು,
ಶ್ರೀ ಧವಲಾ ಕಾಲೇಜು,
ಡಿ. ಜೆ. ಖಾಸಗಿ ಹಿರಿಯ ಪ್ರಾಥಮಿಕ ಶಾಲೆ,
ಮೂಡುಬಿದ್ರಿ, ದ. ಕ.

ಅಧ್ಯಕ್ಷರು, ಸದಸ್ಯರು,
ಶ್ರೀ ದಿ. ಜೈನ ವಿದ್ಯಾವರ್ಧಕ ಸಂಘ (ರಿ)
ಮೂಡುಬಿದ್ರಿ, ದ. ಕ.

## ಶರೀರ - ಮನುಷ್ಯ, ಆಚರಣೆ - ಮನುಷ್ಯ

ಶರೀರದಿಂದ ಮನುಷ್ಯನಾಗುವುದು ಒಂದು ಮಾತು ಮತ್ತು ಆಚರಣೆಯಿಂದ ಮನುಷ್ಯನಾಗುವುದು ಬೇರೆಯೇ ಮಾತಾಗಿದೆ. ಇಂದು ಪ್ರಾಯಃ ಶರೀರ ಮನುಷ್ಯರು ಅತಿ - ಸಂಖ್ಯೆಯಲ್ಲಿದ್ದಾರೆ - ಸರಕಾರಕ್ಕೆ ಅವರ ಉದರಪೋಷಣೆಗಾಗಿ ವಿದೇಶಗಳಿಂದ ಅನ್ನ - ಯಾಚನೆ ಮಾಡಬೇಕಾಗುತ್ತದೆ, ಆದರೆ ಅವರಲ್ಲಿ ಆಚಾರವಂತ ಮನುಷ್ಯರು ಬಹಳ ಅಲ್ಪ ಸಂಖ್ಯೆಯಲ್ಲಿದ್ದಾರೆ. ಆಚಾರವಂತರ ಸಂಖ್ಯೆಯು ಹೆಚ್ಚಾದಾಗ ರಾಷ್ಟ್ರವು ಸರ್ವತೋಮುಖಿ ಉನ್ನತಿಯನ್ನು ಮಾಡುತ್ತದೆ. ಸಂಖ್ಯೆ - ಪೂರ್ತಿ ಮಾಡುವವರು ಎಂದೂ ವಿಜಯ ಗಳಿಸಲಿಲ್ಲ.

—ಏಲಾಚಾರ್ಯ ವಿದ್ಯಾನಂದ ಮುನಿ



ಶೀಲ ಮತ್ತು ಸಂಯಮವೇ ಜೀವನದ ನಿಜವಾದ ಸೌಂದರ್ಯವಾಗಿದೆ. ಇಂದ್ರಿಯ ಸಂಯಮ ಮತ್ತು ಮನಸ್ಸಿನ ಏಕಾಗ್ರತೆಯಿಲ್ಲದೆ ಅನಂತ ವೈಭವ ಶಾಲಿ ಆತ್ಮನ ದರ್ಶನವಾಗದು.

—ಏಲಾಚಾರ್ಯ ವಿದ್ಯಾನಂದ ಮುನಿ.



ವೈಶಾಲಿಯಲ್ಲಿ ಮಹಾವೀರರು ಜನ್ಮ ಪಡೆದಿಲ್ಲ, ಆ ವಿಶಾಲ ವೈಶಾಲಿಯು ನಮ್ಮ ಹೃದಯದಲ್ಲಿದೆ. ನಮ್ಮ ನಿರ್ಮಲ ಮನಸ್ಸೇ ಪಾವಾಪುರಿಯ ಸರೋವರವಾಗಿದೆ. ನಿಜವಾದ ನಿರ್ವಾಣೋತ್ಸವವನ್ನು ನಮಗೆ ಇಲ್ಲೇ ಆಚರಿಸಬೇಕಾಗಿದೆ: ಮತ್ತು ಮಹಾವೀರರ ಕಾರ್ಯಗಳನ್ನು, ಉಪದೇಶಗಳನ್ನು ತನ್ನ ಮತ್ತು ಇತರರ ಜೀವನದಲ್ಲಿ ಅವತರಿಸಬೇಕಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ



## ಜ್ಞಾನ: ಪ್ರತಿಕ್ಷಣ ನೂತನ

ಜ್ಞಾನದ ಪಿಪಾಸೆಯು ಎಂದಿಗೂ ಶಾಂತವಾಗಲಾರದು. ಜ್ಞಾನವು ಪ್ರತಿಕ್ಷಣ ನೂತನವಾಗಿರುತ್ತದೆ, ಅದೆಂದೂ ಜೀರ್ಣ ಯಾ ಪುರಾತನವಾಗದು. ಸ್ವಾಧ್ಯಾಯ, ಚಿಂತನೆ, ತಪ, ಸಂಯಮ, ಬ್ರಹ್ಮಚರ್ಯ ಮೊದಲಾದ ಉಪಾಯಗಳಿಂದ ಜ್ಞಾನ - ನಿಧಿಯನ್ನು ಪ್ರಾಪ್ತಿಸಿಕೊಳ್ಳಬಹುದು.

—ಏಲಾಚಾರ್ಯ ವಿದ್ಯಾನಂದ ಮುನಿ



## ಶ್ರೇಷ್ಠ ಮಾನವ: ರಾಷ್ಟ್ರದ ಮೂಲ ಧನ

ರಾಷ್ಟ್ರವನ್ನು ಮೆಶೀನು – ಕಾರ್ಖಾನೆಗಳಿಂದ, ಡಾಮರುಗಳ ರಸ್ತೆಯಿಂದ, ಗಗನಚುಂಬಿ ಭವನಗಳಿಂದ ನಿರ್ಮಾಣ – ಪಥದಲ್ಲಿ ಅಗ್ರಸರವೆಂದು ತಿಳಿಯಲಾಗುವುದಿಲ್ಲ. ಅದರ ಮೂಲಧನವಂತೂ ಶ್ರೇಷ್ಠ ಮಾನವ, ನಾಗಿದ್ದಾನೆ. ಸತ್ಯ, ಅಹಿಂಸೆ, ಅದ್ರೋಹ, ಲಾಭ – ಹಾನಿಯಲ್ಲಿ ಸಮದರ್ಶಿಯಾಗಿರುವವನು. ವಿಶ್ವದ ಸುಖ-ದುಃಖದಲ್ಲಿ ಸಹಭಾಗಿಯಾಗಿರುವವನು ಶ್ರೇಷ್ಠ ಮಾನವನಾಗಿದ್ದಾನೆ. ಎಲ್ಲರ ಪ್ರಿಯ ಮತ್ತು ಎಲ್ಲರಿಂದ ವಿಶಿಷ್ಟನಾಗಿದ್ದಾನೆ. ಸ್ವರೂಪಾಚರಣ ನಿಷ್ಠನಾಗಿದ್ದಾನೆ, ಸಂಸಾರವು ಸುಖಮಯ. ಪರಲೋಕವು ಸುಗಮ, ಮುಕ್ತಿ - ಪಥವು ಪ್ರಶಸ್ತವಾಗಿರುತ್ತದೆ.

—ಏಲಾಚಾರ್ಯ ವಿದ್ಯಾನಂದ ಮುನಿ



ಯಾರ ಮನಸ್ಸು ಉನ್ನತವೋ, ಅವರ ಭಾವವೂ ಉಚ್ಚವಾಗಿದೆ. ಮನಸ್ಸೇ ಮುಕ್ತಿಯ ಮಾಧ್ಯಮ ಮತ್ತು ಮನಸ್ಸೇ ಮೃತ್ಯುವಿನ ಕಾರಣವಾಗಿದೆ. ಮನುಷ್ಯನ ಮನಸ್ಸು ಕಷಾಯ (ಕಾಮ-ಕ್ರೋಧ, ಮದ-ಲೋಭ, ಮೋಹ ಇತ್ಯಾದಿ) ಗಳಿಂದ ಮುಕ್ತವಾಗದಿದ್ದಲ್ಲಿ ಅವನ ಅಂತರಂಗವೂ ಶುಚಿಯಾಗದು ಮತ್ತು ಅಹಿಂಸೆಯೂ ವಿಕೃತವಾದೀತು.

—ಏಲಾಚಾರ್ಯ ವಿದ್ಯಾನಂದ ಮುನಿ.



With best compliments from:



ಒಂದು ಬಿಂದು ಜಲಕ್ಕಾಗಿ ಒದ್ದಾಡಿ ಸಾಯುವವನ ಶವದ ಮೇಲೆ ಹೇಗೆ ಸಹಸ್ರ ಕಲಶ ಜಲವನ್ನು ಹಾಕುವುದು ವ್ಯರ್ಥವೋ, ಅದೇ ರೀತಿ ಸಮಯ ಕಳೆದ ಬಳಿಕ ಮಾಡುವ ಪುರುಷಾರ್ಥವೂ ಫಲಶೂನ್ಯವಾಗುತ್ತದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಒಂದು ರೆಕ್ಕೆಯಿಂದ ಪಕ್ಷಿಯು ಹಾರಲಾರದು, ಅದೇ ರೀತಿ ಚಾರಿತ್ರವಿಲ್ಲದೆ, ಜ್ಞಾನದರ್ಶನದ ರಥವು ತಿರುಗಲಾರದು.

—ಏಲಾಚಾರ್ಯ ವಿದ್ಯಾನಂದ ಮುನಿ.



OUR PRANAMS TO PARAMAPUJYA ELACHARYA VIDYANANDA MUNI MAHARAJ, Who is heralding as the LIGHT OF INDIA in the footprints of Thirthankaras.

***Adinatha Enterprises,***

Movie – Film Exhibitors

C/o. Padma Talkies, MYSORE-4.

AND

**MARUDEVI FILMS,**

Movie—Film Distributors,

Harsha Road, MYSORE - 1.

K. Raghuchandra Ajri,

873, "ADINATHA KRUPA"

Vanivilasa Road, MYSORE - 4.

ವಿನಯವು ಮಾನವ ಜೀವನದ ಅಮೂಲ್ಯ ನಿಧಿಯಾಗಿದೆ. ಜ್ಞಾನದ ಗರ್ವವು ಒಳಗಿನ ಅಜ್ಞಾನದ ದ್ಯೋತಕವಾಗಿದೆ. ಗುಣವಂತರು ಮತ್ತು ಗುರುಹಿರಿಯರಲ್ಲಿ ಆದರ ಭಾವನೆಯಿಡುವುದರಿಂದಲೇ ಸಮಾಜ ವ್ಯವಸ್ಥೆಯು ಸ್ಥಿರವಾಗಿ ನಿಲ್ಲಬಲ್ಲುದು.

—ಏಲಾಚಾರ್ಯ ವಿದ್ಯಾನಂದ ಮುನಿ.

卐

*With best compliments from:*



ಮೂರ್ತಿಯಂತೂ ಬಾಹ್ಯ ಆಲಂಬನಕ್ಕಾಗಿ ಸಾಧನ ಮಾತ್ರವಾಗಿದೆ. ಭಕ್ತನ ಧ್ಯೇಯವು ಮೂರ್ತಿಯ ಮಾಧ್ಯಮದಿಂದ ಮೂರ್ತಿಮಾನ್ ಪರಮೇಶ್ವರಸತ್ತ, ಅದಕ್ಕೂ ಮುಂದೆ ಅಂತರ್ಯಾಮಿ ಚೈತನ್ಯ ಚಮತ್ಕಾರ ಮೂರ್ತಿ ಅನಂತ ಶಕ್ತಿವಂತ ಸ್ವಾತ್ಮ ತತ್ವದ ಪ್ರಾಪ್ತಿಯಾಗಿರುತ್ತದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



## ಚರಿತ್ರವು ಹೊಲ, ಸದ್ಧರ್ಮವು ಬೀಜ

ಭಾರತವು ಧರ್ಮಭೂಮಿಯಾಗಿದೆ. ಅನಾದಿಕಾಲದಿಂದ ಇಲ್ಲಿಯ ಧರ್ಮ - ಕೃಷಿಕರು ತಮ್ಮ ಚರಿತ್ರವೆಂಬ ಹೊಲದಲ್ಲಿ ಧರ್ಮದ ಬೀಜವನ್ನು ಬಿತ್ತುತ್ತಾ ಬಂದಿದ್ದಾರೆ. ಭಾರತೀಯರ ಚತುರ್ವಿಧ ಪುರುಷಾರ್ಥದಲ್ಲಿ ಪ್ರಥಮ ಪುರುಷಾರ್ಥವು ಧರ್ಮವಾಗಿದೆ. ನಮ್ಮಲ್ಲಿ ಧರ್ಮವನ್ನು ಉತ್ಕೃಷ್ಟ ಮಂಗಲ. ಪವಿತ್ರ ಆಚಾರಾಂಗ, ನ್ಯಾಯದ ಆಧಾರ, ಜೀವನದ ಗಂತವ್ಯ ದಿಶೆ, ಆದರಣೀಯತೆಯ ಪ್ರಮುಖ ಅಂಗ, ಚಿಂತನೆಯ ಸರ್ವೋಚ್ಚ ಆಧಾರ, ವರೇಣ್ಯ, ಸ್ವಸ್ತಿಪ್ರದ, ಕಲ್ಯಾಣಕೃತ ವಸ್ತು, ಪರಮ ಸಮ್ಮಾನ್ಯವಾಗಿ ಮನ್ನಿಸಲಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ



## ಸ್ವದ್ರವ್ಯ ಆತ್ಮವೇ ಸಮಯ

ಜೀವನದ ಸಾರವು ಸಮಯವಾಗಿದೆ ಮತ್ತು ಸಮಯದ ಸಾರವು ಸ್ವಸಮಯವಾಗಿದೆ. ಯಾರು ಸಮಯವ ಚಿಂತನೆಗಾಗಿ ಸಾಮಾಯಿಕ ಮಗ್ನರಾಗಿರುತ್ತಾರೋ ಅವರು ಸ್ವಸಮಯವನ್ನು ಲಭಿಸುತ್ತಾರೆ. ಸಮಯದಲ್ಲಿ ಸ್ಥಿತನಾಗುವುದೇ ಸಾಮಾಯಿಕವಾಗಿದೆ. ಸಮಯವೇ ಸಮಯದ ಸಹಾಯತೆಯಿಂದ ಸಮಯದಲ್ಲಿ ಸ್ಥಿತವಾಗುತ್ತದೆ. ಅಂತಹ ಆ ಸಮಯವು ಸ್ವದ್ರವ್ಯ ಆತ್ಮವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ



ಆತ್ಮವು ಸತ್ಯವಾಗಿದೆ, ಶಾಶ್ವತವಾಗಿದೆ - ಈ ವಿಶ್ವಾಸದೊಂದಿಗೆ ಯಾರು ಆತ್ಮನ ಶೋಧವನ್ನು ಮಾಡುತ್ತಾರೋ, ಅವರೇ ನಿಜವಾದ ಆಸ್ತಿಕರಾಗಿದ್ದಾರೆ. ಆತ್ಮನು ಸ್ವಯಂ ಸುಖರೂಪಿಯಾಗಿದ್ದಾನೆ. ಸುಖವು ಹೊರಗಿನಿಂದ ಲಭಿಸುವುದಿಲ್ಲ. ಆತ್ಮಸ್ವರೂಪವನ್ನರಿಯಲು ಏಕಾಗ್ರರಾಗಿ ಕೆಲವು ಕ್ಷಣಗಳವರೆಗಾದರೂ ನಿಯಮಿತ ರೂಪದಲ್ಲಿ ಆತ್ಮಧ್ಯಾನವನ್ನು ಮಾಡಬೇಕು.

—ಏಲಾಚಾರ್ಯ ವಿದ್ಯಾನಂದ ಮುನಿ.







ಬಹಿರಂಗ ತ್ಯಾಗದೊಂದಿಗೆ ಅಂತರಂಗ ಪರಿಗ್ರಹದತ್ಯಾಗವು ಕೂಡಾ ಅತ್ಯಂತ ಆವಶ್ಯಕವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.





ಮನ, ವಚನ ಮತ್ತು ಕಾಯ - ಸಂಯಮದಿಂದ ಜ್ಞಾನದ ಅಕಂಪ ದೀಪವು ಪ್ರಜ್ವಲಿಸುತ್ತದೆ. ಯಾರು ಈ ಮೂರರಕ್ಕೂ ತ್ರಿವೇಣಿ ಸಂಗಮವನ್ನೀಯಲು ಅಸಮರ್ಥನೋ, ಅವನ ಚಂಚಲ ಮನಸ್ಸಿನ ಬಿರುಗಾಳಿಯು ಜ್ಞಾನ - ದೀಪವನ್ನು ಆರಿಸುವ ಪ್ರಯತ್ನವನ್ನು ಮಾಡುತ್ತಾ ಇರುತ್ತದೆ. ಸತ್ - ಅಸತ್‌ನ ವಿವೇಕವು ಜ್ಞಾನದಿಂದಲೇ ಸಂಭವವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಧಾರ್ಮಿಕ ಪುರುಷರಿಲ್ಲದೆ ಧರ್ಮವು ಸ್ಥಾಯಿಯಾಗಿ ನಿಲ್ಲದು. ವಿಜ್ಞಾನ ಯುಗದಲ್ಲಿ ಕ್ಷಣಿಕ ಭೌತಿಕ ಉಪಲಬ್ಧಿಗಳು ಪ್ರಾಪ್ತವಾದರೂ ಶಾಶ್ವತ ಸುಖ ಮತ್ತು ಶಾಂತಿವೀತರಾಗ ವಿಜ್ಞಾನದಿಂದಲೇ ಸಂಭವವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



## ಸ್ವತಃ ಚಲಿಸಿರಿ

ನಾವು ಭಗವಾನ್ ರಾಮನ ಅನುಯಾಯಿಗಳು, ಇಕ್ಷ್ವಾಕುವಂಶಿಗಳು, ಮನುವಿನ ವಂಶಧರರು. ಈ ವಂಶಗಳ ಅನುರೂಪವೇ ನಾವು ನಡೆದಿದ್ದೇವೆ, ನಡೆಯುತ್ತಿದ್ದೇವೆ, ನಡೆಯುತ್ತೇವೆ ಮತ್ತು ಮುಂದೆ ಹೋಗಲು ದೇಶಕ್ಕೆ, ಸಂಸಾರಕ್ಕೆ ಸಂದೇಶವೀಯುತ್ತೇವೆ, ಸ್ವಯಂ ನಡೆದು ತೋರಿಸುತ್ತೇವೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಧರ್ಮದ ಮೇಲೆ ಸ್ವಲ್ಪವಾದರೂ ಧೃಢಶ್ರದ್ಧೆ, ಧರ್ಮದ ಲಘು ಅಂಶ. ಭಕ್ತಿಭಾವನಾಪೂರ್ಣ ಸ್ವ
ದಾನವು ಕೂಡಾ ವಟಬೀಜದಂತೆ ವಿಶಾಲ ಪರಿಣಾಮದ್ದಾಗುವುದು.

—ಏಲಾಚಾರ್ಯ ವಿದ್ಯಾನಂದ ಮುನಿ



## ಸಾತ್ವಿಕತೆ: ಜೀವನದ ಸಮತಲ

ಯಾರು ಉನ್ನತನಾಗಲು ಇಚ್ಛಿಸುತ್ತಾನೋ, ದೀರ್ಘಜೀವನದ ಕಾಮನೆಯನ್ನು ಮಾಡುತ್ತಾನೋ, ಏನನ್ನಾದರೂ ಮಾಡುವ ಸಂಕಲ್ಪವಿಡುತ್ತಾನೋ, ಅವನಿಗೆ ಸಾತ್ವಿಕನಾಗುವುದವಶ್ಯಕವಾಗಿದೆ. ಸಾತ್ವಿಕತೆಯು ಜೀವನದ ಸಮತಲವಾಗಿದೆ, ಪ್ರಗತಿಯ ಪದಚಿಹ್ನೆಯನ್ನು ಅದರ ಮೇಲೆ ಸುಲಭತ: ಇಡಬಹುದಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ



## ಸಮಯ: ಚಿಂತಾಮಣಿ, ಕಾಮಧೇನು

ಸಮಯವು ಚಿಂತಾಮಣಿ, ಕಾಮಧೇನು ಮತ್ತು ವಾಂಛಿತ ಧನವಾಗಿದೆ. ಅದರಿಂದ ಏನನ್ನು ಬೇಡಿದರೂ ಸಿಗುತ್ತದೆ. ಸಮಯವು ಶ್ರಮಾಗ್ನಿಯಲ್ಲಿ ತಪ್ತವಾಗಿ ಸುವರ್ಣವಾಗುತ್ತದೆ. ಅವಸರದ ಸೀಪಿಯುಕ್ತಿ ಗರ್ಭವನ್ನು ಧರಿಸಿ ಮುಕ್ತಾಫಲವಾಗುತ್ತದೆ, ದುರಧಿಗಮ ಸಮುದ್ರವನ್ನು ಮಥಿಸಿ ರತ್ನರಾಶಿಯನ್ನು ಹೊರ ತರುತ್ತದೆ. ಸಮಯದ ಮೂಲಕವೇ ಸಂಸಾರದಲ್ಲಿ ಏನೂ ಮಾಡಬಹುದಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ



## ಅಹಿಂಸೆಯ ಉದಯ

'ಕೃಷಿ ಮತ್ತು ಋಷಿ' ಹಾಗೂ 'ಜೀವಿಸು ಮತ್ತು ಜೀವಿಸಲು ಬಿಡು' ಎಂಬ ಸಂಸ್ಕೃತಿಯ ಯಶೋಗಾನವು ಕೃತಯುಗದಿಂದ ಹಿಡಿದು ಇಂದಿನ ವಿಜ್ಞಾನ–ಯುಗದವರೆಗೆ ಆಗುತ್ತಿದೆ. ಸಂಸ್ಕೃತಿಯಿಲ್ಲದೆ ಮನುಷ್ಯನು 'ಮತ್ಸ್ಯನ್ಯಾಯ'ದಿಂದ ಮೇಲೆ ಹೇಗೆ ಏಳಿಯಾನು? ಅಹಿಂಸೆಯ ಉದಯವು ಶ್ರಮಣ ಸಂಸ್ಕೃತಿಯ ಭಾವಧಾರೆಯಿಂದಾಗಿದೆ. ಜ್ಞಾನಮಾರ್ಗದಲ್ಲಿ ಪ್ರೇರಣೆಯ ಪಾಠವು ಸಂಸ್ಕೃತಿಯ ಮೂಲಕ ಬರೆಯಲಾಗಿದೆ. ಚಿಂತನೆ ಮತ್ತು ಧ್ಯಾನದ ಆಳವನ್ನು ಸ್ವ-ಸಮಯದಲ್ಲೇ ಲಭಿಸಬಹುದಾಗಿದೆ. ವಿಶ್ವದ ಸಂಪೂರ್ಣ ಸಂಪತ್ತಿಗಳ ಮೇಲೆ ಅಮೋಹ, ಅನಾಸಕ್ತಿ, ಸಂಸ್ಕೃತಿಯಿಂದ ಪ್ರಾಪ್ತ ಸಮ್ಯಗ್ ದೃಷ್ಟಿಯ ಪರಿಣಾಮವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ



ಅಂತರದಲ್ಲಿ ಜ್ಞಾನ ಜ್ಯೋತಿಯ ಮತ್ತು ಬಾಹ್ಯದಲ್ಲಿ ವಿಶ್ವ ವಾತ್ಸಲ್ಯದ ದೀಪವನ್ನು ಪ್ರಜ್ವಲಿಸಿಯೇ ನಾವು 'ನರ-ಭವ'ವನ್ನು ಸಾರ್ಥಕಗೊಳಿಸಬಹುದಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ



ಮನುಷ್ಯನು ಪದ, ಪ್ರತಿಷ್ಠೆಗಾಗಿ ಮತ್ತು ಖ್ಯಾತಿಲಾಭಕ್ಕಾಗಿ ನಿರಂತರ ಪ್ರಯತ್ನ ಮಾಡುತ್ತಾನೆ ಆದರೆ ಪುಣ್ಯೋದಯವಿಲ್ಲದೆ ಏನೂ ಪ್ರಾಪ್ತಿಯಾಗುವುದಿಲ್ಲ. ಆತ್ಮ ಖ್ಯಾತಿಗಾಗಿ ನಿಷ್ಠಾಪೂರ್ವಕ ಸ್ವಲ್ಪ ಪ್ರಯತ್ನ ಮಾಡಿದರೂ ತನ್ನ ಅನಂತ ವೈಭವಶಾಲಿ ಆತ್ಮನನ್ನು ಲಭಿಸಿಕೊಳ್ಳಬಹುದು.

—ಏಲಾಚಾರ್ಯ ವಿದ್ಯಾನಂದ ಮುನಿ.



## ಸ್ವತಂತ್ರತೆಯು ಸ್ಥಾನ

ಹೇಗೆ ಸೂರ್ಯನ ಹಿಂದೆ ಪ್ರಕಾಶವು ಬರುತ್ತದೋ, ಮೇಘಗಳೊಂದಿಗೆ ವಿದ್ಯುತ್ ಸ್ಫುರಣವಾಗುತ್ತದೋ ಮತ್ತು ಜಲದೊಂದಿಗೆ ಶೀತಲತೆಯು ಬರುತ್ತದೋ, ಅದೇ ರೀತಿ ಸ್ವಾಧೀನತೆಯೊಂದಿಗೆ ಸಭ್ಯತೆ, ಸಂಸ್ಕೃತಿ, ಆತ್ಮಗೌರವ, ಶಕ್ತಿ ಮತ್ತು ಸರ್ವಗುಣ - ಸಂಪನ್ನತೆಯು ಸಮೂಹವು ಬರುತ್ತವೆ. ಶರೀರದಲ್ಲಿ ಯಾವಸ್ಥಾನವು ಪ್ರಾಣಕ್ಕಿದೆಯೋ, ಅದೇ ಸ್ಥಾನವು ಸಂಸಾರದಲ್ಲಿ ಸ್ವತಂತ್ರತೆಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಲೋಭಾದಿ ಅಂತರಂಗ ಕಷಾಯಗಳ ತ್ಯಾಗಸಹಿತ ಬಾಹ್ಯಾಭ್ಯಂತರ ಪರಿಗ್ರಹದಿಂದ ಮಮತ್ವಭಾವದ ತ್ಯಾಗವೇ ಆತ್ಮನನ್ನು ಪರಮಾತ್ಮನನ್ನಾಗಿ ಮಾಡುತ್ತದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



---

ಮೋಹರಹಿತ ಅಲ್ಪಜ್ಞಾನದಿಂದಲೂ ಮುಕ್ತಿಯು ಪ್ರಾಪ್ತವಾಗಬಲ್ಲದು.

—ಏಲಾಚಾರ್ಯ ವಿದ್ಯಾನಂದ ಮುನಿ.

ಯಾರು ಚಿಂತನೆಯ ಸಮುದ್ರವನ್ನು ಕುಡಿಯುತ್ತಾರೋ, ಸ್ವಾಧ್ಯಾಯ ಸುಧೆಯ ನಿರಂತರ ಆಸ್ವಾದನೆಯನ್ನು ಮಾಡುತ್ತಿರುತ್ತಾರೋ, ಸಂಯಮದಲ್ಲಿ ಸುಮೇರುವಿನಂತೆ ಅಚಲ - ಸ್ಥಿರರಾಗಿರುತ್ತಾರೋ, ಅವರು ಜ್ಞಾನ - ಪ್ರಸಾದದ ಅಧಿಕಾರಿಗಳಾಗುತ್ತಾರೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಸಮ್ಯಗ್ದರ್ಶನ, ಜ್ಞಾನ, ಚಾರಿತ್ರ್ಯ- ಇವೇ ಶಾಶ್ವತ ಸುಖದ ಮಾರ್ಗವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.

ವೀತರಾಗ - ವಾಣಿಯು ಯಾವೊಂದು ಭೇದ - ಭಾವವಿಲ್ಲದ ಸರ್ವರಿಗೂ ಮುಕ್ತವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.





ವಾಚನಕ್ಕಿಂತ ಪಾಚನವು ಶ್ರೇಷ್ಠವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ಧರ್ಮವು ವಸ್ತುವಿನ ಸ್ವಭಾವವಾಗಿದೆ. ಸಂಸಾರದಲ್ಲಿರುವ ಎಲ್ಲಾ ಆತ್ಮರೊಂದಿಗೆ ಸಮತೆ ಸ್ಥಾಪಿಸುವುದೇ ಧರ್ಮವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



ವಿನಯವು ಜ್ಞಾನದ ಆಭೂಷಣ ಮತ್ತು ಉನ್ನತಿಯ ಮಾರ್ಗದ ಅವಲಂಬನೆಯಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.

ಯಾರು ಸಮಯದ ಮೂಲ್ಯವನ್ನಿಡುತ್ತಾರೋ, ಸಮಯವು ಅವನ ಸಮ್ಮಾನವನ್ನು ಮಾಡುತ್ತದೆ, ಮತ್ತು ಯಾರು ಸಮಯವನ್ನು ಕಳಕೊಳ್ಳುತ್ತಾರೋ ಅವರು ಸಮಯದಲ್ಲಿ ಕಳಕೊಳ್ಳುತ್ತಾರೆ.

—ಏಲಾಚಾರ್ಯ ವಿದ್ಯಾನಂದ ಮುನಿ.





ಕ್ರೋಧ, ಮಾನ, ಮಾಯಾ ಮತ್ತು ಲೋಭಗಳೆಂಬ ಶೂದ್ರರ ತಿರಸ್ಕಾರವೇ ಆತ್ಮನ ನಿಜವಾದ ಆದರವಾಗಿದೆ.

—ಏಲಾಚಾರ್ಯ ವಿದ್ಯಾನಂದ ಮುನಿ.



6254



## ಸಮಾಜ ಬಾಂಧವರಲ್ಲಿ ವಿನಂತಿ

ಕನ್ನಡ ನಾಡಿನ ಮನೆ ಮನೆಗಳಲ್ಲಿ ಓಲೆಗರಿ ಗ್ರಂಥಗಳಿವೆ; ಜ್ಞಾನ ಭಂಡಾರವಿದೆ. ಆದರೆ ಇಂದು ಅವು ಓದುವವರಿಲ್ಲದೆ, ರಕ್ಷಿಸುವವರಿಲ್ಲದೆ. ಕ್ರಿಮಿ ಕೀಟಗಳ ಆಹಾರವಾಗುತ್ತಿವೆ. ಶ್ರೀಮತಿ ರಮಾರಾಣಿ ಜೈನ ಶೋಧ ಸಂಸ್ಥಾನವು ಇಂತಹ ಗ್ರಂಥಗಳನ್ನು ಸಂಗ್ರಹಿಸಿ, ಸಂರಕ್ಷಿಸಿ ಪ್ರಕಾಶಗೊಳಿಸುವ ಮಹಾಕಾರ್ಯವನ್ನು ಕೈಗೊಂಡಿದೆ, ಪ್ರಸಾರ ಮಾಡುತ್ತಿದೆ.

ಸಮಾಜ ಬಾಂಧವರು ತಮ್ಮಲ್ಲಿದ್ದ ಅಮೂಲ್ಯ ಗ್ರಂಥಗಳನ್ನು ಇಲ್ಲಿಗೆ ಕೊಟ್ಟು ಶಾಸ್ತ್ರೋದ್ಧಾರದ ಕಾರ್ಯದಲ್ಲಿ ಸಹಕರಿಸಬೇಕಾಗಿ ವಿನಂತಿ. ಅಪೇಕ್ಷಿಸಿದಲ್ಲಿ ಉಚಿತ ಮೂಲ್ಯ ಕೊಡಲಾಗುವುದು. ಕೂಡಲೇ ಬರೆಯಿರಿ.

ಅಧಿಷ್ಠಾತರು-

ಶ್ರೀಮತಿ ರಮಾರಾಣಿ ಜೈನ ಶೋಧ ಸಂಸ್ಥಾನ,
ಶ್ರೀ ದಿಗಂಬರ ಜೈನ ಮಠ,
ಅಂಚೆ: ಮೂಡುಬಿದಿರೆ 574227 ದ. ಕ.
(ಕರ್ನಾಟಕ ರಾಜ್ಯ)

**Parama Samrakshaka: Swasti Sri Charukeerthi Panditacharyavarya Swamiji, Shri Digamber Jain Matha, Moodbidri–574 227.**

Edited by: Prof. G. Brahmappa, M.A., Mysore; B. Chandrayya, Vidwan, Moodbidri; Published by: M. Adiraj, 'Vivekabhyudaya' Karyalaya, Shri Digamber Jain Matha, Moodbidri.

Printed by: M. Jayavarma Indra, Shri Padmamba Printers, Moodbidri, (D. K.)



ಪ. ಪೂ. ಏಲಾಚಾರ್ಯ ವಿದ್ಯಾನಂದ ಮುನಿಶ್ರೀಗಳು ಕೇಶಲೋಚನವನ್ನು ಆಗ್ರಾ (ಉತ್ತರ ಪ್ರದೇಶ)ದಲ್ಲಿ ಮಾಡುತ್ತಿರುವ ಒಂದು ದೃಶ್ಯ. ಅವರ ಸಾನ್ನಿಧ್ಯದಲ್ಲಿ ಆಗ್ರಾದ ಸುಪ್ರಸಿದ್ಧ ವಿದ್ವಾಂಸರಾದ ಡಾ। ಜಯಕಿಶನ್ ಪ್ರಸಾದರು ಕುಳಿತಿರುವುದನ್ನು ಮತ್ತು ಇತರರನ್ನು ಕಾಣಬಹುದು.



# CHARACTER IS GOD

"Those who believe in God, see Him in truth, feel Him in Ahimsa. Some others find Him in Patriotic spirit while others experience Him in 3 principal qualities of Soul i. e. Right Faith, Right Knowledge and Right Conduct.

All the above experiences are in fact the real face of God. All such person's are near to God.

In fact good conduct is God"

*H. H. Elacharya Vidyanand Muniji.*